ವಿಷಯಾನುಕ್ರಮಣಿಕೆ

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯಾ—೪೦

# ಕೂರ್ಮ ಪುರಾಣಂ

(ಕನ್ನಡ ಅನುವಾದ ಸಹಿತ)

ಸಂಚಿಕೆ ೩



ಅನುವಾದಕ:

ಆಸ್ಥಾನ ವಿದ್ವಾನ್, ಪಾಟೀಣಕರ ಚಂದ್ರಶೇಖರಭಟ್ಟ.

---

ಶ್ರೀ ವಿನಾಯಕ್ ಪ್ರಿಂಟಿಂಗ್ ವರ್ಕ್ಸ್,

ಮೈಸೂರು.

೧೯೪೭

# ಪ್ರಸ್ತಾವನೆ

ಮಹರ್ಷಿ ವೇದವ್ಯಾಸರಿಂದ ರಚಿತವಾದ ಕೂರ್ಮಪುರಾಣದ ಅನುವಾದ ರಚನೆಯ ಫಲವಾಗಿ ಅದರ ತೃತೀಯ ಸಂಚಿಕೆಯನ್ನು ಪೂರ್ಣಗೊಳಿಸಿ ವಾಚಕರ ಮುಂದಿರಿಸುವ ಸುಯೋಗವು ಕ್ಷಿಪ್ರದಲ್ಲಿ ಉಂಟಾದುದಕ್ಕೆ ತುಂಬಾ ಆನಂದಿಸುತ್ತೇನೆ. ಈ ಸಂಚಿಕೆಯು ವಿಷಯಗಳ ಸಂಘಟನೆಗೆ ಅನುರೂಪವಾಗಿ ಐವತ್ತನಾಲ್ಕನೆಯ ಅಧ್ಯಾಯದಿಂದ ಆರಂಭವಾಗಿ ಎಂಭತ್ತೆರಡನೆಯ ಅಧ್ಯಾಯದಿಂದ ಸಮಾಪ್ತಿ ಹೊಂದುವುದು.

ಈ ಸಂಚಿಕೆಯಲ್ಲಿ ಸೇರಿಕೊಂಡಿರುವ ಅಧ್ಯಾಯಗಳಲ್ಲಿ ಮೊದಲು ಈಶ್ವರಗೀತೆಯು ಪ್ರಾರಂಭವಾಗಿದೆ. ಸಾಮಾನ್ಯವಾಗಿ ತತ್ತ್ವಚಿಂತಕರ ಗೋಷ್ಠಿಗೆ ಭಗವದ್ಗೀತೆಯು ಅಪರಿಚಿತವಾದುದಲ್ಲ. ಅದರಂತೆ ಅನೇಕಾನೇಕ ಗೀತೆಗಳು ಪ್ರಚಾರದಲ್ಲಿವೆ. ಗೀತೆಯು ಮಾನವನ ಜೀವನದ ಉನ್ನತಿಯನ್ನು ಹೆಚ್ಚಿಸಿ ವಿವೇಕವನ್ನು ಬೋಧಿಸಿ ಮುಕ್ತಿಯನ್ನು ದೊರಕಿಸುವ ತತ್ತ್ವಗ್ರಂಥಗಳಲ್ಲಿ ಉತ್ತಮವಾದುದು ಎಂಬುದನ್ನು ಎಲ್ಲರೂ ಅರಿತಿರುವರು. ಆದುದರಿಂದ ಭಗವದ್ಗೀತೆಯನ್ನು "ಉಪನಿಷತ್ತು" ಎಂದೂ ಕರೆಯುವ ವಾಡಿಕೆಯುಂಟು. ಅಂತಹ ಗೀತಾಗ್ರಂಥಗಣದಲ್ಲಿ ಈಶ್ವರಗೀತೆಯು ಒಂದಾಗಿದೆ. ಭಗವದ್ಗೀತೆಯಲ್ಲಿ ಅರ್ಜುನನಿಗೆ ಶ್ರೀಕೃಷ್ಣನು ತತ್ತ್ವೋಪದೇಶವನ್ನು ಮಾಡಿದಂತೆ ಈಶ್ವರಗೀತೆಯಲ್ಲಿ ನಾರಾಯಣನೊಂದಿಗೆ ಶ್ರವಣಮಾಡುತ್ತಿದ್ದ ಮುನಿ ಜನರಿಗೆ ಮಹೇಶ್ವರನು ಸಾಕ್ಷಾತ್ತಾಗಿ ತತ್ತ್ವಗಳನ್ನು ಉಪದೇಶಿಸಿರುವನು. ತತ್ತ್ವೋಪ ದೇಶದ ಧ್ಯೇಯವು ಎಲ್ಲ ಗೀತೆಗಳಲ್ಲಿಯೂ ಒಂದಾಗಿದೆ. ಮಾರ್ಗಗಳು ಬೇರೆಯಾಗಿರ ಬಹುದು.

ಅಖಂಡ ಸಚ್ಚಿದಾನಂದಮೂರ್ತಿಯಾದ ಪರಮಾತ್ಮನು ಸತ್ತ್ವ, ರಜಸ್ಸು ತಮಸ್ಸುಗಳೆಂಬ ಗುಣಗಳ ಸಂಪರ್ಕದಿಂದ ಪ್ರಾಣಿಗಳ ಸುಕೃತ-ದುಷ್ಕೃತಕರ್ಮಾನು ರೂಪವಾಗಿ ವಿವಿಧ ನಿರ್ಮಾಣ ರಕ್ಷಣ ಸಂಹಾರಗಳನ್ನು ನಿರ್ವಹಿಸುತ್ತಿರುವನು. ಆಯಾಯ ಗುಣೋಪಾಧಿಯಿಂದ ವ್ಯಾಪಾರ ವಿಶೇಷವನ್ನು ನಿರ್ವಹಿಸುತ್ತಿರುವುದರಿಂದ ಮೂರ್ತಿಭೇದಕಲ್ಪನೆಯುಂಟಾಗಿದೆ. ಆದರೆ ಉಪಾಧಿಯಾದ ಗುಣಸಂಪರ್ಕ ಮತ್ತು ವ್ಯಾಪಾರಗಳು ವಾಸ್ತವಿಕವಲ್ಲದ್ದರಿಂದ ಮೂರ್ತಿಗಳಲ್ಲಿ ಭೇದವು ಪರಮಾರ್ಥವಲ್ಲ. ಆದರೆ ಈ ರೀತಿಯಾಗಿ ಅದ್ವಿತೀಯಾತ್ಮತತ್ತ್ವವನ್ನು ತಿಳಿಯಲು ಸೃಷ್ಟ್ಯಾದಿರಚನೆಯು ಸಾಧನವಾಗಿದೆ. ಕಲ್ಪಿತವಾದ ಯಾವ ಧರ್ಮವೂ ಇಲ್ಲಗೆ ಸರ್ವಧರ್ಮಾತೀತವಾದ

ತತ್ತ್ವವು ಜ್ಞಾನಗೋಚರವಾಗುವುದಿಲ್ಲ. ಹಾಗು ಸೃಷ್ಟ್ಯಾದಿ ವಿವಿಧ ಕಾರ್ಯಗಳಿಗೆ ಅನುರೂಪವಾದ ಸಗುಣಮೂರ್ತಿ ಭೇದಗಳ ಧ್ಯಾನವು ಚಿತ್ತಪ್ರಸಾದಕ್ಕೂ ತನ್ಮೂಲಕ ವಾದ ಸದ್ಗತಿಗೂ ಸೋಪಾನವಾಗಿದೆ—ಎಂಬುದು ಗೀತೋಪದೇಶದ ಸಾರಾಂಶವು.

ಇಂತಹ ತತ್ತ್ವೋಪದೇಶವನ್ನು ಇರಿಸಲು ಆಧಾರವಾದ ಚಿತ್ತವು ಸ್ಫಟಿಕ ಮಣಿಯಂತೆ ನಿರ್ಮಲವಾಗಿರಬೇಕು. ಇದನ್ನು ಸಂಸ್ಕರಿಸಲು ವರ್ಣ-ಆಶ್ರಮ ಧರ್ಮಗಳು ಧರ್ಮಶಾಸ್ತ್ರಗಳಲ್ಲಿ ವರ್ಣಿಸಲ್ಪಟ್ಟಿವೆ. ಜ್ಞಾನಾರ್ಜನೆ, ಕರ್ಮಾಚರಣೆ, ಲೋಕವ್ಯವಹಾರ ತ್ಯಾಗ ಮತ್ತು ಏಕಾಂತಜ್ಞಾನನಿಷ್ಠೆಗಳ ಪ್ರಧಾನತೆಯಿಂದ ವಿಹಿತವಾಗಿರುವ ನಾಲ್ಕು ಆಶ್ರಮಗಳಲ್ಲಿ ವಿರಕ್ತಿಪ್ರಧಾನವಾದ ಸಂನ್ಯಾಸಾಶ್ರಮವೇ ಕಡೆಯದಾಗಿರುವುದು ಲೋಕಾತೀತತತ್ತ್ವಾನುಭವದಿಂದ ಕೃತಕೃತ್ಯತೆಯುಂಟಾಗುವು ದೆಂಬುದಕ್ಕೆ ಸೂಚಕವಾಗಿದೆ. ಆದ್ದರಿಂದ ಚಿತ್ತಶುದ್ಧಿ-ವೈರಾಗ್ಯಗಳಿಗೆ ಸಾಧಕವಾದ ಧರ್ಮಗಳು ಪುರಾಣಗಳಲ್ಲಿ ವರ್ಣಿಸಲ್ಪಟ್ಟಿವೆ. ಹೀಗೆ ಬಹಿರಂಗಸಾಧನವಾದ ಕರ್ಮ ಯೋಗವೂ, ಅಂತರಂಗಸಾಧನವಾದ ಶಮ-ದಮಾದಿಸಂಪತ್ತಿಯೂ ಉಪನಿಷತ್ತುಗಳಲ್ಲಿ ವರ್ಣಿಸಲ್ಪಟ್ಟಿವೆ. ಅದನ್ನು ಅನುಸರಿಸಿ ಈ ಸಂಚಿಕೆಯಲ್ಲಿ ಕಥೆಯ ಭಾಗದಲ್ಲಿರುವ ವ್ಯಾಸಗೀತೆಯಲ್ಲಿ ವ್ಯಾಸಮುನಿಯಿಂದ ದಾನ ಮುಂತಾದ ಧರ್ಮಗಳು ಉಪದೇಶಿಸ ಲ್ಪಟ್ಟಿವೆ. ತತ್ತ್ವಜ್ಞಾನವುಂಟಾಗದೆ ಜನ್ಮ-ಮರಣ ಪ್ರವಾಹಕ್ಕೆ ಸಿಕ್ಕಿದ ಸಾಧುಗಳ ಮರಣಾನಂತರದಲ್ಲಿ ಮುಂದೆ ಲಭಿಸಬೇಕಾದ ಉತ್ತಮಲೋಕಪ್ರಾಪ್ತಿಗಾಗಿ ಪುತ್ರನು ಮಾಡಬೇಕಾದ ಶ್ರಾದ್ಧಾದಿಕರ್ಮ, ಅದರ ವಿಧಾನ, ಅದರಿಂದ ಪಿತೃಗಳು ತೃಪ್ತಿ ಹೊಂದುವುದು-ಮುಂತಾದ ವಿವಿಧ ವಿಷಯಗಳು ಈ ಸಂಚಿಕೆಯ ಅಧ್ಯಾಯಗಳಲ್ಲಿ ತುಂಬಿಕೊಂಡಿವೆ.

ಆಳುವ ಮಹಾಸ್ವಾಮಿಯವರು **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್** ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರ ಆಜ್ಞೆಯಂತೆ ಸಂಸ್ಕೃತದಲ್ಲಿದ್ದ ಈ ಗ್ರಂಥವನ್ನು ಕನ್ನಡಿಗರ ತಿಳಿವಳಿಕೆಗಾಗಿ ಕನ್ನಡಕ್ಕೆ ಪರಿವರ್ತನಮಾಡಿರುತ್ತೇನೆ. ಇದು ಉತ್ತಮರೀತಿಯಿಂದ ಅಂದವಾಗಿರುವಂತೆ ಮುದ್ರಿಸಲ್ಪಟ್ಟಿದೆ. ಈ ರೀತಿ ಈ ಗ್ರಂಥವು ಪ್ರಕಾಶಕ್ಕೆ ಬಂದು ಸಜ್ಜನರ ಸೇವೆ ಮಾಡಲು ಅವಕಾಶಮಾಡಿಕೊಟ್ಟ ಮಹನೀಯರಿಗೆ ತುಂಬಾ ಕೃತಜ್ಞನಾಗಿದ್ದೇನೆ.

ಅನುವಾದಕ,
**ಪಾಟೆಣಕರ ಚಂದ್ರಶೇಖರಭಟ್ಟ,**
ಆಸ್ಥಾನ ವಿದ್ವಾನ್.

ಮೈಸೂರು,
ತಾ॥ ೧-೪-೧೯೪೭.

# ವಿ ಷ ಯಾ ನು ಕ್ರ ಮ ಣಿ ಕೆ.

---

ಶ್ರೀಃ

# ಕೂರ್ಮಪುರಾಣಂ



## ಚತುಷ್ಪಂಚಾಶತ್ತಮೋಽಧ್ಯಾಯಃ.

**ಋಷಯ ಊಚುಃ :—**

ಭವತಾ ಕಥಿತಃ ಸಮ್ಯಕ್ ಸರ್ಗಃ ಸ್ವಾಯಂಭುವಃ ಪ್ರಭೋ ।
ಬ್ರಹ್ಮಾಂಡಸ್ಯಾದಿವಿಸ್ತಾರೋ ಮನ್ವಂತರವಿನಿಶ್ಚಯಃ ॥ ೧ ॥

ತತ್ರೇಶ್ವರೇಶ್ವರೋ ದೇವೋ ವರ್ಣಿಭಿರ್ಧರ್ಮತತ್ಪರೈಃ ।
ಜ್ಞಾನಯೋಗರತೈರ್ನಿತ್ಯಮಾರಾಧ್ಯಃ ಕಥಿತಸ್ತ್ವಯಾ ॥ ೨ ॥

---

## ಐವತ್ತನಾಲ್ಕನೆಯ ಅಧ್ಯಾಯವು.

೧. ಮುನಿಗಳು ಹೀಗೆಂದು ಹೇಳಿದರು :— ಪ್ರಭುವಾದ ಸೂತಮುನಿಯೇ ! ನಿನ್ನಿಂದ ಸ್ವಾಯಂಭುವ ಮನುವಿನ ಸರ್ಗವೂ, ಬ್ರಹ್ಮಾಂಡದ ಆದಿಯಿಂದ ಇರುವ ವಿಸ್ತಾರವೂ, ಮನ್ವಂತರಗಳ ಕ್ರಮದ ನಿಶ್ಚಯವೂ ಚೆನ್ನಾಗಿ ವರ್ಣಿಸಲ್ಪಟ್ಟಿದೆ.

೨. ಅದರಲ್ಲಿ ಧರ್ಮಾನುಷ್ಠಾನಪರರೂ ಜ್ಞಾನಯೋಗ ನಿಷ್ಠರೂ ಆದ ವರ್ಣಿಗಳಿಂದ ಸರ್ವೇಶ್ವರನಾದ ದೇವನು ಆರಾಧಿಸಲ್ಪಡುವನೆಂದು ನಿನ್ನಿಂದ ಹೇಳಲ್ಪಟ್ಟಿದೆ.

ತತ್ತ್ವಂ ಚಾಶೇಷಸಂಸಾರದುಃಖನಾಶಮನುತ್ತಮಮ್ ।
ಜ್ಞಾನಂ ಬ್ರಹ್ಮೈಕವಿಷಯಂ ಕೇನ ಪಶ್ಯೇಮ ತತ್ಪರಮ್ ॥ ೩ ॥

ತ್ವಂ ಹಿ ನಾರಾಯಣಃ ಸಾಕ್ಷಾತ್ ಕೃಷ್ಣದ್ವೈಪಾಯನಾತ್ಪ್ರಭೋ ।
ಅವಾಪ್ತಾಖಿಲವಿಜ್ಞಾನಸ್ತತ್ತ್ವಾಂ ಪೃಚ್ಛಾಮಹೇ ಪುನಃ ॥ ೪ ॥

ಶ್ರುತ್ವಾ ಮುನೀನಾಂ ತದ್ವಾಕ್ಯಂ ಕೃಷ್ಣದ್ವೈಪಾಯನಾತ್ಪ್ರಭುಃ ।
ಸೂತಃ ಪೌರಾಣಿಕಃ ಶ್ರುತ್ವಾ ಭಾಷಿತುಂ ಹ್ಯುಪಚಕ್ರಮೇ ॥ ೫ ॥

ತಥಾಸ್ಮಿನ್ನಂತರೇ ವ್ಯಾಸಃ ಕೃಷ್ಣದ್ವೈಪಾಯನಃ ಸ್ವಯಮ್ ।
ಆಜಗಾಮ ಮುನಿಶ್ರೇಷ್ಠಾ ಯತ್ರ ಸತ್ರಂ ಸಮಾಸತೇ ॥ ೬ ॥

ತಂ ದೃಷ್ಟ್ವಾ ವೇದವಿದ್ವಾಂಸಂ ಕಾಲಮೇಘಸಮದ್ಯುತಿಮ್ ।
ವ್ಯಾಸಂ ಕಮಲಪತ್ರಾಕ್ಷಂ ಪ್ರಣೇಮುರ್ದ್ವಿಜಪುಂಗವಾಃ ॥ ೭ ॥

---

೩. ಅಶೇಷವಾದ ಸಂಸಾರದುಃಖಗಳನ್ನು ನಾಶಮಾಡುವುದೂ, ಸರ್ವೋತ್ತಮವೂ ಆದ ಬ್ರಹ್ಮತತ್ವವನ್ನು ಗೋಚರಿಸುವ ಜ್ಞಾನವು ನಿನ್ನಿಂದ ಹೇಳಲ್ಪಟ್ಟಿದೆ. ಆ ಮಾರ್ಗದಿಂದ ನಾವು ಆ ಪರಮ ತತ್ವವನ್ನು ನೋಡುತ್ತೇವೆ.

೪. ಪ್ರಭುವೇ ! ನೀನು ಪ್ರತ್ಯಕ್ಷವಾಗಿ ನಾರಾಯಣರೂಪನಾಗಿದ್ದೀಯೆ. ಮತ್ತು ಕೃಷ್ಣದ್ವೈಪಾಯನ ಮುನಿಯಿಂದ ಸಂಪೂರ್ಣ ವಿಜ್ಞಾನವನ್ನು ಹೊಂದಿರುತ್ತೀಯೆ. ಆದುದರಿಂದ ನಾವು ನಿನ್ನನ್ನು ಪ್ರಶ್ನಿಸುತ್ತಿದ್ದೇವೆ.

೫. ಹೀಗೆ ಮುನಿಗಳು ಆಡಿದ ವಚನವನ್ನು ಕೇಳಿ ಸರ್ವ ಸಮರ್ಥನೂ ಪುರಾಣಜ್ಞನೂ ಆದ ಸೂತಮಹಾಮುನಿಯು ಮಾತನಾಡಲು ಉಪಕ್ರಮಿಸಿದನು.

೬. ಈ ಸಮಯದಲ್ಲಿ ಮುನಿಶ್ರೇಷ್ಠರೆಲ್ಲರೂ ಸೇರಿ ಸತ್ರಯಾಗವನ್ನು ಆಚರಿಸುತ್ತಿದ್ದ ಸ್ಥಾನಕ್ಕೆ ಕೃಷ್ಣದ್ವೈಪಾಯನ ಮುನಿಯು ತಾನಾಗಿ ಬಂದನು.

೭. ಆಗ ಅಲ್ಲಲ್ಲಿದ್ದ ದ್ವಿಜಶ್ರೇಷ್ಠರು, ವೇದಗಳಲ್ಲಿ ವಿದ್ವಾಂಸನೂ, ವರ್ಷಾಕಾಲದ ಮೇಘಕ್ಕೆ ಸಮಾನವಾದ ಕಾಂತಿಯುಳ್ಳವನೂ, ಕಮಲದ ದಳದಂತೆ ಕಣ್ಣುಳ್ಳವನೂ ಆದ ವ್ಯಾಸಮುನಿಯನ್ನು ನೋಡಿ ನಮಸ್ಕಾರಮಾಡಿದರು.

ಪಪಾತ ದಂಡವದ್ಭೂಮೌ ದೃಷ್ಟ್ವಾಸೌ ಲೋಮಹರ್ಷಣಃ ।
ಪ್ರಣಮ್ಯ ಶಿರಸಾ ಭೂಮೌ ಪ್ರಾಂಜಲಿರ್ವಶಗೋಽಭವತ್ ॥ ೮ ॥

ಪೃಷ್ಟಾಸ್ತೇಽನಾಮಯಂ ವಿಪ್ರಾಃ ಶೌನಕಾದ್ಯಾ ಮಹಾಮುನಿಮ್ ।
ಸಮಾಸ್ತೃತ್ಯಾಸನಂ ತಸ್ಮೈ ತದ್ಯೋಗ್ಯಂ ಸಮಕಲ್ಪಯನ್ ॥ ೯ ॥

ಅಥೈತಾನಬ್ರವೀದ್ವಾಕ್ಯಂ ಪರಾಶರಸುತಃ ಪ್ರಭುಃ ।
ಕಚ್ಚಿನ್ನ ಹಾನಿಸ್ತಪಸಃ ಸ್ವಾಧ್ಯಾಯಸ್ಯ ಶ್ರುತಸ್ಯ ಚ ॥ ೧೦ ॥

ತತಶ್ಚ ಸೂತಃ ಸ್ವಗುರುಂ ಪ್ರಣಮ್ಯಾಹ ಮಹಾಮುನಿಮ್ ।
ಜ್ಞಾನಂ ತದ್ಬ್ರಹ್ಮವಿಷಯಂ ಮುನೀನಾಂ ವಕ್ತುಮರ್ಹಸಿ ॥ ೧೧ ॥

---

೮. ಅದೇ ಸಮಯದಲ್ಲಿ ಈ ಲೋಮಹರ್ಷಣ ಮುನಿಯು ದಂಡಾಕಾರವಾಗಿ ಭೂಮಿಯಲ್ಲಿ ನಮಸ್ಕರಿಸಿ ಮತ್ತೆ ಮುನಿಯನ್ನು ನೋಡಿ ಶಿರವನ್ನು ನೆಲಕ್ಕೆ ಬಗ್ಗಿಸಿ ನಮಸ್ಕಾರಮಾಡಿ ಬದ್ಧಾಂಜಲಿಯೂ, ಅವನಿಗೆ ಅಧೀನನೂ ಆಗಿ ನಿಂತನು.

೯. ತರುವಾಯ ಶೌನಕ ಮುಂತಾದ ಸಮಸ್ತ ವಿಪ್ರರೂ ಕುಶಲ ಸಮಾಚಾರವನ್ನು ಪ್ರಶ್ನಿಸಲ್ಪಟ್ಟವರಾಗಿ ಮುನೀಶ್ವರನ ಸಮೀಪಕ್ಕೆ ಬಂದು ಅವನಿಗೆ ಯೋಗ್ಯವಾದ ಆಸನವನ್ನು ಕಲ್ಪಿಸಿದರು.

೧೦. ಅನಂತರದಲ್ಲಿ ದಕ್ಷನೂ, ಪರಾಶರ ಪುತ್ರನೂ ಆದ ವ್ಯಾಸಮುನಿಯು ಮುನಿಜನರನ್ನು ನೋಡಿ ಈ ವಚನವನ್ನು ಹೇಳಿದನು. ನಿಮ್ಮ ತಪಸ್ಸು, ವೇದಾಧ್ಯಯನ ಮತ್ತು ಶಾಸ್ತ್ರ ಚರ್ಚೆಗಳಿಗೆ ಯಾವ ವಿಧದಿಂದಲೂ ಹಾನಿಯಿಲ್ಲವಷ್ಟೆ ?

೧೧. ತರುವಾಯ ಸೂತಮುನಿಯು ತನ್ನ ಗುರುವಾದ ವೇದವ್ಯಾಸ ಮಹಾಮುನಿಯನ್ನು ನಮಸ್ಕರಿಸಿ ಹೀಗೆಂದು ಹೇಳಿದನು :—ಗುರುವೇ ! ಪರಬ್ರಹ್ಮವಿಷಯವಾದ ಧ್ಯಾನವನ್ನು ಈ ಮುನಿಜನರಿಗೆ ಉಪದೇಶಿಸಲು ಅರ್ಹನಾಗಿದ್ದೀಯೆ.

ಇಮೇ ಹಿ ಮುನಯಃ ಶಾಂತಾಸ್ತಾಪಸಾ ಧರ್ಮತತ್ಪರಾಃ ।
ಶುಶ್ರೂಷಾ ಜಾಯತೇ ಚೈಷಾಂ ವಕ್ತುಮರ್ಹಸಿ ತತ್ತ್ವತಃ ॥ ೧೨ ॥

ಜ್ಞಾನಂ ವಿಮುಕ್ತಿದಂ ದಿವ್ಯಂ ಯನ್ಮೇ ಸಾಕ್ಷಾತ್ತ್ವಯೋದಿತಮ್ ।
ಮುನೀನಾಂ ವ್ಯಾಹೃತಂ ಪೂರ್ವಂ ವಿಷ್ಣುನಾ ಕೂರ್ಮರೂಪಿಣಾ ॥ ೧೩ ॥

ಶ್ರುತ್ವಾ ಸೂತಸ್ಯ ವಚನಂ ಮುನಿಃ ಸತ್ಯವತೀಸುತಃ ।
ಪ್ರಣಮ್ಯ ಶಿರಸಾ ರುದ್ರಂ ವಚಃ ಪ್ರಾಹ ಸುಖಾವಹಮ್ ॥ ೧೪ ॥

ವ್ಯಾಸ ಉವಾಚ :—

ವಕ್ಷ್ಯೇ ದೇವೋ ಮಹಾದೇವಃ ಪೃಷ್ಟೋ ಯೋಗೀಶ್ವರೈಃ ಪುರಾ ।
ಸನತ್ಕುಮಾರಪ್ರಮುಖೈಃ ಸ ಸ್ವಯಂ ಸಮಭಾಷತ ॥ ೧೫ ॥

---

೧೨. ಈ ಮುನಿಗಳು ಶಾಂತರೂ, ತಪೋನಿಷ್ಠರೂ, ಧರ್ಮಾನುಷ್ಠಾನಪರರೂ ಆಗಿದ್ದಾರೆ. ಇವರಿಗೆ ಜ್ಞಾನಮಾರ್ಗವನ್ನು ಕೇಳಬೇಕೆಂಬ ಕುತೂಹಲವಿರುವುದು. ಇವರಿಗೆ ತತ್ತ್ವಾಂಶವನ್ನು ಹೇಳಲು ಅರ್ಹನಾಗಿದ್ದೀಯೆ.

೧೩. ಪೂರ್ವದಲ್ಲಿ ಕೂರ್ಮಾವತಾರವನ್ನು ಮಾಡಿದ ಮಹಾವಿಷ್ಣುವಿನಿಂದ ಮುನಿಗಳಿಗೆ ಉಪದೇಶಿಸಲ್ಪಟ್ಟಿರುವುದೂ, ನಿನ್ನಿಂದ ನನಗೆ ಸಾಕ್ಷಾತ್ತಾಗಿ ಉಪದೇಶಿಸಲ್ಪಟ್ಟಿರುವುದೂ ಆದ ಮೋಕ್ಷಸಾಧನವಾದ ದಿವ್ಯಜ್ಞಾನವನ್ನು ಇವರಿಗೆ ಉಪದೇಶಿಸು.

೧೪. ಆಗ ಸತ್ಯವತೀಕುಮಾರನಾದ ವ್ಯಾಸಮುನಿಯು ಸೂತಮಹರ್ಷಿಯ ವಚನವನ್ನು ಕೇಳಿ ಶಿರಸ್ಸಿನಿಂದ ರುದ್ರದೇವನನ್ನು ನಮಸ್ಕರಿಸಿ ಸುಖಪರವಾದ ವಚನವನ್ನು ಹೇಳಿದನು.

೧೫. ವ್ಯಾಸಮುನಿಯು ಹೀಗೆಂದು ಹೇಳಿದನು :— ಪೂರ್ವದಲ್ಲಿ ಸನತ್ಕುಮಾರನೇ ಮುಂತಾದ ಯೋಗೀಶ್ವರರಿಂದ ಪ್ರಶ್ನಿಸಲ್ಪಟ್ಟ ಮಹಾದೇವಸ್ವಾಮಿಯು ತಾನಾಗಿ ಅವರಿಗೆ ಉಪದೇಶಿಸಿದ ಜ್ಞಾನಯೋಗವನ್ನು ನಾನು ಹೇಳುವೆನು.

ಸನತ್ಕುಮಾರಃ ಸನಕಸ್ತಥೈವ ಚ ಸನಂದನಃ ।
ಅಂಗಿರಾ ರುದ್ರಸಹಿತೋ ಭೃಗುಃ ಪರಮಧರ್ಮವಿತ್ ॥ ೧೬ ॥

ಕಣಾದಃ ಕಪಿಲೋ ಗರ್ಗೋ ವಾಮದೇವೋ ಮಹಾಮುನಿಃ ।
ಶುಕ್ರೋ ವಸಿಷ್ಠೋ ಭಗವಾನ್ ಸರ್ವೇ ಸಂಯತಮಾನಸಾಃ ॥ ೧೭ ॥

ಪರಸ್ಪರಂ ವಿಚಾರ್ಯೈತೇ ಸಂಯಮಾವಿಷ್ಟಚೇತಸಃ ।
ತಪ್ತವಂತಸ್ತಪೋ ಘೋರಂ ಪುಣ್ಯೇ ಬದರಿಕಾಶ್ರಮೇ ॥ ೧೮ ॥

ಅಪಶ್ಯಂಸ್ತೇ ಮಹಾಯೋಗಮೃಷಿಧರ್ಮಸುತಂ ಮುನಿಮ್ ।
ನಾರಾಯಣಮನಾದ್ಯಂತಂ ನರೇಣ ಸಹಿತಂ ತದಾ ॥ ೧೯ ॥

---

೧೬. ಹಾಗೆ ದಿವ್ಯಜ್ಞಾನದ ಜಿಜ್ಞಾಸೆಯಿಂದ ಮಹಾದೇವನನ್ನು ಪ್ರಶ್ನಿಸಿದ ಯೋಗೀಶ್ವರರಲ್ಲಿ ಪರಮಧಾರ್ಮಿಕನಾದ ಸನತ್ಕುಮಾರ, ಸನಕ, ಸನಂದನ, ಅಂಗಿರ, ರುದ್ರ, ಭೃಗು ಮುಂತಾದವರು ಕೆಲವರಿರುವರು.

೧೭. ಮತ್ತು ಕಣಾದ, ಕಪಿಲ, ಗರ್ಗ, ವಾಮದೇವ, ಶುಕ್ರ, ವಸಿಷ್ಠ ಮುಂತಾದ ಪೂಜ್ಯರೂ, ಮಹಾಮುನಿಗಳೂ, ಜಯಿಸಲ್ಪಟ್ಟ ಮಾನಸವುಳ್ಳವರೂ ಆದ ಕೆಲವರು ಪ್ರಶ್ನಿಸಿದರು.

೧೮. ಪೂರ್ವದಲ್ಲಿ ಈ ಮಹಾತ್ಮರು ನಿಗ್ರಹದಿಂದ ವಶೀಕರಿಸಲ್ಪಟ್ಟ ಮಾನಸ ವುಳ್ಳವರಾಗಿ ಅನ್ಯೋನ್ಯವಾಗಿ ಬ್ರಹ್ಮತತ್ವವನ್ನು ವಿಮರ್ಶೆಮಾಡಿ ಪವಿತ್ರವಾದ ಬದರಿಕಾಶ್ರಮದಲ್ಲಿ ಉಗ್ರವಾದ ತಪಸ್ಸನ್ನು ಆಚರಿಸಿದರು.

೧೯. ಆಗ ಆ ಮಹಾಯೋಗಿಗಳು, ಯೋಗೇಶ್ವರನೂ ಋಷಿಗಳ ಧರ್ಮ ಗಳನ್ನು ನಿರ್ಮಿಸಿದವನೂ, ಆದ್ಯಂತವರ್ಜಿತನೂ ಮತ್ತು ನರ ಎಂಬ ಮುನಿಯಿಂದ ಸಹಿತನೂ ಆದ ನಾರಾಯಣ ಮುನಿಯನ್ನು ಸಾಕ್ಷಾತ್ಕರಿಸಿದರು.

ಸಂಸ್ತೂಯ ವಿವಿಧೈಃ ಸ್ತೋತ್ರೈಃ ಸರ್ವವೇದಸಮುದ್ಭವೈಃ ।
ಪ್ರಣೇಮುರ್ಭಕ್ತಿಸಂಯುಕ್ತಾ ಯೋಗಿನೋ ಯೋಗವಿತ್ತಮಮ್॥೨೦॥

ವಿಜ್ಞಾಯ ವಾಂಛಿತಂ ತೇಷಾಂ ಭಗವಾನಪಿ ಸರ್ವವಿತ್ ।
ಪ್ರಾಹ ಗಂಭೀರಯಾ ವಾಚಾ ಕಿಮರ್ಥಂ ತಪ್ಯತೇ ತಪಃ ॥ ೨೧ ॥

ಅಬ್ರುವನ್ ಹೃಷ್ಟಮನಸೋ ವಿಶ್ವಾತ್ಮಾನಂ ಸನಾತನಮ್ ।
ಸಾಕ್ಷಾನ್ನಾರಾಯಣಂ ದೇವಮಾಗತಂ ಸಿದ್ಧಿಸೂಚಕಮ್ ॥ ೨೨ ॥

ವಯಂ ಸಂಯಮಮಾಪನ್ನಾಃ ಸರ್ವೇ ವೈ ಬ್ರಹ್ಮವಾದಿನಃ ।
ಭವಂತಮೇಕಂ ಶರಣಂ ಪ್ರಪನ್ನಾಃ ಪುರುಷೋತ್ತಮಮ್ ॥ ೨೩ ॥

---

೨೦. ಆಗ ಆ ಯೋಗೇಶ್ವರರ ಇಷ್ಟಾರ್ಥವನ್ನು ತಿಳಿದ ಸರ್ವಜ್ಞನೂ, ಪೂಜ್ಯನೂ ಆದ ನಾರಾಯಣಮುನಿಯು ಮಹರ್ಷಿಗಳನ್ನು ಕುರಿತು ನೀವು ಏಕೆ ಉಗ್ರವಾದ ತಪಸ್ಸನ್ನು ಕೈಗೊಂಡಿರುವಿರಿ, ಎಂದು ಗಂಭೀರವಾದ ಮಾತಿನಿಂದ ಪ್ರಶ್ನಿಸಿದನು.

೨೧. ಮತ್ತು ಆ ಯೋಗಿಗಳು ಭಕ್ತಿಯಿಂದ ಕೂಡಿದವರಾಗಿ ಎಲ್ಲಾ ವೇದ ಗಳಲ್ಲಿ ಹುಟ್ಟಿದ ವಿವಿಧವಾದ ಸ್ತೋತ್ರಗಳಿಂದ ಸ್ತುತಿಸಿ ಯೋಗಜ್ಞರಲ್ಲಿ ಅಗ್ರಗಣ್ಯನಾದ ನಾರಾಯಣನನ್ನು ನಮಸ್ಕರಿಸಿದರು.

೨೨. ಆಗ ಆ ಯೋಗಿಗಳು ವಿಶ್ವರೂಪಿಯೂ, ಅನಾದಿಯೂ ಆದ ಶ್ರೀಮನ್ ನಾರಾಯಣಸ್ವಾಮಿಯೇ ನಮಗೆ ಸಿದ್ಧಿಯನ್ನು ಸೂಚಿಸಲು ಪ್ರತ್ಯಕ್ಷವಾಗಿ ಬಂದಿರುವ ನೆಂದು ಭಾವಿಸಿ ಸಂತುಷ್ಟವಾದ ಮಾನಸವುಳ್ಳವರಾಗಿ ಹೀಗೆ ಹೇಳಿದರು.

೨೩. ಬ್ರಹ್ಮವಾದಿಗಳಾದ ನಾವೆಲ್ಲರೂ ನಿಯಮವನ್ನು ಹೊಂದಿದವರಾಗಿ ಪುರುಷೋತ್ತಮನಾದ ನಿನ್ನನ್ನು ಒಬ್ಬನನ್ನೇ ಶರಣಹೊಂದಿರುವೆವು.

ತ್ವಂ ವೇತ್ಸಿ ಪರಮಂ ಗುಹ್ಯಂ ಸರ್ವಂ ತು ಭಗವಾನೃಷಿಃ ।
ನಾರಾಯಣಃ ಸ್ವಯಂ ಸಾಕ್ಷಾತ್ ಪುರಾಣೋಽವ್ಯಕ್ತಪೂರುಷಃ ॥ ೨೪ ॥

ನ ಹ್ಯನ್ಯೋ ವಿದ್ಯತೇ ವೇತ್ತಾ ತ್ವಾಮೃತೇ ಪರಮೇಶ್ವರಮ್ ।
ಸ ತ್ವಮಸ್ಮಾಕಮಚಲಂ ಸಂಶಯಂ ಛೇತ್ತುಮರ್ಹಸಿ ॥ ೨೫ ॥

ಕಿಂ ಕಾರಣಮಿದಂ ಕೃತ್ಸ್ನಂ ಕೋ ನು ಸಂಸರತೇ ಸದಾ ।
ಕಶ್ಚಿದಾತ್ಮಾ ಚ ಕಾ ಮುಕ್ತಿಃ ಸಂಸಾರಃ ಕಿಂನಿಮಿತ್ತಕಃ ॥ ೨೬ ॥

ಕಃ ಸಂಸಾರ ಇತೀಶಾನಃ ಕೋ ವಾ ಸರ್ವಂ ಪ್ರಪಶ್ಯತಿ ।
ಕಿಂ ತತ್ಪರತರಂ ಬ್ರಹ್ಮ ಸರ್ವಂ ನೋ ವಕ್ತುಮರ್ಹಸಿ ॥ ೨೭ ॥

---

೨೪. ಭಗವಂತನೂ ಮಹರ್ಷಿಯೂ ಆದ ನೀನು ರಹಸ್ಯವಾದ ಸರ್ವ ಉತ್ತಮ ತತ್ವಗಳನ್ನು ತಿಳಿದಿದ್ದೀಯೆ. ನಾರಾಯಣಮುನಿಯೂ ಅತೀಂದ್ರಿಯನೂ, ಪುರಾಣ ಪುರುಷನೂ ಆದ ಸಾಕ್ಷಾತ್ತಾಗಿ ಶ್ರೀಮನ್ನಾರಾಯಣನಾಗಿರುವನು.

೨೫. ಪರಮೇಶ್ವರನಾದ ನಿನ್ನನ್ನು ಬಿಟ್ಟು ಇದನ್ನು ತಿಳಿದವನು ಮತ್ತಾರೂ ಇಲ್ಲ. ಆ ನೀನು ನಮಗೆ ಸ್ಥಿರವಾದ ಸಂಶಯವನ್ನು ಹೋಗಲಾಡಿಸಲು ಅರ್ಹನಾಗಿದ್ದೀಯೆ.

೨೬. ಈ ಸಮಸ್ತ ಪ್ರಪಂಚವೂ ಯಾವ ಕಾರಣದಿಂದ ಜನಿಸಿದೆ ? ಯಾವಾಗಲೂ ಸಂಸಾರವನ್ನು ಅನುಭವಿಸುವ ಆತ್ಮನು ಯಾರು ? ಪರಮಾತ್ಮನು ಯಾರು ? ಮುಕ್ತಿ ಎಂಬುದಾವುದು ? ಮತ್ತು ಈ ಸಂಸಾರವು ಯಾವ ನಿಮಿತ್ತದಿಂದ ಹುಟ್ಟುವುದು ?

೨೭. ಈ ಸಂಸಾರಕ್ಕೆ ನಿಯಾಮಕನು ಯಾರು ? ಸಮಸ್ತ ವಸ್ತುವನ್ನೂ ಸಾಕ್ಷಾತ್ಕರಿಸುವ ಸಾಕ್ಷಿಯು ಯಾರು ? ಆ ಪರಬ್ರಹ್ಮವಸ್ತುವು ಯಾವುದು ? ನೀನು ಇದೆಲ್ಲವನ್ನೂ ಹೇಳಲು ಅರ್ಹನಾಗಿದ್ದೀಯೆ.

ಏವಮುಕ್ತ್ವಾ ತು ಮುನಯಃ ಪ್ರಾಪಶ್ಯನ್ ಪುರುಷೋತ್ತಮಮ್ ।
ವಿಹಾಯ ತಾಪಸಂ ವೇಷಂ ಸಂಸ್ಥಿತಂ ಸ್ವೇನ ತೇಜಸಾ ॥ ೨೮ ॥

ವಿಭ್ರಾಜಮಾನಂ ವಿಮಲಂ ಪ್ರಭಾಮಂಡಲಮಂಡಿತಮ್ ।
ಶ್ರೀವತ್ಸವಕ್ಷಸಂ ದೇವಂ ತಪ್ತಜಾಂಬೂನದಪ್ರಭಮ್ ॥ ೨೯ ॥

ಶಂಖಚಕ್ರಗದಾಪಾಣಿಂ ಶಾರ್ಙ್ಗಹಸ್ತಂ ಶ್ರಿಯಾ ವೃತಮ್ ।
ನ ದೃಷ್ಟಸ್ತತ್ಕ್ಷಣಾದೇವ ನರಸ್ತಸ್ಯೈವ ತೇಜಸಾ ॥ ೩೦ ॥

ತದಂತರೇ ಮಹಾದೇವಃ ಶಶಾಂಕಾಂಕಿತಶೇಖರಃ ।
ಪ್ರಸಾದಾಭಿಮುಖೋ ರುದ್ರಃ ಪ್ರಾದುರಾಸೀನ್ಮಹೇಶ್ವರಃ ॥ ೩೧ ॥

---

೨೮. ಮಹರ್ಷಿಗಳು ಹೀಗೆಂದು ಹೇಳಿ ತಪಸ್ವಿವೇಷವನ್ನು ಬಿಟ್ಟು ತನ್ನ ನೈಜ ತೇಜಸ್ಸಿನಿಂದ ಮುಂಭಾಗದಲ್ಲಿರುವ ಪುರುಷೋತ್ತಮನನ್ನು ನೋಡಿದರು.

೨೯. ಆ ಪುರುಷೋತ್ತಮನು ಮಂಡಲಾಕಾರವಾದ ಪ್ರಭೆಯಿಂದ ಅಲಂಕರಿಸಲ್ಪಟ್ಟವನೂ, ಶ್ರೀವತ್ಸಲಾಂಛನದಿಂದ ಕೂಡಿದ ಹೃದಯವುಳ್ಳವನೂ, ತಪ್ತವಾದ ಸುವರ್ಣದಂತೆ ಕಾಂತಿಯುಳ್ಳವನೂ, ನಿರ್ಮಲನೂ ಆಗಿ ಪ್ರಕಾಶಿಸುತ್ತಿದ್ದನು.

೩೦. ಮತ್ತು ಕೈಗಳಲ್ಲಿ ಶಂಖ, ಚಕ್ರ, ಗದೆ, ಶಾರ್ಙ್ಗಾಯುಧವನ್ನು ಧರಿಸಿದವನೂ, ಕಾಂತಿಯಿಂದ ರಾರಾಜಿಸುವವನೂ ಆಗಿದ್ದನು. ಆ ನಿಮಿಷದಲ್ಲಿ ನಾರಾಯಣನ ತೇಜೋವಿಶೇಷದಿಂದ ನರಮುನಿಯು ಕಾಣಿಸಲಿಲ್ಲ.

೩೧. ಆ ಸಮಯದಲ್ಲಿ ಮಹಾದೇವನೂ, ಚಂದ್ರಕಲೆಯಿಂದ ಅಂಕಿಸಲ್ಪಟ್ಟ ಶಿರೋಭಾಗವುಳ್ಳವನೂ, ಮಹೇಶ್ವರನೂ ಆದ ರುದ್ರಮೂರ್ತಿಯು ಪ್ರಾದುರ್ಭವಿಸಿದನು.

ನಿರೀಕ್ಷ್ಯ ತೇ ಜಗನ್ನಾಥಂ ತ್ರಿಣೇತ್ರಂ ಚಂದ್ರಭೂಷಣಮ್ ।
ತುಷ್ಟುವುರ್ಹರ್ಷಮನಸೋ ಭಕ್ತ್ಯಾ ತಂ ಪರಮೇಶ್ವರಮ್ ॥ ೩೨ ॥

ಜಯೇಶ್ವರ ಮಹಾದೇವ ಜಯ ಭೂತಪತೇ ಶಿವ ।
ಜಯಾಶೇಷಮುನೀಶಾನ ತಪಸಾಭಿಪ್ರಪೂಜಿತ ॥ ೩೩ ॥

ಸಹಸ್ರಮೂರ್ತೇ ವಿಶ್ವಾತ್ಮನ್ ಜಗದ್ಯಂತ್ರಪ್ರವರ್ತಕ ।
ಜಯಾನಂತ ಜಗಜ್ಜನ್ಮತ್ರಾಣಸಂಹಾರಕಾರಕ ॥ ೩೪ ॥

ಸಹಸ್ರಚರಣೇಶಾನ ಶಂಭೋ ಯೋಗೀಂದ್ರವಂದಿತ ।
ಜಯಾಂಬಿಕಾಪತೇ ದೇವ ನಮಸ್ತೇ ಪರಮೇಶ್ವರ ॥ ೩೫ ॥

---

೩೨. ಅವರು ಜಗತ್ಪ್ರಭುವೂ, ನೇತ್ರತ್ರಯವುಳ್ಳವನೂ, ಚಂದ್ರನಿಂದ ಭೂಷಿಸಲ್ಪಟ್ಟವನೂ ಆದ ಪರಮೇಶ್ವರನನ್ನು ಸಾಕ್ಷಾತ್ಕರಿಸಿ ಸಂತುಷ್ಟವಾದ ಚಿತ್ತವುಳ್ಳವರಾಗಿ ಭಕ್ತಿಯಿಂದ ಸ್ತೋತ್ರಮಾಡಿದರು.

೩೩. ಮಹಾದೇವನೇ! ಈಶ್ವರನೇ! ಜಯಶಾಲಿಯಾಗು. ಭೂತಗಳ ಪ್ರಭುವೇ! ಶಿವಮೂರ್ತಿಯೇ! ಜಯಶಾಲಿಯಾಗು. ತಪಸ್ಸಿನಿಂದ ಪೂಜಿಸಲ್ಪಟ್ಟವನೇ! ಸಮಸ್ತ ಮುನಿಮಂಡಲಕ್ಕೆ ಅಧೀಶ್ವರನೇ! ಜಯಶಾಲಿಯಾಗು.

೩೪. ಸಹಸ್ರಾಕಾರವುಳ್ಳವನೇ! ವಿಶ್ವದ ಆತ್ಮನೇ! ಜಗತ್ತೆಂಬ ಯಂತ್ರವನ್ನು ನಡೆಯಿಸುವವನೇ! ಅಂತರಹಿತನೇ! ಪ್ರಪಂಚದ ಜನ್ಮ ಸ್ಥಿತಿ ಸಂಹಾರವನ್ನು ಮಾಡುವವನೇ! ಜಯಶಾಲಿಯಾಗು.

೩೫. ಸಹಸ್ರಾರು ಪಾದಗಳುಳ್ಳವನೂ, ಸರ್ವೇಶ್ವರನೂ, ಸುಖಕಾರಕನೂ, ಯೋಗೀಂದ್ರರಿಂದ ಪೂಜ್ಯನೂ, ಅಂಬಿಕಾರಮಣನೂ ಮತ್ತು ಪರಮೇಶ್ವರನೂ ಆದ ಸ್ವಾಮಿಯೇ! ನೀನು ಜಯಶಾಲಿಯಾಗು. ನಿನಗೆ ನಮಸ್ಕಾರವು.

ಸಂಸ್ತುತೋ ಭಗವಾನೀಶಸ್ತ್ರ್ಯಂಬಕೋ ಭಕ್ತವತ್ಸಲಃ ।
ಸಮಾಲಿಂಗ್ಯ ಹೃಷೀಕೇಶಂ ಪ್ರಾಹ ಗಂಭೀರಯಾ ಗಿರಾ ॥ ೩೬ ॥

ಕಿಮರ್ಥಂ ಪುಂಡರೀಕಾಕ್ಷ ಮುನೀಂದ್ರಾ ಬ್ರಹ್ಮವಾದಿನಃ ।
ಇಮಂ ಸಮಾಗತಾ ದೇಶಂ ಕಿನ್ನು ಕಾರ್ಯಂ ಮಯಾಚ್ಯುತ ॥ ೩೭ ॥

ಆಕರ್ಣ್ಯ ತಸ್ಯ ತದ್ವಾಕ್ಯಂ ದೇವದೇವೋ ಜನಾರ್ದನಃ ।
ಪ್ರಾಹ ದೇವೋ ಮಹಾದೇವಂ ಪ್ರಸಾದಾಭಿಮುಖಂ ಸ್ಥಿತಮ್ ॥ ೩೮ ॥

ಇಮೇ ಹಿ ಮುನಯೋ ದೇವ ತಾಪಸಾಃ ಕ್ಷೀಣಕಲ್ಮಷಾಃ ।
ಅಭ್ಯಾಗತಾನಾಂ ಶರಣಂ ಸಮ್ಯಗ್ದರ್ಶನಕಾಂಕ್ಷಿಣಾಮ್ ॥ ೩೯ ॥

---

೩೬. ಹೀಗೆ ಸ್ತುತಿಸಲ್ಪಟ್ಟವನೂ, ಭಕ್ತರಲ್ಲಿ ಪ್ರೇಮಿಯೂ, ತ್ರಿನೇತ್ರವುಳ್ಳವನೂ, ಭಗವಂತನೂ ಆದ ಈಶ್ವರನು ಸರ್ವೇಂದ್ರಿಯಾಧಿಪತಿಯಾದ ವಿಷ್ಣುವನ್ನು ಆಲಿಂಗಿಸಿ ಗಂಭೀರವಾದ ವಾಣಿಯಿಂದ ಹೀಗೆಂದು ಹೇಳಿದನು.

೩೭. ಕಮಲದಂತೆ ನೇತ್ರವುಳ್ಳ ಅಚ್ಯುತನೇ! ಬ್ರಹ್ಮವಾದಿಗಳಾದ ಈ ಮುನಿಶ್ರೇಷ್ಠರು ಏಕೆ ಈ ಸ್ಥಳಕ್ಕೆ ಬಂದಿರುವರು ? ಇವರಿಗೆ ನನ್ನಿಂದ ಆಗಬೇಕಾಗಿರುವ ಕಾರ್ಯವಾವುದು ?

೩೮. ದೇವಾಧಿದೇವನೂ, ಭಕ್ತಜನಪಾಲಕನೂ ಆದ ವಿಷ್ಣುವು ಶಂಕರನ ವಚನವನ್ನು ಕೇಳಿ ಅನುಗ್ರಹಿಸುವುದರಲ್ಲಿ ಅಭಿಮುಖನಾದ ಮಹಾದೇವನನ್ನು ಕುರಿತು ಹೇಳಿದನು.

೩೯. ಸ್ವಾಮಿಯೇ ! ಈ ಮುನಿಗಳು ತಪಶ್ಚರ್ಯೆಯಿಂದ ಕ್ಷೀಣವಾದ ಪಾತಕವುಳ್ಳವರಾಗಿರುವರು. ತತ್ವಜ್ಞಾನದ ಆಕಾಂಕ್ಷೆಯಿಂದ ಇಲ್ಲಿಗೆ ಬಂದಿರುವ ಈ ಮುನಿಗಳಿಗೆ ನೀನು ಶರಣನಾಗು.

ಯದಿ ಪ್ರಸನ್ನೋ ಭಗವಾನ್ ಮುನೀನಾಂ ಭಾವಿತಾತ್ಮನಾಮ್ ।
ಸನ್ನಿಧೌ ಮಮ ತಜ್ಜ್ಞಾನಂ ದಿವ್ಯಂ ವಕ್ತುಮಿಹಾರ್ಹಸಿ　　॥ ೪೦ ॥

ತ್ವಂ ಹಿ ವೇತ್ಸಿ ಸ್ವಮಾತ್ಮಾನಂ ನ ಹ್ಯನ್ಯೋ ವಿದ್ಯತೇ ಶಿವ ।
ವದ ತ್ವಮಾತ್ಮನಾತ್ಮಾನಂ ಮುನೀಂದ್ರೇಭ್ಯಃ ಪ್ರದರ್ಶಯ　　॥ ೪೧ ॥

ಏವಮುಕ್ತ್ವಾ ಹೃಷೀಕೇಶಃ ಪ್ರೋವಾಚ ಮುನಿಪುಂಗವಾನ್ ।
ಪ್ರದರ್ಶಯನ್ ಯೋಗಸಿದ್ಧಿಂ ನಿರೀಕ್ಷ್ಯ ವೃಷಭಧ್ವಜಮ್　　॥ ೪೨ ॥

ಸಂದರ್ಶನಾನ್ಮಹೇಶಸ್ಯ ಶಂಕರಸ್ಯಾಥ ಶೂಲಿನಃ ।
ಕೃತಾರ್ಥಂ ಸ್ವಯಮಾತ್ಮಾನಂ ಜ್ಞಾತುಮರ್ಹಥ ತತ್ತ್ವತಃ　　॥ ೪೩ ॥

---

೪೦. ಭಗವಂತನಾದ ನೀನು ಪವಿತ್ರವಾದ ಅಂತಃಕರಣವುಳ್ಳ ಈ ಮುನಿಗಳಿಗೆ ಅನುಗ್ರಹ ತೋರುವುದಾದರೆ ಇವರಿಗೆ ನನ್ನ ಸನ್ನಿಧಿಯಲ್ಲಿ ದಿವ್ಯವಾದ ಜ್ಞಾನವನ್ನು ಉಪದೇಶಿಸಲು ಅರ್ಹನಾಗಿದ್ದೀಯೆ.

೪೧. ಶಂಕರನೇ ! ನಿನ್ನ ನಿಜರೂಪವನ್ನು ನೀನೇ ತಿಳಿದಿದ್ದೀಯೆ. ಇದನ್ನು ತಿಳಿದವನು ಮತ್ತೊಬ್ಬನಿಲ್ಲ. ನಿಜಾತ್ಮರೂಪವನ್ನು ನೀನು ಹೇಳು. ಮತ್ತು ನಿನ್ನ ಆತ್ಮ ಸಾಧನದಿಂದ ಆತ್ಮರೂಪವನ್ನು ಈ ಮುನೀಂದ್ರರಿಗೆ ತೋರಿಸು.

೪೨. ಇಂದ್ರಿಯ ಪ್ರೇರಕನಾದ ಮಹಾವಿಷ್ಣುವು ಹೀಗೆಂದು ಹೇಳಿ ವೃಷಭಧ್ವಜ ವುಳ್ಳ ಈಶ್ವರನನ್ನು ನೋಡಿ ಯೋಗಸಿದ್ಧಿಯನ್ನು ತೋರಿಸುತ್ತಾ ಮುನಿಶ್ರೇಷ್ಠರನ್ನು ಕುರಿತು ಮಾತನಾಡಿದನು.

೪೩. ಮುನೀಂದ್ರರೆ ! ತ್ರಿಶೂಲಧರನೂ, ಸುಖದಾಯಕನೂ ಆದ ಮಹೇಶ್ವರನನ್ನು ಸಾಕ್ಷಾತ್ಕರಿಸುವುದರಿಂದ ನಿಮ್ಮ ಆತ್ಮವು ಕೃತಾರ್ಥವಾಗುವುದೆಂದು ಸತ್ಯವಾಗಿ ತಿಳಿಯಲು ಅರ್ಹರಾಗಿದ್ದೀರಿ.

ದ್ರಷ್ಟುಮರ್ಹಥ ದೇವೇಶಂ ಪ್ರತ್ಯಕ್ಷಂ ಪುರತಃ ಸ್ಥಿತಮ್ ।
ಮಮೈವ ಸನ್ನಿಧಾನೇ ಸ ಯಥಾವದ್ವಕ್ತುಮೀಶ್ವರಃ ॥ ೪೪ ॥

ನಿಶಮ್ಯ ವಿಷ್ಣೋರ್ವಚನಂ ಪ್ರಣಮ್ಯ ವೃಷಭಧ್ವಜಮ್ ।
ಸನತ್ಕುಮಾರಪ್ರಮುಖಾಃ ಪೃಚ್ಛಂತಿ ಸ್ಮ ಮಹೇಶ್ವರಮ್ ॥ ೪೫ ॥

ಅಥಾಸ್ಮಿನ್ನಂತರೇ ದಿವ್ಯಮಾಸನಂ ವಿಮಲಂ ಶಿವಮ್ ।
ಕಿಮಪ್ಯಚಿಂತ್ಯಂ ಗಗನಾದೀಶ್ವರಾರ್ಥೇ ಸಮುದ್ಬಭೌ ॥ ೪೬ ॥

ತತ್ರಾಸಸಾದ ಯೋಗಾತ್ಮಾ ವಿಷ್ಣುನಾ ಸಹ ವಿಶ್ವಕೃತ್ ।
ತೇಜಸಾ ಪೂರಯನ್ ವಿಶ್ವಂ ಭಾತಿ ದೇವೋ ಮಹೇಶ್ವರಃ ॥ ೪೭ ॥

---

೪೪. ದೇವತಾ ಪ್ರಭುವಾದ ಈಶ್ವರನನ್ನು ಪ್ರತ್ಯಕ್ಷವಾಗಿ ಮುಂಭಾಗದಲ್ಲಿ ಇರುವುದನ್ನು ನೋಡಲು ಅರ್ಹರಾಗಿದ್ದೀರಿ. ಈಶ್ವರನು ನನ್ನ ಸನ್ನಿಧಿಯಲ್ಲಿ ಯಥಾವತ್ತಾಗಿ ತತ್ವವನ್ನು ಉಪದೇಶಿಸಲು ಅರ್ಹನಾಗಿರುವನು.

೪೫. ಸನತ್ಕುಮಾರನೇ ಮುಂತಾದ ಬ್ರಹ್ಮರ್ಷಿಗಳು ಮಹಾವಿಷ್ಣುವಿನ ವಚನವನ್ನು ಕೇಳಿ ಧ್ವಜದಲ್ಲಿ ವೃಷಭಲಾಂಛನವುಳ್ಳ ಶಂಕರನನ್ನು ನಮಸ್ಕರಿಸಿ ಮಹೇಶ್ವರನನ್ನು ಕುರಿತು ಪ್ರಶ್ನಿಸಿದರು.

೪೬. ಈ ಸಂದರ್ಭದಲ್ಲಿ ಈಶ್ವರನಿಗೋಸ್ಕರ ದಿವ್ಯವೂ, ನಿರ್ಮಲವೂ, ಮಂಗಳಕರವೂ, ಅವರ್ಣನೀಯವೂ ಮತ್ತು ಚಿಂತಿಸಲು ಅಶಕ್ಯವೂ ಆದ ಒಂದು ಆಸನವು ಆಕಾಶದಿಂದ ಪ್ರಾದುರ್ಭವಿಸಿತು.

೪೭. ಆ ಆಸನದಲ್ಲಿ ಯೋಗಾತ್ಮನೂ, ಜಗತ್ಕಾರಣನೂ ಆದ ಮಹೇಶ್ವರನು ವಿಷ್ಣುವಿನೊಡನೆ ಕುಳಿತುಕೊಂಡನು. ಆಗ ಮಹೇಶ್ವರಸ್ವಾಮಿಯು ತನ್ನ ತೇಜಃಪುಂಜದಿಂದ ಜಗತ್ತನ್ನು ಪೂರ್ಣಮಾಡುತ್ತಾ ಪ್ರಕಾಶಿಸಿದನು.

**ತತೋ ದೇವಾಧಿದೇವೇಶಂ ಶಂಕರಂ ಬ್ರಹ್ಮವಾದಿನಃ ।**
**ವಿಭ್ರಾಜಮಾನಂ ವಿಮಲೇ ತಸ್ಮಿನ್ ದದೃಶುರಾಸನೇ ॥ ೪೮ ॥**

**ತಮಾಸನಸ್ಥಂ ಭೂತಾನಾಮೀಶಂ ದದೃಶಿರೇ ಕಿಲ ।**
**ಯದಂತರಾ ಸರ್ವಮೇತದ್ಯತೋ ಭಿನ್ನಮಿದಂ ಜಗತ್ ॥ ೪೯ ॥**

**ಸವಾಸುದೇವಮೀಶಾನಮೀಶಂ ದದೃಶಿರೇ ಪರಮ್ ।**
**ಪ್ರೋವಾಚ ಪೃಷ್ಟೋ ಭಗವಾನ್ ಮುನೀನಾಂ ಪರಮೇಶ್ವರಃ ॥ ೫೦ ॥**

**ನಿರೀಕ್ಷ್ಯ ಪುಂಡರೀಕಾಕ್ಷಂ ಸ್ವಾತ್ಮಯೋಗಮನುತ್ತಮಮ್ ।**
**ತಚ್ಛೃಣುಧ್ವಂ ಯಥಾನ್ಯಾಯಮುಚ್ಯಮಾನಂ ಮಯಾನಘಾಃ ।**

---

೪೮. ತರುವಾಯ ಬ್ರಹ್ಮವಾದಿಗಳಾದ ಮಹರ್ಷಿಗಳು ದೇವಾಧಿದೇವನಾದ ಶಂಕರನು ಆ ನಿರ್ಮಲವಾದ ಆಸನದಲ್ಲಿ ಬೆಳಗುತ್ತಿರುವುದನ್ನು ಕಂಡರು.

೪೯. ಮತ್ತು ಯಾವ ಪರಮಾತ್ಮನ ಅಂತರದಲ್ಲಿ ಸಮಸ್ತ ಜಗತ್ತು ಇರುವುದೋ ಮತ್ತು ಸಮಸ್ತ ಜಗತ್ತು ಯಾವ ಪರಮಾತ್ಮನಿಂದ ವಿಲಕ್ಷಣವಾದುದೋ ಅಂತಹ ಸಮಸ್ತಭೂತಗಳಿಗೆ ನಿಯಾಮಕನಾದ ಈಶ್ವರನು ಆಸನದಲ್ಲಿ ಕುಳಿತಿರುವುದನ್ನು ನೋಡಿದರು.

೫೦. ಮತ್ತು ಆಸನದಲ್ಲಿ ಮಹಾವಿಷ್ಣುವಿನೊಡನೆ ಕುಳಿತಿರುವ, ಸರ್ವೋತ್ತಮನಾದ ಮಹೇಶ್ವರನನ್ನು ಕಂಡರು. ಆಗ ಮುನಿಗಳಿಂದ ಪ್ರಶ್ನಿಸಲ್ಪಟ್ಟ ಭಗವಂತನಾದ ಪರಮೇಶ್ವರನು ಮುನಿಗಳಿಗೆ ಉಪದೇಶಿಸಿದನು.

೫೧. ನಿಷ್ಕಳಂಕರಾದ ಋಷಿಗಳೇ! ನೀವೆಲ್ಲರೂ ಶಾಂತವಾದ ಮಾನಸವುಳ್ಳವರಾಗಿ ಕಮಲದಳದಂತೆ ನೇತ್ರವುಳ್ಳ ವಿಷ್ಣುವನ್ನು ನೋಡಿ ನ್ಯಾಯಸಮ್ಮತವಾಗಿ

ಪ್ರಶಾಂತಮನಸಃ ಸರ್ವೇ ವಿಶುದ್ಧಂ ಜ್ಞಾನಮೈಶ್ವರಮ್ । ॥ ೫೧ ॥

ಇತಿ ಶ್ರೀ ಕೂರ್ಮಪುರಾಣೇ ಚತುಷ್ಪಂಚಾಶತ್ತಮೋಽಧ್ಯಾಯಃ.

---

ನನ್ನಿಂದ ಹೇಳಲ್ಪಡುವುದೂ, ಸರ್ವೋತ್ತಮವೂ, ಸ್ವಾತ್ಮಯೋಗರೂಪವೂ, ಈಶ್ವರ ವಿಷಯವೂ ಆದ ವಿಶುದ್ಧಜ್ಞಾನಯೋಗವನ್ನು ಶ್ರವಣಮಾಡಿರಿ.

(ಕೂರ್ಮಪುರಾಣದಲ್ಲಿ ಐವತ್ತನಾಲ್ಕನೆಯ ಅಧ್ಯಾಯವು ಸಮಾಪ್ತವು.)



ಶ್ರೀಃ

# ಕೂರ್ಮಪುರಾಣಂ

---

## ಪಂಚಪಂಚಾಶತ್ತಮೋಽಧ್ಯಾಯಃ.

ಈಶ್ವರ ಉವಾಚ :—

ಅವಾಚ್ಯಮೇತದ್ವಿಜ್ಞಾನಂ ಮಮ ಗುಹ್ಯಂ ಸನಾತನಮ್ ।
ಯನ್ನ ದೇವಾ ವಿಜಾನಂತಿ ಯತಂತೋಽಪಿ ದ್ವಿಜಾತಯಃ ॥ ೧ ॥

ಇದಂ ಜ್ಞಾನಂ ಸಮಾಶ್ರಿತ್ಯ ಬ್ರಹ್ಮೀಭೂತಾ ದ್ವಿಜೋತ್ತಮಾಃ ।
ನ ಸಂಸಾರಂ ಪ್ರಪದ್ಯಂತೇ ಪೂರ್ವೇಽಪಿ ಬ್ರಹ್ಮವಾದಿನಃ ॥ ೨ ॥

---

## ಐವತ್ತೈದನೆಯ ಅಧ್ಯಾಯವು

೧. ಈಶ್ವರನು ಹೀಗೆ ಉಪದೇಶಿಸಿದನು:—ದೇವತೆಗಳೂ ಮತ್ತು ದ್ವಿಜರೂ ಮಹಾಪ್ರಯತ್ನದಿಂದ ತಿಳಿಯಲಾಗದಿರುವುದೂ, ಅನಾದಿಯೂ ಮತ್ತು ನನ್ನ ರಹಸ್ಯ ತತ್ವರೂಪವೂ ಆದ ಈ ವಿಜ್ಞಾನವು ಸಾಮಾನ್ಯವಾಗಿ ಹೇಳತಕ್ಕುದಲ್ಲ.

೨. ಪೂರ್ವದಲ್ಲಿರುವ ಬ್ರಹ್ಮವಾದಿಗಳೂ ಮತ್ತು ದ್ವಿಜೋತ್ತಮರೂ ಈ ಜ್ಞಾನಯೋಗವನ್ನು ಅವಲಂಬಿಸಿ ಬ್ರಹ್ಮಾತ್ಮಭೂತರಾಗಿ ಮತ್ತೆ ಈ ಸಂಸಾರ ಚಕ್ರವನ್ನು ಹೊಂದಿರುವುದಿಲ್ಲ.

ಗುಹ್ಯಾದ್ಗುಹ್ಯತಮಂ ಸಾಕ್ಷಾದ್ಗೋಪನೀಯಂ ಪ್ರಯತ್ನತಃ ।
ವಕ್ಷ್ಯೇ ಭಕ್ತಿಮತಾಮದ್ಯ ಯುಷ್ಮಾಕಂ ಬ್ರಹ್ಮವಾದಿನಾಮ್ ॥ ೩ ॥

ಆತ್ಮಾಯಂ ಕೇವಲಃ ಸ್ವಚ್ಛಃ ಶುದ್ಧಃ ಸೂಕ್ಷ್ಮಃ ಸನಾತನಃ ।
ಅಸ್ತಿ ಸರ್ವಾಂತರಃ ಸಾಕ್ಷಾಚ್ಚಿನ್ಮಾತ್ರಸ್ತಮಸಃ ಪರಃ ॥ ೪ ॥

ಸೋಽಂತರ್ಯಾಮೀ ಸ ಪುರುಷಃ ಸ ಪ್ರಾಣಃ ಸ ಮಹೇಶ್ವರಃ ।
ಸ ಕಾಲೋಽತ್ರ ತದವ್ಯಕ್ತಂ ಸ ಚ ವೇದ ಇತಿ ಶ್ರುತಿಃ ॥ ೫ ॥

ಅಸ್ಮಾದ್ವಿಜಾಯತೇ ವಿಶ್ವಮತ್ರೈವ ಪ್ರವಿಲೀಯತೇ ।
ಸ ಮಾಯೀ ಮಾಯಯಾ ಬದ್ಧಃ ಕರೋತಿ ವಿವಿಧಾಸ್ತನೂಃ ॥ ೬ ॥

---

೩. ಈ ಯೋಗವು ರಹಸ್ಯ ವಸ್ತುಗಳೆಲ್ಲಕ್ಕಿಂತಲೂ ಅತಿರಹಸ್ಯವೂ, ಪ್ರತ್ಯಕ್ಷವಾದ ಪ್ರಚುರಪ್ರಯತ್ನಗಳಿಂದ ರಕ್ಷಿಸಲ್ಪಡುವುದೂ ಆಗಿದೆ. ಇದನ್ನು ಬ್ರಹ್ಮವಾದಿಗಳೂ, ಭಕ್ತಿಸಂಪನ್ನರೂ ಆದ ನಿಮಗೆ ಈಗ ಉಪದೇಶಿಸುತ್ತೇನೆ.

೪. ಈ ಆತ್ಮವಸ್ತುವು ಅದ್ವಿತೀಯವೂ, ಸ್ವಚ್ಛರೂಪವೂ, ಪವಿತ್ರವೂ, ಸೂಕ್ಷ್ಮವೂ, ಅನಾದಿಯೂ, ಸರ್ವಾಂತರ್ಯಾಮಿಯೂ, ಪ್ರತ್ಯಕ್ಷವೂ, ಚಿನ್ಮಾತ್ರ ಸ್ವರೂಪವೂ ಮತ್ತು ತಮೋಗುಣಾತೀತವೂ ಆಗಿರುವುದು.

೫. ಆ ಆತ್ಮನು ಅಂತರ್ಯಾಮಿಯೂ, ಪೂರ್ಣನೂ, ಪ್ರಾಣರೂಪಿಯೂ, ಮಹೇಶ್ವರನೂ, ಕಾಲರೂಪಿಯೂ, ಅವ್ಯಕ್ತನೂ ಮತ್ತು ವೇದಸ್ವರೂಪನೂ ಆಗಿರುವನೆಂದು ಶ್ರುತಿಯು ಆತ್ಮನ ಸರ್ವಾತ್ಮತ್ವವನ್ನು ವರ್ಣಿಸುವುದು.

೬. ಆತ್ಮನಿಂದ ಎಲ್ಲ ವಿಶ್ವವು ಹುಟ್ಟುತ್ತದೆ. ಆತ್ಮನಲ್ಲಿಯೇ ಎಲ್ಲವೂ ಲಯವಾಗುತ್ತದೆ. ಮಾಯೆಯಿಂದ ಬದ್ಧನಾಗಿ ಮಾಯಾವಿ ಎನಿಸಿದ ಆತ್ಮನು ವಿವಿಧ ದೇಹಗಳನ್ನು ನಿರ್ಮಿಸುತ್ತಾನೆ.

ನ ಚಾಪ್ಯಯಂ ಸಂಸರತಿ ನ ಸಂಸಾರಮಯಃ ಪ್ರಭುಃ ।
ನಾಯಂ ಪೃಥ್ವೀ ನ ಸಲಿಲಂ ನ ತೇಜಃ ಪವನೋ ನಭಃ　　॥ ೭ ॥

ನ ಪ್ರಾಣೋ ನ ಮನೋಽವ್ಯಕ್ತಂ ನ ಶಬ್ದಃ ಸ್ಪರ್ಶ ಏವ ಚ ।
ನ ರೂಪರಸಗಂಧಾಶ್ಚ ನಾಹಂ ಕರ್ತಾ ನ ವಾಗಪಿ　　॥ ೮ ॥

ನ ಪಾಣಿಪಾದೌ ನೋ ಪಾಯುರ್ನಚೋಪಸ್ಥಂ ದ್ವಿಜೋತ್ತಮಾಃ ।
ನ ಚ ಕರ್ತಾ ನ ಭೋಕ್ತಾ ವಾ ನ ಚ ಪ್ರಕೃತಿಪೂರುಷೌ　　॥ ೯ ॥

ನ ಮಾಯಾ ನೈವ ಚ ಪ್ರಾಣಾ ನ ಚೈವ ಪರಮಾರ್ಥತಃ ।
ಯಥಾ ಪ್ರಕಾಶತಮಸೋಃ ಸಂಬಂಧೋ ನೋಪಪದ್ಯತೇ　　॥ ೧೦ ॥

---

೭. ಮತ್ತು ಈ ಆತ್ಮನು ಸಂಸಾರಹೊಂದುವುದಿಲ್ಲ. ಸರ್ವ ಸಮರ್ಥನಾದ ಆತ್ಮನು ಸಂಸಾರಮಯನಾಗಿಲ್ಲ. ಮತ್ತು ಈ ಆತ್ಮನು ಪೃಥಿವೀ, ಜಲ, ತೇಜಸ್ಸು, ವಾಯು, ಆಕಾಶಗಳೆಂಬ ಪಂಚಭೂತಸ್ವರೂಪನಾಗಿಲ್ಲ.

೮. ಹಾಗೂ ಪ್ರಾಣ-ಮನಸ್ಸು-ಅವ್ಯಕ್ತ-ಶಬ್ದ-ಸ್ಪರ್ಶ-ರೂಪ-ರಸ ಮತ್ತು ಗಂಧ ವೆಂಬ ವಿಷಯಸ್ವರೂಪನೂ, ಕರ್ತೃಸ್ವರೂಪನೂ ಅಥವಾ ವಾಗಿಂದ್ರಿಯಸ್ವರೂಪನೂ ಆಗಿಲ್ಲ.

೯. ದ್ವಿಜೋತ್ತಮರೇ ! ಮತ್ತು ಪಾಣಿ, ಪಾದ, ಪಾಯು, ಉಪಸ್ಥವೆಂಬ, ಕರ್ಮೇಂದ್ರಿಯಸ್ವರೂಪನಲ್ಲ. ಅಥವಾ ಕರ್ತ, ಭೋಕ್ತ, ಪ್ರಕೃತಿ, ಪುರುಷ, ಎಂಬ ವಿಶಿಷ್ಟ ವಸ್ತುರೂಪಗಳನ್ನು ಹೊಂದಿಲ್ಲ.

೧೦. ಹಾಗೂ ಮಾಯಾಸ್ವರೂಪನೂ, ಪ್ರಾಣಸ್ವರೂಪನೂ ಪರಮಾರ್ಥ ವಾಗಿಲ್ಲ. ಪ್ರಕಾಶ ಮತ್ತು ಅಂಧಕಾರಗಳಿಗೆ ಯೋಗ್ಯವಾದ ಯಾವುದೊಂದು ಸಂಬಂಧವೂ ಇರುವುದಿಲ್ಲ.

ತದ್ವದ್ವೈಕ್ಯಂ ನ ಸಂಬಂಧಃ ಪ್ರಪಂಚಪರಮಾತ್ಮನೋಃ ।
ಛಾಯಾತಪೌ ಯಥಾ ಲೋಕೇ ಪರಸ್ಪರವಿಲಕ್ಷಣೌ ॥ ೧೧ ॥

ತದ್ವತ್ಪ್ರಪಂಚಪುರುಷೌ ವಿಭಿನ್ನೌ ಪರಮಾರ್ಥತಃ ।
ತಥಾತ್ಮಾ ಮಲಿನಃ ಸೃಷ್ಟೋ ವಿಕಾರೀ ಸ್ಯಾತ್ಸ್ವರೂಪತಃ ॥ ೧೨ ॥

ನ ಹಿ ತಸ್ಯ ಭವೇನ್ಮುಕ್ತಿರ್ಜನ್ಮಾಂತರಶತೈರಪಿ ।
ಪಶ್ಯಂತಿ ಮುನಯೋ ಮುಕ್ತಾಃ ಸ್ವಾತ್ಮಾನಂ ಪರಮಾರ್ಥತಃ ॥ ೧೩ ॥

ವಿಕಾರಹೀನಂ ನಿರ್ದ್ವಂದ್ವಮಾನಂದಾತ್ಮಾನಮವ್ಯಯಮ್ ।
ಅಹಂ ಕರ್ತಾ ಸುಖೀ ದುಃಖೀ ಕೃಶಃ ಸ್ಥೂಲೇತಿ ಯಾ ಮತಿಃ ॥೪೧॥

---

೧೧. ಅದರಂತೆ ಪ್ರಪಂಚ— ಪರಮಾತ್ಮರಿಗೆ ಐಕ್ಯವೆಂಬ ಸಂಬಂಧವು ಸಮಂಜಸವಾಗುವುದಿಲ್ಲ. ಲೋಕದಲ್ಲಿ ಛಾಯೆ ಮತ್ತು ಪ್ರಕಾಶಗಳು ಅನ್ಯೋನ್ಯವಾಗಿ ಬಹು ವಿಲಕ್ಷಣವಾದ ರೂಪಗಳನ್ನು ಹೊಂದಿವೆ.

೧೨. ಹಾಗೆ ಪ್ರಪಂಚ, ಪುರುಷರು ಪರಮಾರ್ಥವಾಗಿ ಭಿನ್ನವಾದ ರೂಪಗಳಿಂದಿರುವರು. ಒಂದುವೇಳೆ ಆತ್ಮನು ಕಾರ್ಯರೂಪದಿಂದ ಸೃಷ್ಟಿಸಲ್ಪಟ್ಟರೆ ಆ ಆತ್ಮನು ಸ್ವರೂಪದಿಂದ ಮಲಿನ ಮತ್ತು ವಿಕಾರವಾದ ರೂಪವುಳ್ಳವನಾಗುವನು.

೧೩. ಅಂತಹ ಆತ್ಮನಿಗೆ ನೂರಾರು ಜನ್ಮಗಳು ಕಳೆದರೂ ಮುಕ್ತಿಯು ದೊರಕಲಾರದು. ಆದರೆ ಮುಕ್ತರಾದ ಮಹರ್ಷಿಗಳು ಸ್ವಾತ್ಮರೂಪವನ್ನು ಪಾರಮಾರ್ಥಿಕವಾಗಿ ಸಾಕ್ಷಾತ್ಕರಿಸುತ್ತಾರೆ.

೧೪. ಮುಕ್ತರಿಂದ ತಿಳಿಯಲ್ಪಡುವ ಆತ್ಮನು ವಿಕಾರ-ದ್ವಂದ್ವದುಃಖಗಳಿಂದ ರಹಿತನೂ, ಶಾಶ್ವತನೂ, ಆನಂದಸ್ವರೂಪನೂ ಆಗಿದ್ದಾನೆ. ನಾನು ಕರ್ತನು, ಸುಖಿಯು, ದುಃಖಿಯು, ಕೃಶನು, ಸ್ಥೂಲನು ಇಂತೆಂಬ ಬುದ್ಧಿಯು ಆತ್ಮನಲ್ಲಿ ಭ್ರಾಂತಿರೂಪವಾಗಿ ಜನಿಸುವುದು.

**ಸಾ ಚಾಹಂಕಾರಕರ್ತೃತ್ವಾದಾತ್ಮನ್ಯಾರೋಪಿತಾ ಜನೈಃ ।**
**ವದಂತಿ ವೇದವಿದ್ವಾಂಸಃ ಸಾಕ್ಷಿಣಂ ಪ್ರಕೃತೇಃ ಪರಮ್ ॥ ೧೫ ॥**

**ಭೋಕ್ತಾರಮಕ್ಷರಂ ಬುದ್ಧಂ ಸರ್ವತ್ರ ಸಮವಸ್ಥಿತಮ್ ।**
**ತಸ್ಮಾದಜ್ಞಾನಮೂಲೋ ಹಿ ಸಂಸಾರಃ ಸರ್ವದೇಹಿನಾಮ್ ॥ ೧೬ ॥**

**ಅಜ್ಞಾನಾದನ್ಯಥಾಜ್ಞಾನಾತ್ತತ್ತ್ವಂ ಪ್ರಕೃತಿಸಂಗತಮ್ ।**
**ನಿತ್ಯೋದಿತಂ ಸ್ವಯಂ ಜ್ಯೋತಿಃ ಸರ್ವಗಃ ಪುರುಷಃ ಪರಃ ॥ ೧೭ ॥**

**ಅಹಂಕಾರಾವಿವೇಕೇನ ಕರ್ತಾಹಮಿತಿ ಮನ್ಯತೇ ।**
**ಪಶ್ಯಂತಿ ಋಷಯೋಽವ್ಯಕ್ತಂ ನಿತ್ಯಂ ಸದಸದಾತ್ಮಕಮ್ ॥ ೧೮ ॥**

---

೧೫. ಆ ಭ್ರಾಂತಿಯು ಕರ್ತೃರೂಪವಾದ ಅಂತಃಕರಣದ ಐಕ್ಯಭಾವನೆಯಿಂದ ಆತ್ಮನಲ್ಲಿ ಜನರಿಂದ ಆರೋಪಿಸಲ್ಪಟ್ಟಿದೆ. ವೇದಾರ್ಥಜ್ಞರಿಂದ ವಿದ್ವಾಂಸರು ಪ್ರಕೃತಿ ವಿಲಕ್ಷಣವಾದ ಸಾಕ್ಷಿಸ್ವರೂಪವನ್ನು ನಿರೂಪಿಸುತ್ತಾರೆ.

೧೬. ಮತ್ತು ಸಾಕ್ಷಿಸ್ವರೂಪವು ಸರ್ವಭೂತಗಳಲ್ಲಿ ವ್ಯಾಪಿಸಿರುವುದೂ, ಬೋಧಸ್ವರೂಪವೂ, ನಾಶರಹಿತವೂ ಮತ್ತು ಭೋಗಸಾಕ್ಷಿಯಾದ ಚೈತನ್ಯರೂಪವೂ ಆಗಿದೆ. ಆದುದರಿಂದ ಸಮಸ್ತ ಪ್ರಾಣಿಗಳಿಗೆ ಸಂಸಾರವು ಅಜ್ಞಾನ ನಿಮಿತ್ತಕವಾಗಿ ಉಂಟಾಗುವುದು.

೧೭. ಅಜ್ಞಾನ ಮತ್ತು ಅನ್ಯಥಾ ಜ್ಞಾನಗಳಿಂದ ಪರಮಾರ್ಥ ತತ್ವವು ಪ್ರಕೃತಿ ತತ್ವದಲ್ಲಿ ಮಿಶ್ರವಾಗುವುದು. ಶುದ್ಧಾತ್ಮ ತತ್ವವು ಯಾವಾಗಲೂ ಉದಯಿಸಿರುವುದೂ ಸ್ವಯಂಪ್ರಕಾಶವೂ, ಸರ್ವವ್ಯಾಪಿಯೂ, ಪೂರ್ಣವೂ ಮತ್ತು ಸರ್ವೋತ್ತಮವೂ ಆಗಿದೆ.

೧೮. ಆದರೆ ಅಹಂಕಾರದ ಅವಿವೇಕದಿಂದ ನಾನು ಕರ್ತೃ ಎಂದು ಭ್ರಾಂತಿಗೊಳ್ಳುವನು. ಮಹರ್ಷಿಗಳು ಯಾವಾಗಲೂ ಸತ್-ಅಸತ್ ಎಂಬ ವಿಧ ರೂಪಗಳುಳ್ಳ ಅವ್ಯಕ್ತತತ್ವವನ್ನು ನೋಡುತ್ತಾರೆ.

ಪ್ರಧಾನಂ ಪುರುಷಂ ಬುದ್ಧ್ವಾ ಕಾರಣಂ ಬ್ರಹ್ಮವಾದಿನಃ ।
ತೇನಾಯಂ ಸಂಗತಃ ಸ್ವಾತ್ಮಾ ಕೂಟಸ್ಥೋಽಪಿ ನಿರಂಜನಃ ॥ ೧೯ ॥

ಸ್ವಾತ್ಮಾನಮಕ್ಷರಂ ಬ್ರಹ್ಮ ನಾವಬುಧ್ಯೇತ ತತ್ತ್ವತಃ ।
ಅನಾತ್ಮನ್ಯಾತ್ಮವಿಜ್ಞಾನಂ ತಸ್ಮಾದ್ದುಃಖಂ ತಥೇತರತ್ ॥ ೨೦ ॥

ರಾಗದ್ವೇಷಾದಯೋ ದೋಷಾಃ ಸರ್ವೇ ಭ್ರಾಂತಿನಿಬಂಧನಾಃ ।
ಕರ್ಮಾಣ್ಯಸ್ಯ ಮಹಾನ್ ದೋಷಃ ಪುಣ್ಯಾಪುಣ್ಯಮಿತಿ ಸ್ಥಿತಿಃ ॥ ೨೧ ॥

ತದ್ವಶಾದೇವ ಸರ್ವೇಷಾಂ ಸರ್ವದೇಹಸಮುದ್ಭವಃ ।
ನಿತ್ಯಂ ಸರ್ವತ್ರ ಗುಹ್ಯಾತ್ಮಾ ಕೂಟಸ್ಥೋ ದೋಷವರ್ಜಿತಃ ॥ ೨೨ ॥

---

೧೯. ಬ್ರಹ್ಮವಾದಿಗಳು ಪ್ರಧಾನದ ಐಕ್ಯದಿಂದ ಪುರುಷನನ್ನು ಕಾರಣನನ್ನಾಗಿ ತಿಳಿಯುವರು. ಅದರಿಂದ ನಿರ್ದೋಷನೂ, ನಿರ್ವಿಕಾರನೂ ಆದ ಆತ್ಮನು ಪ್ರಧಾನ ಸಂಗದಿಂದ ಕರ್ತೃತ್ವಾದಿ ಪ್ರತೀತಿ ವಿಷಯನಾದ ಆತ್ಮರೂಪನಾಗುವನು.

೨೦. ಮಾನವನು ಸ್ವಾತ್ಮರೂಪವನ್ನು ತಾತ್ವಿಕವಾದ ಅಕ್ಷರಬ್ರಹ್ಮ ರೂಪವನ್ನಾಗಿ ತಿಳಿಯುವುದಿಲ್ಲ. ಅನಾತ್ಮವಸ್ತುವಿನಲ್ಲಿ ಆತ್ಮವಿಜ್ಞಾನಭ್ರಾಂತಿ ಯುಂಟಾಗಿ ಅದರಿಂದ ಸುಖ-ದುಃಖ ಸಂಪರ್ಕವು ಆತ್ಮನಲ್ಲಿ ಪ್ರಸರಿಸುವುದು.

೨೧. ರಾಗ-ದ್ವೇಷ ಮೊದಲಾದ ಸಮಸ್ತ ದೋಷಗಳೂ ಭ್ರಾಂತಿನಿಮಿತ್ತ ಗಳಾಗಿರುವುವು. ಈ ಆತ್ಮನಿಗೆ ಪುಣ್ಯ, ಅಪುಣ್ಯವೆಂಬ ಕರ್ಮಗ್ರಂಥಿಯು ಮಹತ್ತಾದ ದೋಷವಾಗಿರುವುದು.

೨೨. ಆ ಪುಣ್ಯ, ಪಾಪ ಕರ್ಮಗಳ ಬಂಧನದಿಂದ ಸಮಸ್ತ ಪ್ರಾಣಿಗಳಿಗೆ ಎಲ್ಲ ದೇಹಗಳು ಉದ್ಭವಿಸುವುವು. ನಿರ್ವಿಕಾರನೂ ದೋಷಸ್ಪರ್ಶರಹಿತನೂ ಆದ ಶುದ್ಧವಾದ ಆತ್ಮನು ಯಾವಾಗಲೂ ಎಲ್ಲೆಡೆಗಳಲ್ಲಿಯೂ ಗೂಢನಾಗಿರುವನು.

ಏಕಃ ಸಂಭಿದ್ಯತೇ ಶಕ್ತ್ಯಾ ಮಾಯಯಾ ನ ಸ್ವಭಾವತಃ ।
ತಸ್ಮಾದದ್ವೈತಮೇವಾಹುರ್ಮುನಯಃ ಪರಮಾರ್ಥತಃ ॥ ೨೩ ॥

ಭೇದೋಽವ್ಯಕ್ತಸ್ವಭಾವೇನ ಸಾ ಚ ಮಾಯಾತ್ಮಸಂಶ್ರಯಾ ।
ಯಥಾ ಚ ಧೂಮಸಂಪರ್ಕಾನ್ನಾಕಾಶೋ ಮಲಿನೋ ಭವೇತ್ ॥ ೨೪ ॥

ಅಂತಃಕರಣಜೈರ್ಭಾವೈರಾತ್ಮಾ ತದ್ವನ್ನ ಲಿಪ್ಯತೇ ।
ಯಥಾ ಸ್ವಪ್ರಭಯಾ ಭಾತಿ ಕೇವಲಃ ಸ್ಫಟಿಕೋಪಲಃ ॥ ೨೫ ॥

ಉಪಾಧಿಹೀನೋ ವಿಮಲಸ್ತಥೈವಾತ್ಮಾ ಪ್ರಕಾಶತೇ ।
ಜ್ಞಾನಸ್ವರೂಪಮೇವಾಹುರ್ಜಗದೇತದ್ವಿಚಕ್ಷಣಾಃ ॥ ೨೬ ॥

---

೨೩. ಅದ್ವಿತೀಯನಾದ ಆತ್ಮನು ತನ್ನ ಮಾಯಾಶಕ್ತಿಯಿಂದ ಅನೇಕ ವಿಭಾಗಗಳನ್ನು ಹೊಂದುವನು. ಆ ವಿಭಾಗಗಳು ಸ್ವಾಭಾವಿಕವಲ್ಲ. ಆದ್ದರಿಂದ ಮಹರ್ಷಿಗಳು ಅದ್ವೈತವನ್ನು ಪರಮಾರ್ಥವೆಂದು ಹೇಳುವರು.

೨೪. ಆತ್ಮನಲ್ಲಿ ಭೇದವು ಮಾಯೆ ಎಂಬ ಅವ್ಯಕ್ತದ ಸ್ವಭಾವದಿಂದ ಉಂಟಾಗುವುದು. ಆ ಮಾಯೆಯು ಆತ್ಮನನ್ನು ಆಶ್ರಯಿಸಿದೆ. ಸೂಕ್ಷ್ಮವಾದ ಆಕಾಶವು ಹೊಗೆಯ ಸಂಪರ್ಕದಿಂದ ಎಂದಿಗೂ ಮಲಿನವಾಗಲಾರದು.

೨೫. ಹಾಗೆ ಅಂತಃಕರಣದಲ್ಲಿ ಹುಟ್ಟುವ ವಿವಿಧಭಾವನೆಗಳಿಂದ ಆತ್ಮನು ಲೇಪಭಾಗಿಯಾಗುವುದಿಲ್ಲ. ಸ್ಫಟಿಕ ಶಿಲೆಯು ಮತ್ತೊಂದು ಪ್ರಕಾಶವನ್ನು ಕೋರದೆ ತನ್ನ ಪ್ರಭೆಯಿಂದಲೇ ಪ್ರಕಾಶಿಸುತ್ತದೆ.

೨೬. ಹಾಗೆ ಉಪಾಧಿವಸ್ತುಗಳಿಂದ ಶೂನ್ಯನೂ, ನಿರ್ಮಲನೂ ಆದ ಆತ್ಮನು ಸ್ವಪ್ರಕಾಶದಿಂದ ಹೊಳೆಯುತ್ತಾನೆ. ವಿದ್ವಾಂಸರು ಈ ಜಗತ್ತನ್ನು ಜ್ಞಾನಸ್ವರೂಪವೆಂದು ಹೇಳುತ್ತಾರೆ.

ಅರ್ಥಸ್ವರೂಪಮೇವಾನ್ಯೇ ಪಶ್ಯಂತ್ಯನ್ಯೇ ಕುದೃಷ್ಟಯಃ ।
ಕೂಟಸ್ಥೋ ನಿರ್ಗುಣೋ ವ್ಯಾಪೀ ಚೈತನ್ಯಾತ್ಮಾ ಸ್ವಭಾವತಃ ॥ ೨೭ ॥

ದೃಶ್ಯತೇ ಹ್ಯರ್ಥರೂಪೇಣ ಪುರುಷೈರ್ಜ್ಞಾನದೃಷ್ಟಿಭಿಃ ।
ಯಥಾ ಸ ಲಕ್ಷ್ಯತೇ ರಕ್ತಃ ಕೇವಲಂ ಸ್ಫಾಟಿಕೋ ಜನೈಃ ॥ ೨೮ ॥

ರಕ್ತಿಕಾದ್ಯುಪಧಾನೇನ ತದ್ವತ್ಪರಮಪೂರುಷಃ ।
ತಸ್ಮಾದಾತ್ಮಾಕ್ಷರಃ ಶುದ್ಧೋ ನಿತ್ಯಃ ಸರ್ವತ್ರಗೋಽವ್ಯಯಃ ॥ ೨೯ ॥

ಉಪಾಸಿತವ್ಯೋ ಮಂತವ್ಯಃ ಶ್ರೋತವ್ಯಶ್ಚ ಮುಮುಕ್ಷುಭಿಃ ।
ಯದಾ ಮನಸಿ ಚೈತನ್ಯಂ ಭಾತಿ ಸರ್ವತ್ರ ಸರ್ವದಾ ॥ ೩೦ ॥

---

೨೭. ನಿಂದ್ಯವಾದ ದೃಷ್ಟಿಯುಳ್ಳ ಅಜ್ಞರಾದ ಕೆಲವರು ಜಗತ್ತನ್ನು ಅರ್ಥ ಸ್ವರೂಪದಿಂದ ಕಾಣುತ್ತಾರೆ. ಆತ್ಮನು ಸ್ವಾಭಾವಿಕವಾಗಿ ನಿರ್ವಿಕಾರನೂ, ಗುಣಾತೀತನೂ, ವ್ಯಾಪಕನೂ, ಚೈತನ್ಯಸ್ವರೂಪನೂ ಆಗಿರುವನು.

೨೮. ಆದರೆ ಆ ಆತ್ಮನು ಜ್ಞಾನದೃಷ್ಟಿಯುಳ್ಳ ಪುರುಷರಿಂದ ಅರ್ಥಸ್ವರೂಪದಿಂದ ಕಾಣಲ್ಪಡುತ್ತಾನೆ. ಶುದ್ಧವಾದ ಸ್ಫಟಿಕಮಣಿಯು ಒಂದು ನಿಮಿತ್ತದಿಂದ, ಜನರಿಂದ ಕೆಂಪಾಗಿ ಕಾಣಲ್ಪಡುತ್ತದೆ.

೨೯. ಸ್ಫಟಿಕಮಣಿಯು ಕೆಂಪುಬಣ್ಣದ ಉಪಾಧಿಯೋಗದಿಂದ ಬೇರೆ ಬಣ್ಣದಿಂದ ಕಾಣುವಂತೆ ಪರಮಪುರುಷನು ಉಪಾಧಿಯೋಗದಿಂದ ಬೇರೆರೂಪವಾಗಿ ಕಾಣಿಸುವನು. ಆದುದರಿಂದ ಆತ್ಮನು ಅಕ್ಷರನೂ, ಶುದ್ಧನೂ, ಶಾಶ್ವತನೂ ಸರ್ವವ್ಯಾಪಿಯೂ ಮತ್ತು ಕ್ಷಯರಹಿತನೂ ಆಗಿರುವನು.

೩೦. ಮುಮುಕ್ಷು ಜನರಿಂದ ಆತ್ಮನನ್ನು ಶ್ರವಣ ಮನನ ಉಪಾಸನಗಳಿಂದ ತಿಳಿಯಲು ಪ್ರಯತ್ನಿಸಲ್ಪಡಬೇಕು. ಯೋಗಿಗೆ ತನ್ನ ಮನಸ್ಸಿನಲ್ಲಿ ಯಾವಾಗಲೂ, ಎಲ್ಲಾ ಸ್ಥಳಗಳಲ್ಲಿಯೂ ಚೈತನ್ಯಸ್ವರೂಪವು ಭಾಸವಾಗುವುದು.

ಯೋಗಿನಃ ಶ್ರದ್ದಧಾನಸ್ಯ ತದಾ ಸಂಪದ್ಯತೇ ಸ್ವಯಮ್ ।
ಯದಾ ಸರ್ವಾಣಿ ಭೂತಾನಿ ಸ್ವಾತ್ಮನ್ಯೇವಾಭಿಪಶ್ಯತಿ ॥ ೩೧ ॥

ಸರ್ವಭೂತೇಷು ಚಾತ್ಮಾನಂ ಬ್ರಹ್ಮ ಸಂಪದ್ಯತೇ ತದಾ ।
ಯದಾ ಸರ್ವಾಣಿ ಭೂತಾನಿ ಸಮಾಧಿಸ್ಥೋ ನ ಪಶ್ಯತಿ ॥ ೩೨ ॥

ಏಕೀಭೂತಃ ಪರೇಣಾಸೌ ತದಾ ಭವತಿ ಕೇವಲಮ್ ।
ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಸ್ಥಿತಾಃ ॥ ೩೩ ॥

ತದಾಸಾವಮೃತೀಭೂತಃ ಕ್ಷೇಮಂ ಗಚ್ಛತಿ ಪಂಡಿತಃ ।
ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ ॥ ೩೪ ॥

---

೩೧. ಶ್ರದ್ಧೆಯಿಂದ ಕೂಡಿದ ಯೋಗಿಗೆ ಆಗ ಸ್ವಸ್ವರೂಪ ಪ್ರಾಪ್ತಿಯು ಉಂಟಾಗುವುದು. ಯೋಗಿಯು ಒಂದು ವೇಳೆಯಲ್ಲಿ ಸರ್ವ ಭೂತಗಳನ್ನು ಆತ್ಮ ರೂಪದಲ್ಲಿ ಅಭೇದದಿಂದ ಕಾಣುವನು.

೩೨. ಹಾಗೂ ತನ್ನ ಆತ್ಮವನ್ನು ಸರ್ವಪ್ರಾಣಿಗಳ ಆತ್ಮವನ್ನಾಗಿ ಕಾಣುವನು. ಆಗ ಆ ಯೋಗಿಯು ಬ್ರಹ್ಮಭಾವವನ್ನು ಹೊಂದುವನು. ಸಮಾಧಿನಿರತನಾದ ಯೋಗಿಯು ಬಾಹ್ಯವಾಗಿ ಸರ್ವಭೂತಗಳನ್ನು ನೋಡುವುದಿಲ್ಲ.

೩೩. ಆಗ ಆ ಯೋಗಿಯು ಪರಮಾತ್ಮನಲ್ಲಿ ಐಕ್ಯಹೊಂದಿ ಕೇವಲನಾಗಿ ತನ್ಮಯನೇ ಆಗಿರುವನು. ರೋಗಿಗೆ ಹೃದಯದಲ್ಲಿ ಅಡಗಿರುವ ಸಮಸ್ತ ಕಾಮುಗಳು ಬಿಡುಗಡೆಯನ್ನು ಹೊಂದುತ್ತವೆ.

೩೪. ಆಗ ಪಂಡಿತನೆಂದು ಎನಿಸಿಕೊಂಡಿರುವ ಆ ಯೋಗಿಯು ಮುಕ್ತನಾಗಿ ಕ್ಷೇಮವನ್ನು ಹೊಂದುತ್ತಾನೆ. ಆ ಯೋಗಿಯು ಭೂತಗಳ ಭೇದವಿಸ್ತಾರವನ್ನು ಒಂದೇ ವ್ಯಾಪಕ ವಸ್ತುವಿನಲ್ಲಿ ಅಡಗಿರುವಂತೆ ನೋಡುತ್ತಾನೆ.

ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ಸದಾ ।
ಯದಾ ಪಶ್ಯತಿ ಚಾತ್ಮಾನಂ ಕೇವಲಂ ಪರಮಾರ್ಥತಃ ॥ ೩೫ ॥

ಮಾಯಾಮಾತ್ರಂ ತದಾ ಸರ್ವಂ ಜಗದ್ಭವತಿ ನಿರ್ವೃತಃ ॥ ೩೬ ॥

ಯದಾ ಜನ್ಮಜರಾದುಃಖವ್ಯಾಧೀನಾಮೇಕಭೇಷಜಮ್ ।
ಕೇವಲಂ ಬ್ರಹ್ಮವಿಜ್ಞಾನಂ ಜಾಯತೇಽಸೌ ತದಾ ಶಿವಃ ॥ ೩೭ ॥

ಯಥಾ ನದೀನದಾ ಲೋಕೇ ಸಾಗರೇಣೈಕತಾಂ ಯಯುಃ ।
ತದ್ವದಾತ್ಮಾಕ್ಷರೇಣಾಸೌ ನಿಷ್ಕಲೇನೈಕತಾಂ ವ್ರಜೇತ್ ॥ ೩೮ ॥

---

೩೫. ಅದರಿಂದಲೇ ವಿಸ್ತಾರರೂಪವನ್ನು ಹೊಂದಿದ ಬ್ರಹ್ಮವಸ್ತುವಿನ ಅಭೇದ ವನ್ನು ಯಾವಾಗಲೂ ಹೊಂದುತ್ತಾನೆ. ಹೀಗೆ ದ್ವಿತೀಯವಸ್ತು ಶೂನ್ಯನಾದ ಆತ್ಮನನ್ನು ಪರಮಾರ್ಥರೂಪದಿಂದ ಸಾಕ್ಷಾತ್ಕರಿಸುವನು.

೩೬. ಹೀಗೆ ಸರ್ವಾತ್ಮತ್ವ, ಅದ್ವೀತೀಯತ್ವ ಭಾವನೆಗಳಿಂದ ಆತ್ಮ ಪರಮಾರ್ಥ ಜ್ಞಾನದಲ್ಲಿ ನಿಷ್ಠೆಯುಳ್ಳಯೋಗಿಗೆ ಈ ಸಮಸ್ತ ಜಗತ್ತು ಕೇವಲವಾಗಿ, ಮಾಯಾವಿಲಾಸವಾಗಿ ತೋರುವುದು. ಈ ಜ್ಞಾನದಿಂದ ಯೋಗಿಯು ಕೃತಕೃತ್ಯ ನಾಗಿರುವನು.

೩೭. ಮಾನವನಿಗೆ ಜನ್ಮ, ಜರೆ, ದುಃಖ, ರೋಗ ಮುಂತಾದ ವ್ಯಾಧಿಗಳಿಗೆ ಒಂದೇ ಭೇಷಜದಂತಿರುವ ಅದ್ವಿತೀಯ ಬ್ರಹ್ಮಾತ್ಮ ಜ್ಞಾನವು ಯಾವಾಗ ಹುಟ್ಟು ವುದೋ ಆಗ ಅವನು ಶಿವಸ್ವರೂಪನಾಗುವನು.

೩೮. ಲೋಕದಲ್ಲಿ ಅನೇಕ ನದೀ ಮತ್ತು ನದಗಳು ಸಮುದ್ರದಲ್ಲಿ ಹೇಗೆ ಐಕ್ಯವನ್ನು ಹೊಂದುವುವೋ ಹಾಗೆ ನಮ್ಮ ಆತ್ಮನು ನಿರವಯನಾದ ಅಕ್ಷರಾತ್ಮ ನೊಡನೆ ಐಕ್ಯವನ್ನು ಹೊಂದುವನು.

ತಸ್ಮಾದ್ವಿಜ್ಞಾನಮೇವಾಸ್ತಿ ನ ಪ್ರಪಂಚೋ ನ ಸಂಸ್ಥಿತಿಃ ।
ಅಜ್ಞಾನೇನಾವೃತಂ ಲೋಕೇ ವಿಜ್ಞಾನಂ ತೇನ ಮುಹ್ಯತಿ　　॥ ೩೯ ॥

ವಿಜ್ಞಾನಂ ನಿರ್ಮಲಂ ಸೂಕ್ಷ್ಮಂ ನಿರ್ವಿಕಲ್ಪಂ ತದವ್ಯಯಮ್ ।
ಅಜ್ಞಾನಮಿತರತ್ ಸರ್ವಂ ವಿಜ್ಞಾನಮಿತಿ ತನ್ಮತಮ್　　॥ ೪೦ ॥

ಏತದ್ವಃ ಕಥಿತಂ ಸಾಂಖ್ಯಂ ಭಾಷಿತಂ ಜ್ಞಾನಮುತ್ತಮಮ್ ।
ಸರ್ವವೇದಾಂತಸಾರಂ ಹಿ ಯೋಗಸ್ತತ್ರೈಕಚಿತ್ತತಾ　　॥ ೪೧ ॥

ಯೋಗಾತ್ಸಂಜಾಯತೇ ಜ್ಞಾನಂ ಜ್ಞಾನಾದ್ಯೋಗಃ ಪ್ರವರ್ತತೇ ।
ಯೋಗಜ್ಞಾನಾಭಿಯುಕ್ತಸ್ಯ ನಾವಾಪ್ಯಂ ವಿದ್ಯತೇ ಕ್ವಚಿತ್　　॥ ೪೨ ॥

---

೩೯. ಆದುದರಿಂದ ಲೋಕ ಅವುಗಳ ಸನ್ನಿವೇಶ ಇದಾವುದೂ ಪರಮಾರ್ಥವಲ್ಲ. ವಿಜ್ಞಾನ ಎಂಬುದೊಂದೇ ನಿಜವಾದ ತತ್ವವು. ಲೋಕದಲ್ಲಿ ಈ ತತ್ವಜ್ಞಾನವು ಅಜ್ಞಾನದಿಂದ ಆವರಿಸಲ್ಪಡುವುದರಿಂದ ಪ್ರಾಣಿಯು ಮೋಹಗೊಳ್ಳುವುದು.

೪೦. ವಿಜ್ಞಾನವು, ನಿರ್ಮಲವೂ, ಸೂಕ್ಷ್ಮವೂ, ವಿಕಲ್ಪವರ್ಜಿತವೂ ಮತ್ತು ಅವ್ಯಯವೂ ಆಗಿರುವುದು. ಇದಕ್ಕೆ ವ್ಯತಿರಿಕ್ತವಾದ ಸರ್ವವಸ್ತುವೂ, ಅಜ್ಞಾನವೆನಿಸುವುದು. ಅದು ವಿಜ್ಞಾನರೂಪವೆಂದೇ ಭಾವಿಸಲು ಅರ್ಹವು.

೪೧. ಹೀಗೆ ಸಮಸ್ತ ವೇದಾಂತಗಳ ಸಾರಾಂಶರೂಪವೂ, ಸರ್ವೋತ್ತಮವೂ, ಪರಮಾತ್ಮತತ್ವ ವಿಷಯಕವಾದ್ದರಿಂದ ಸಾಂಖ್ಯವೆಂದು ವ್ಯವಹರಿಸಲ್ಪಟ್ಟಿರುವುದೂ ಆದ ಜ್ಞಾನವು ನಿಮಗೆ ನನ್ನಿಂದ ಹೇಳಲ್ಪಟ್ಟಿದೆ. ಈ ಜ್ಞಾನಕ್ಕೆ ಚಿತ್ತೈಕಾಗ್ರತೆಯು ಮುಖ್ಯವಾದ ಸಾಧನವು.

೪೨. ಯೋಗದಿಂದ ಜ್ಞಾನವು ಉದಯಿಸುತ್ತದೆ. ಜ್ಞಾನದಿಂದ ಯೋಗವು ವೃದ್ಧಿಯಾಗುತ್ತದೆ. ಯೋಗ ಮತ್ತು ಜ್ಞಾನದಿಂದ ಸಹಿತನಾದ ಮನುಷ್ಯನಿಗೆ ದೊರಕಲಾರದ ಯಾವುದೊಂದು ವಸ್ತುವೂ ಎಲ್ಲಿಯೂ ಇಲ್ಲ.

ಯದೇವ ಯೋಗಿನೋ ಯಾಂತಿ ಸಾಂಖ್ಯೈಸ್ತದಧಿಗಮ್ಯತೇ ।
ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ತತ್ತ್ವವಿತ್॥ ೪೩ ॥

ಅನ್ಯೇ ಹಿ ಯೋಗಿನೋ ವಿಪ್ರಾ ಹ್ಯೈಶ್ವರ್ಯಾಸಕ್ತಚೇತಸಃ ।
ಮಜ್ಜಂತಿ ತತ್ರ ತತ್ರೈವ ಯೇ ಚಾನ್ಯೇ ಕುಂಠಬುದ್ಧಯಃ ॥ ೪೪ ॥

ಯತ್ತತ್ಸರ್ವಗತಂ ದಿವ್ಯಮೈಶ್ವರ್ಯಮಮಲಂ ಮಹತ್ ।
ಜ್ಞಾನಯೋಗಾಭಿಯುಕ್ತಸ್ತು ದೇಹಾಂತೇ ತದವಾಪ್ನುಯಾತ್ ॥ ೪೫ ॥

ಏಷ ಆತ್ಮಾಹಮವ್ಯಕ್ತೋ ಮಾಯಾವೀ ಪರಮೇಶ್ವರಃ ।
ಕೀರ್ತಿತಃ ಸರ್ವವೇದೇಷು ಸರ್ವಾತ್ಮಾ ಸರ್ವತೋಮುಖಃ ॥ ೪೬ ॥

---

೪೩. ಯೋಗಿಗಳು ಯೋಗಬಲದಿಂದ ಹೊಂದುವ ಪರಮಗತಿಯು, ಸಾಂಖ್ಯ ಜ್ಞಾನನಿಷ್ಠರಾದವರಿಂದಲೂ ಹೊಂದಲ್ಪಡುತ್ತದೆ. ಯಾವನು ಸಾಂಖ್ಯ ಮತ್ತು ಯೋಗಮಾರ್ಗಗಳನ್ನು ಫಲಾಂಶದಲ್ಲಿ ಅಭಿನ್ನಗಳೆಂದು ತಿಳಿಯುವನೋ ಅವನೇ ತತ್ವಜ್ಞನು.

೪೪. ವಿಪ್ರರೇ ! ಅಣಿಮಾದಿ ಐಶ್ವರ್ಯಭೋಗದಲ್ಲಿ ಆಸಕ್ತಿಹೊಂದಿದ ಮಾನಸವುಳ್ಳ ಕೆಲವು ಯೋಗಿಗಳು ಮಂದವಾದ ಬುದ್ಧಿಯುಳ್ಳವರೂ ಆಯಾಯ ಫಲಪರಂಪರೆಗಳಲ್ಲಿಯೇ ಮುಳುಗುವರು.

೪೫. ದಿವ್ಯವೂ, ನಿರ್ಮಲವೂ, ಮಹೈಶ್ವರ್ಯಸಮಾನವೂ ಆದ ಯಾವ ಫಲವು ಸಮಸ್ತ ಜ್ಞಾನಿಗಳಿಗೆ ಸಮ್ಮತವಾಗಿರುವುದೋ ಜ್ಞಾನನಿಷ್ಠೆಯಲ್ಲಿ ತತ್ಪರನಾದ ಮಾನವನು ದೇಹವಿಯೋಗಕಾಲದಲ್ಲಿ ಆ ಫಲವನ್ನು ಹೊಂದುವನು.

೪೬. ಹೀಗೆ ಮಾಯಾವಿಯಾದ ಪರಮೇಶ್ವರನು ಅವ್ಯಕ್ತನೂ, ಸರ್ವ ಪ್ರಾಣಿಗಳಿಗೆ ಆತ್ಮಸ್ವರೂಪನೂ, ಸರ್ವತೋಮುಖನೂ ಆಗಿರುವನೆಂದು ಸರ್ವ ವೇದಗಳಲ್ಲಿ ಕೀರ್ತಿಸಲ್ಪಟ್ಟಿರುವನು.

ಸರ್ವರೂಪಃ ಸರ್ವರಸಃ ಸರ್ವಗಂಧೋಽಜರೋಽಮರಃ ।
ಸರ್ವತಃಪಾಣಿಪಾದೋಽಹಮಂತರ್ಯಾಮೀ ಸನಾತನಃ ॥ ೪೭ ॥

ಅಪಾಣಿಪಾದೋ ಜವನೋ ಗ್ರಹೀತಾ ಹೃದಿ ಸಂಸ್ಥಿತಃ ।
ಅಚಕ್ಷುರಪಿ ಪಶ್ಯಾಮಿ ತಥಾಽಕರ್ಣಃ ಶೃಣೋಮ್ಯಹಮ್ ॥ ೪೮ ॥

ವೇದಾಹಂ ಸರ್ವಮೇವೇದಂ ನ ಮಾಂ ಜಾನಾತಿ ಕಶ್ಚನ ।
ಪ್ರಾಹುರ್ಮಹಾಂತಂ ಪುರುಷಂ ಮಾಮೇಕಂ ತತ್ತ್ವದರ್ಶಿನಃ ॥ ೪೯ ॥

ಪಶ್ಯಂತಿ ಋಷಯೋ ಹೇತುಮಾತ್ಮನಃ ಸೂಕ್ಷ್ಮದರ್ಶಿನಃ ।
ನಿರ್ಗುಣಾಮಲರೂಪಸ್ಯ ಯದೈಶ್ವರ್ಯಮನುತ್ತಮಮ್ ॥ ೫೦ ॥

---

೪೭. ಮತ್ತು ಈ ಅಹಂಪದಾರ್ಥವಾದ ಆತ್ಮನು ಸಮಸ್ತವಾದ ರೂಪ, ರಸ, ಗಂಧಗಳಿಂದ ಕೂಡಿದವನೂ, ಜರಾ-ಮರಣಗಳಿಂದ ವರ್ಜಿತನೂ, ಸರ್ವದೇಶಗಳಲ್ಲಿರುವ ಪಾಣಿಪಾದಗಳಿಂದ ಕೂಡಿದವನೂ, ಸರ್ವಾಂತರ್ಯಾಮಿಯೂ ಮತ್ತು, ಅನಾದಿಯೂ ಆಗಿರುವನು.

೪೮. ಮತ್ತು ಶುದ್ಧ ಆತ್ಮನಾದ ನಾನು ಪಾಣಿ-ಪಾದಗಳೆಂಬ ಕರ್ಮೇಂದ್ರಿಯವಿಲ್ಲದೆ ವೇಗದಿಂದ ನಡೆದು ಸರ್ವವಸ್ತುವನ್ನು ಗ್ರಹಿಸುವವನೂ, ಹೃದಯದಲ್ಲಿರುವವನೂ, ಚಕ್ಷುಸ್ಸು, ಕರ್ಣಗಳೆಂಬ ಜ್ಞಾನೇಂದ್ರಿಯವಿಲ್ಲದೆ ನೋಡುವವನೂ, ಕೇಳುವವನೂ ಆಗಿದ್ದೇನೆ.

೪೯. ನಾನು ಈ ಸಮಸ್ತ ಜಗತ್ತನ್ನೂ ತಿಳಿದಿರುವೆನು. ನನ್ನನ್ನು ಯಾರೂ ತಿಳಿಯಲಿಲ್ಲ. ತತ್ವಜ್ಞರು ನನ್ನನ್ನು ಅದ್ವಿತೀಯನಾದ ಮಹಾ ಪುರುಷನೆಂದು ಹೇಳುತ್ತಾರೆ.

೫೦. ಹಾಗೆ ಸೂಕ್ಷ್ಮದರ್ಶಿಗಳಾದ ಮಹರ್ಷಿಗಳು ಆತ್ಮನ ಕಾರಣವನ್ನು ತಿಳಿದಿರುತ್ತಾರೆ. ನಿರ್ಗುಣನೂ, ನಿರ್ಮಲನೂ ಆದ ಆತ್ಮನಿಗೆ ನಿರುಪಮವಾದ ಈಶ್ವರತ್ವ ಶಕ್ತಿಯು ರಾಜಿಸುವುದು.

ಯನ್ನ ದೇವಾ ವಿಜಾನಂತಿ ಮೋಹಿತಾ ಮಮ ಮಾಯಯಾ ।
ವಕ್ಷ್ಯೇ ಸಮಾಹಿತಾ ಯೂಯಂ ಶೃಣುಧ್ವಂ ಬ್ರಹ್ಮವಾದಿನಃ ॥ ೫೧ ॥

ನಾಹಂ ಪ್ರಶಸ್ತಃ ಸರ್ವಸ್ಯ ಮಾಯಾತೀತಸ್ಸ್ವಭಾವತಃ ।
ಪ್ರೇರಯಾಮಿ ತಥಾಪೀದಂ ಕಾರಣಂ ಸೂರಯೋ ವಿದುಃ ॥ ೫೨ ॥

ಯತ್ತೋ ಗುಹ್ಯತಮಂ ದೇಹಂ ಸರ್ವಗಂ ತತ್ತ್ವದರ್ಶಿನಃ ।
ಪ್ರವಿಷ್ಟಾ ಮಮ ಸಾಯುಜ್ಯಂ ಲಭಂತೇ ಯೋಗಿನೋಽವ್ಯಯಮ್ ॥

ಯೇ ಹಿ ಮಾಯಾಮತಿಕ್ರಾಂತಾ ಮಮ ಯಾ ವಿಶ್ವರೂಪಿಣೀ ।
ಲಭಂತೇ ಪರಮಂ ಶುದ್ಧಂ ನಿರ್ವಾಣಂ ತೇ ಮಯಾ ಸಹ ॥ ೫೪ ॥

---

೫೧. ನನ್ನ ಮಾಯೆಯಿಂದ ಮೋಹಿತರಾದ ದೇವತೆಗಳು ಆ ನನ್ನ ಐಶ್ವರ್ಯ ವನ್ನು ತಿಳಿಯುವುದಿಲ್ಲ. ಬ್ರಹ್ಮವಾದಿಗಳೇ ! ಆ ಪರಮಾತ್ಮನ ಈಶ್ವರ ತತ್ವವನ್ನು ನಾನು ಹೇಳುತ್ತೇನೆ. ನೀವು ಸಮಾಧಾನದಿಂದ ಶ್ರವಣಮಾಡಿಂ.

೫೨. ನಾನು ಮಾಯೆಯಿಂದ ಅತೀತನಾಗಿ ಸ್ವಾಭಾವಿಕವಾಗಿ ಸರ್ವಪ್ರಾಣಿ ಗಳಿಗೆ ಗೋಚರನಾಗುವುದಿಲ್ಲ. ಹಾಗಿದ್ದರೂ ಈ ಜಗತ್ತನ್ನು ಪ್ರವೃತ್ತಿಮಾರ್ಗದಲ್ಲಿ ಪ್ರೇರೇಪಿಸುತ್ತಿದ್ದೇನೆ. ಇದರ ಕಾರಣವನ್ನು ವಿದ್ವಾಂಸರು ಅರಿತಿರುವರು.

೫೩. ತತ್ವಜ್ಞರಾದ ಯೋಗಿಗಳು ಸರ್ವವ್ಯಾಪಿಯೂ, ಅತ್ಯಂತ ಗೋಪ್ಯವೂ ಆದ ನನ್ನ ದೇಹವನ್ನು ಪ್ರವೇಶಮಾಡಿ ಶಾಶ್ವತವಾದ ನನ್ನ ಸಾಯುಜ್ಯ ಮುಕ್ತಿ ಯನ್ನು ಹೊಂದುವರು.

೫೪. ವಿಶ್ವರೂಪವನ್ನು ತೋರಿಸುವ ನನ್ನ ಮಾಯೆಯನ್ನು ಯಾವ ಮಾನವರು ತರಣಮಾಡುವರೋ ಅವರು ಶ್ರೇಷ್ಠವೂ, ಶುದ್ಧವೂ ಆದ ಮೋಕ್ಷ ಸಾಮ್ರಾಜ್ಯವನ್ನು ನನ್ನೊಡನೆ ಅನುಭವಿಸುತ್ತಾರೆ.

ನ ತೇಷಾಂ ಪರಮಾವೃತ್ತಿಃ ಕಲ್ಪಕೋಟಿಶತೈರಪಿ ।
ಪ್ರಸಾದಾನ್ಮಮ ಯೋಗೀಂದ್ರಾ ಏತದ್ವೇದಾನುಶಾಸನಮ್ ॥ ೫೫ ॥

ತತ್ಪುತ್ರಶಿಷ್ಯಯೋಗಿಭ್ಯೋ ದಾತವ್ಯಂ ಬ್ರಹ್ಮವಾದಿಭಿಃ ।
ಮದುಕ್ತಮೇತದ್ವಿಜ್ಞಾನಂ ಸಾಂಖ್ಯಂ ಯೋಗಸಮಾಶ್ರಿತಮ್ ॥ ೫೬ ॥

ಇತಿ ಶ್ರೀ ಕೂರ್ಮಪುರಾಣೇ ಪಂಚಪಂಚಾಶತ್ತಮೋಽಧ್ಯಾಯಃ.

---

೫೫. ಯೋಗಿಶ್ರೇಷ್ಠರೆ! ನನ್ನ ಅನುಗ್ರಹದಿಂದ ಮುಕ್ತರಾದ ಮಾನವರಿಗೆ ನೂರಾರು ಕೋಟಿಗಳಷ್ಟು ಕಲ್ಪಗಳು ಕಳೆದರೂ ಮತ್ತೆ ಪುನರಾವರ್ತಿಯು ಇರುವುದಿಲ್ಲ. ಹೀಗೆಂಬುದು ವೇದಗಳ ಶಾಸನವು.

೫೬. ನಾನು ಉಪದೇಶಿಸಿದ ಯೋಗ ವಿಧಾನಗಳನ್ನು ಆಶ್ರಯಿಸಿದ ಈ ಸಾಂಖ್ಯ ತತ್ವವಿಜ್ಞಾನವು ಬ್ರಹ್ಮವಾದಿಗಳಿಂದ ಯೋಗ್ಯರಾದ ಪುತ್ರ, ಶಿಷ್ಯ ಮತ್ತು ಯೋಗಿಗಳಿಗೆಮಾತ್ರ ಉಪದೇಶಿಸಲು ಅರ್ಹವಾದುದು.

( ಕೂರ್ಮಪುರಾಣದಲ್ಲಿ ಐವತ್ತೈದನೆಯ ಅಧ್ಯಾಯವು ಮುಗಿದುದು. )

ಶ್ರೀಃ

# ಕೂರ್ಮಪುರಾಣಂ

---

## ಷಟ್ಪಂಚಾಶತ್ತಮೋಽಧ್ಯಾಯಃ.

ಈಶ್ವರ ಉವಾಚ :—

ಅವ್ಯಕ್ತಾದಭವತ್ಕಾಲಃ ಪ್ರಧಾನಂ ಪುರುಷಃ ಪರಃ ।
ತೇಭ್ಯಃ ಸರ್ವಮಿದಂ ಜಾತಂ ತಸ್ಮಾದ್ಬ್ರಹ್ಮಮಯಂ ಜಗತ್ ॥ ೧ ॥

ಸರ್ವತಃಪಾಣಿಪಾದಾಂತಂ ಸರ್ವತೋಽಕ್ಷಿಶಿರೋಮುಖಮ್ ।
ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥ ೨ ॥

---

## ಐವತ್ತಾರನೆಯ ಅಧ್ಯಾಯವು

೧. ಈಶ್ವರನು ಹೀಗೆಂದು ಉಪದೇಶಿಸಿದನು ;—ಪರಮಪುರುಷನು ಅವ್ಯಕ್ತವೆಂಬ ಬೀಜದಿಂದ ಕಾಲ ಪ್ರಧಾನ ಪುರುಷ ಎಂಬ ತತ್ವಗಳಾಗಿ ಪರಿಣಮಿಸಿದನು. ಅವುಗಳಿಂದ ಸಮಸ್ತ ಪ್ರಪಂಚವು ಜನಿಸಿರುವುದು. ಆದುದರಿಂದ ಈ ಸಮಸ್ತ ಜಗತ್ತೂ ಬ್ರಹ್ಮಮಯವಾದುದು.

೨. ಆ ಪರತತ್ವವು ಎಲ್ಲ ಕಡೆಗಳಲ್ಲಿಯೂ ಪಾಣಿ, ಪಾದ, ನೇತ್ರ, ಶಿರಸ್ಸು, ಮುಖ, ಕರ್ಣ ಮುಂತಾದ ಅವಯವಗಳುಳ್ಳದ್ದಾಗಿ ವಿಶ್ವವನ್ನು ಆವರಿಸಿಕೊಂಡಿದೆ. ಆ ಬ್ರಹ್ಮ ವಸ್ತುವು ಸರ್ವಪ್ರಾಣಿಗಳ ಅವಯವಗಳಿಂದ ಅವಯವಗಳನ್ನು ಹೊಂದಿದೆ.

ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಮ್ ।
ಸರ್ವಾಧಾರಂ ಸದಾನಂದಮ್ಮವ್ಯಕ್ತಂ ದ್ವೈತವರ್ಜಿತಮ್ ॥ ೩ ॥

ಸರ್ವೋಪಮಾನರಹಿತಂ ಪ್ರಮಾಣಾತೀತಗೋಚರಮ್ ।
ನಿರ್ವಿಕಲ್ಪಂ ನಿರಾಭಾಸಂ ಸರ್ವಾವಾಸಂ ಪರಾಮೃತಮ್ ॥ ೪ ॥

ಅಭಿನ್ನಂ ಭಿನ್ನಸಂಸ್ಥಾನಂ ಶಾಶ್ವತಂ ಧ್ರುವಮವ್ಯಯಮ್ ।
ನಿರ್ಗುಣಂ ಪರಮಂ ಜ್ಯೋತಿಸ್ತಜ್ಞಾನಂ ಸೂರಯೋ ವಿದುಃ ॥ ೫ ॥

ಸ ಆತ್ಮಾ ಸರ್ವಭೂತಾನಾಂ ಸ ಬಾಹ್ಯಾಭ್ಯಂತರಃ ಪರಃ ।
ಸೋಽಹಂ ಸರ್ವತ್ರಗಃ ಶಾಂತೋ ಜ್ಞಾನಾತ್ಮಾ ಪರಮೇಶ್ವರಃ ॥ ೬ ॥

---

೩. ಮತ್ತು ಆ ಬ್ರಹ್ಮವಸ್ತುವು ಸಮಸ್ತ ಇಂದ್ರಿಯಗಳ ಗುಣಸಂಪರ್ಕದಿಂಡ ಗುಣವತ್ತಾಗಿ ತೋರುವುದೂ, ಸಮಸ್ತ ಇಂದ್ರಿಯಗಳಿಂದ ವರ್ಜಿತವೂ, ಸರ್ವ ವಸ್ತುಗಳಿಗೆ ಆಧಾರವೂ, ಯಾವಾಗಲೂ ಆನಂದರೂಪವೂ, ಅವ್ಯಕ್ತವೂ, ದ್ವೈತದಿಂದ ವರ್ಜಿತವೂ ಆಗಿದೆ.

೪. ಮತ್ತು ಸಮಸ್ತ ಉಪಮಾನಗಳಿಂದ ರಹಿತವೂ ಪ್ರಮಾಣಗಳನ್ನು ಲಂಘಿಸಿ ಪ್ರಕಾಶಿಸುವುದೂ, ವಿಕಲ್ಪಶೂನ್ಯವೂ, ಆಭಾಸ ರಹಿತವೂ, ಸರ್ವಪ್ರಾಣಿಗಳಿಗೆ ವಾಸಾಧಾರವೂ ಮತ್ತು ಉತ್ತಮಾಮೃತರೂಪವೂ ಆಗಿದೆ.

೫. ಮತ್ತು ಅಭಿನ್ನವೂ, ಭಿನ್ನವಾದ ಆಕಾರಗಳುಳ್ಳದ್ದೂ, ಶಾಶ್ವತವೂ, ಅಚಲವೂ, ಅವ್ಯಯವೂ, ಗುಣಾತೀತವೂ, ಪ್ರಶಸ್ತವೂ, ಪರಜ್ಯೋತಿರೂಪವೂ ಆದ ಆತ್ಮ ತತ್ವಜ್ಞಾನವನ್ನು ಜ್ಞಾನಿಗಳು ಅರಿತಿರುವರು.

೬. ಜ್ಞಾನರೂಪಿಯಾದ ಪರಮೇಶ್ವರನು ಸರ್ವಭೂತಗಳಿಗೆ ಆತ್ಮನೂ ಬಾಹ್ಯ ಮತ್ತು ಅಂತರ ವಸ್ತುಸ್ವರೂಪನೂ, ಸರ್ವೋತ್ತಮನೂ, ಸರ್ವವ್ಯಾಪಿಯೂ ಮತ್ತು ಶಾಂತಾಕಾರನೂ ಆಗಿರುವನು.

ಮಯಾ ತತಮಿದಂ ವಿಶ್ವಂ ಜಗತ್ ಸ್ಥಾವರಜಂಗಮಮ್ ।
ಮತ್ಸ್ಥಾನಿ ಸರ್ವಭೂತಾನಿ ಯಸ್ತಂ ವೇದವಿದೋ ವಿದುಃ ॥ ೭ ॥

ಪ್ರಧಾನಂ ಪುರುಷಂ ಚೈವ ತದ್ವಸ್ತು ಸಮುದಾಹೃತಮ್ ।
ತಯೋರನಾದಿರುದ್ದಿಷ್ಟಃ ಕಾಲಃ ಸಂಯೋಗಜಃ ಪರಃ ॥ ೮ ॥

ತ್ರಯಮೇತದನಾದ್ಯಂತಮವ್ಯಕ್ತೇ ಸಮವಸ್ಥಿತಮ್ ।
ತದಾತ್ಮಕಂ ತದನ್ಯತ್ ಸ್ಯಾತ್ತದ್ರೂಪಂ ಮಾಮಕಂ ವಿದುಃ ॥ ೯ ॥

ಮಹದಾದ್ಯಂ ವಿಶೇಷಾಂತಂ ಸಂಪ್ರಸೂತೇಽಖಿಲಂ ಜಗತ್ ।
ಯಾ ಸಾ ಪ್ರಕೃತಿರುದ್ದಿಷ್ಟಾ ಮೋಹಿನೀ ಸರ್ವದೇಹಿನಾಮ್ ॥ ೧೦ ॥

---

೭. ಸ್ಥಾವರ ಜಂಗಮಗಳಿಂದ ಕೂಡಿದ ಈ ಸಮಸ್ತ ಪ್ರಪಂಚವು ನನ್ನಿಂದ ಸೃಷ್ಟಿಸಲ್ಪಟ್ಟಿದೆ. ಸರ್ವಭೂತಗಳು ನನ್ನಲ್ಲಿ ಆಶ್ರಯಹೊಂದಿವೆ. ಅಂತಹ ಆತ್ಮ ರೂಪವನ್ನು ವೇದಜ್ಞರು ತಿಳಿದಿರುವರು.

೮. ಈ ಜಗತ್ತಿಗೆ ಮೂಲಭೂತವಾದ ತತ್ವಗಳಲ್ಲಿ ಸೇರಿದ ಪ್ರಧಾನ ಪುರುಷ ಮತ್ತು ಅವುಗಳ ಸಂಯೋಗದಿಂದ ಹುಟ್ಟಿದ ಅನಾದಿಯಾಗಿ ವ್ಯವಹರಿಸಲ್ಪಟ್ಟ ಉತ್ತಮವಾದ ಕಾಲವು ಆ ಬ್ರಹ್ಮವಸ್ತುವಿನ ವಿಕಾರಗಳೆಂದು ಹೇಳಲ್ಪಟ್ಟಿವೆ.

೯. ಹಿಂದೆ ಹೇಳಿದ ಆದಿ-ಅಂತವರ್ಜಿತರಾದ ಮೂರು ಬೀಜಗಳು ಮೂಲ ತತ್ವದಲ್ಲಿ ಅಡಗಿರುವುವು. ಆದುದರಿಂದ ಈ ಜಗತ್ತು ಪ್ರಕೃತಿಸ್ವರೂಪವೂ, ಅದಕ್ಕೆ ವಿಲಕ್ಷಣವೂ ಆಗಿರುವುದು. ಆ ರೂಪಗಳು ನನ್ನ ಅಂಶಗಳೆಂದು ಪ್ರಾಜ್ಞರು ತಿಳಿದಿರುವರು.

೧೦. ಮಹತ್ತತ್ತ್ವ ಮೊದಲುಗೊಂಡು ವಿಶೇಷ ತತ್ತ್ವಗಳವರೆಗಿನ ಸಮಸ್ತ ಜಗತ್ತನ್ನು ಯಾವುದು ಸೃಷ್ಟಿಮಾಡುವುದೊ, ಅದು ಸಮಸ್ತ ಪ್ರಾಣಿಗಳನ್ನು ಮೋಹ ಪಡಿಸುವ ಪ್ರಕೃತಿಯೆಂದು ನಿರ್ದೇಶಿಸಲ್ಪಟ್ಟಿದೆ.

ಪುರುಷಃ ಪ್ರಕೃತಿಸ್ಥೋ ವೈ ಭುಂಕ್ತೇ ಯಃ ಪ್ರಾಕೃತಾನ್ ಗುಣಾನ್ ।
ಅಹಂಕಾರವಿಮುಕ್ತತ್ವಾತ್ ಪ್ರೋಚ್ಯತೇ ಪಂಚವಿಂಶಕಃ ॥ ೧೧ ॥

ಆದ್ಯೋ ವಿಕಾರಃ ಪ್ರಕೃತೇರ್ಮಹಾನಿತಿ ಚ ಕಥ್ಯತೇ ।
ವಿಜ್ಞಾತೃಶಕ್ತಿವಿಜ್ಞಾನಾದ್ಧ್ಯಹಂಕಾರಸ್ತದುತ್ಥಿತಃ ॥ ೧೨ ॥

ಏಕ ಏವ ಮಹಾನಾತ್ಮಾ ಸೋಽಹಂಕಾರೋಽಭಿಧೀಯತೇ ।
ಸ ಜೀವಃ ಸೋಽಂತರಾತ್ಮೇತಿ ಗೀಯತೇ ತತ್ತ್ವಚಿಂತಕೈಃ ॥ ೧೩ ॥

ತೇನ ವೇದಯತೇ ಸರ್ವಂ ಸುಖಂ ದುಃಖಂ ಚ ಜನ್ಮಸು ।
ಸ ವಿಜ್ಞಾನಾತ್ಮಕಸ್ತಸ್ಯ ಮನಃ ಸ್ಯಾದುಪಕಾರಕಮ್ ॥ ೧೪ ॥

೧೧. ಪುರುಷನು ಪ್ರಕೃತಿಗೆ ಅಧೀನನಾಗಿದ್ದುಕೊಂಡು ಪ್ರಕೃತಿ ನಿರ್ಮಿತಗಳಾದ ಗುಣವಿಶೇಷಗಳನ್ನು ಅನುಭವಿಸುತ್ತಾನೆ. ಆ ಪುರುಷನು ಅಹಂಕಾರದಿಂದ ವಿಮುಕ್ತವಾದ ಶುದ್ಧರೂಪವುಳ್ಳವನಾದುದರಿಂದ ಪಂಚವಿಂಶತಿ ತತ್ವರೂಪನೆಂದು ಹೇಳಲ್ಪಡುವನು.

---

೧೨. ಪ್ರಕೃತಿಯ ಮೊದಲನೆಯ ಪರಿಣಾಮವು ಮಹತ್ತತ್ತ್ವವೆಂದು ಕರೆಯಲ್ಪಡುವುದು. ಅದರಿಂದ ಹುಟ್ಟಿದ ಮತ್ತೊಂದು ತತ್ತ್ವವು ವಿಜ್ಞಾನಶಕ್ತಿಯಿಂದ ಕೂಡಿರುವುದರಿಂದ ಅಹಂಕಾರ ತತ್ತ್ವವೆಂದು ಸಂಕೇತಿಸಲ್ಪಟ್ಟಿದೆ.

೧೩. ಮೂಲಭೂತವಾದ ಮಹತ್ತತ್ತ್ವವೆಂಬ ಅದ್ವಿತೀಯ ಆತ್ಮನು ಅಹಂಕಾರವೆಂದು ಕರೆಯಲ್ಪಡುತ್ತಾನೆ. ಅವನು ಜೀವ ಮತ್ತು ಪರಮಾತ್ಮ ಮುಂತಾದ ರೂಪಗಳಿಂದ ತತ್ತ್ವ ಚಿಂತಕರಿಂದ ಕೀರ್ತಿಸಲ್ಪಡುತ್ತಾನೆ.

೧೪. ಆತ್ಮನು ಆಯಾಯ ಜನ್ಮಗಳಲ್ಲಿ ಅಹಂಕಾರದಿಂದ ಸುಖ-ದುಃಖಗಳನ್ನು ಅರಿಯುತ್ತಾನೆ. ವಿಜ್ಞಾನಮಯನಾದ ಆತ್ಮನಿಗೆ ಸುಖ-ದುಃಖಗಳ ಜ್ಞಾನದಲ್ಲಿ ಮನಸ್ಸು ಉಪಕರಿಸುವ ಸಾಧನವಾಗಿದೆ.

ತೇನಾಪಿ ತನ್ಮಯಸ್ತಸ್ಮಾತ್ ಸಂಸಾರಃ ಪುರುಷಸ್ಯ ತು ।
ಸ ಚಾವಿವೇಕಃ ಪ್ರಕೃತೌ ಸಂಗಾತ್ಕಾಲೇನ ಸೋಽಭವತ್ ॥ ೧೫ ॥

ಕಾಲಃ ಸೃಜತಿ ಭೂತಾನಿ ಕಾಲಃ ಸಂಹರತೇ ಪ್ರಜಾಃ ।
ಸರ್ವೇ ಕಾಲಸ್ಯ ವಶಗಾ ನ ಕಾಲಃ ಕಸ್ಯಚಿದ್ವಶೇ ॥ ೧೬ ॥

ಸೋಽಂತರಾ ಸರ್ವಮೇವೇದಂ ನಿಯಚ್ಛತಿ ಸನಾತನಃ ।
ಪ್ರೋಚ್ಯತೇ ಭಗವಾನ್ ಪ್ರಾಣಃ ಸರ್ವಜ್ಞಃ ಪುರುಷೋತ್ತಮಃ ॥ ೧೭ ॥

ಸರ್ವೇಂದ್ರಿಯೇಭ್ಯಃ ಪರಮಂ ಮನ ಆಹುರ್ಮನೀಷಿಣಃ ।
ಮನಸಶ್ಚಾಪ್ಯಹಂಕಾರಮಹಂಕಾರಾನ್ಮಹಾನ್ ಪರಃ ॥ ೧೮ ॥

---

೧೫. ಹೀಗೆ ಸಾಧನವಾಗಿದ್ದ ಮನಸ್ಸಿನಿಂದ ಆತ್ಮನು ಮನೋಮಯನಾಗಿರುವನು. ಆ ರೂಪದಿಂದ ಪುರುಷನಿಗೆ ಸಂಸಾರವು ಸಂಭವಿಸಿರುವುದು. ಇದಕ್ಕೆ ಪ್ರಕೃತಿಯಲ್ಲಿ ಆತ್ಮನಿಗೆ ಉಂಟಾದ ವಿವೇಕವು ಮೂಲವು. ಆ ಸಂಗವು ಕಾಲ ವಶದಿಂದ ಉಂಟಾಗಿದೆ.

೧೬. ಕಾಲವು ಜಗತ್ತನ್ನು ಸೃಷ್ಟಿಸುತ್ತದೆ. ಕಾಲವು ಭೂತಗಳನ್ನು ಸಂಹರಿಸುತ್ತದೆ. ಸರ್ವಭಾವ ವಸ್ತುಗಳು ಕಾಲದ ಅಧೀನದಲ್ಲಿರುವುವು. ಕಾಲವು ಯಾರಿಗೂ ಅಧೀನವೆನಿಸಿಕೊಂಡಿಲ್ಲ.

೧೭. ಭಗವಂತನೂ, ಅನಾದಿಯೂ, ಸರ್ವಜ್ಞನೂ ಆದ ಪುರುಷೋತ್ತಮನು ಪ್ರಾಣರೂಪದಿಂದ ಅಂತರ್ಯಾಮಿಯಾಗಿ ಸಮಸ್ತ ಜಗತ್ತನ್ನು ನಿಯಮನ ಮಾಡುವನೆಂದು ಹೇಳಲ್ಪಡುತ್ತಾನೆ.

೧೮. ಜ್ಞಾನಿಗಳು ಎಲ್ಲ ಇಂದ್ರಿಯಗಳಿಗಿಂತ ಮನಸ್ಸು ಉತ್ಕೃಷ್ಟವೆಂದು ಹೇಳುವರು. ಅಂತಹ ಮನಸ್ಸಿಗಿಂತ ಅಹಂಕಾರವು ಶ್ರೇಷ್ಠವು. ಅಹಂಕಾರಕ್ಕಿಂತ ಮಹತ್ತತ್ತ್ವವು ಪ್ರಶಸ್ತವಾದುದು.

ಮಹತಃ ಪರಮವ್ಯಕ್ತಮವ್ಯಕ್ತಾತ್ಪುರುಷಃ ಪರಃ ।
ಪುರುಷಾದ್ಭಗವಾನ್ ಪ್ರಾಣಸ್ತಸ್ಯ ಸರ್ವಮಿದಂ ಜಗತ್ ॥ ೧೯ ॥

ಪ್ರಾಣಾತ್ಪರತರಂ ವ್ಯೋಮ ವ್ಯೋಮಾತೀತೋಽಗ್ನಿರೀಶ್ವರಃ ।
ಸೋಽಹಂ ಬ್ರಹ್ಮಾವ್ಯಯಃ ಶಾಂತೋ ಮಾಯಾತೀತಮಿಗಂ ಜಗತ್ ॥

ನಾಸ್ತಿ ಮತ್ತಃ ಪರಂ ಭೂತಂ ಮಾಂ ಚ ವಿಜ್ಞಾಯ ಮುಚ್ಯತೇ ।
ನಿತ್ಯಂ ನಾಸ್ತೀತಿ ಜಗತಿ ಭೂತಂ ಸ್ಥಾವರಜಂಗಮ್ ॥ ೨೧ ॥

ಋತೇ ಮಾಮೇವಮವ್ಯಕ್ತಂ ವ್ಯೋಮರೂಪಂ ಮಹೇಶ್ವರಮ್ ।
ಸೋಽಹಂ ಸೃಜಾಮಿ ಸಕಲಂ ಸಂಹರಾಮಿ ಸದಾ ಜಗತ್ ॥ ೨೨ ॥

---

೧೯. ಮಹದಾತ್ಮವಸ್ತುವಿಗಿಂತ ಅವ್ಯಕ್ತ ತತ್ತ್ವವು ಉತ್ತಮವು, ಅವ್ಯಕ್ತಕ್ಕಿಂತ ಪುರುಷನು ಶ್ಲಾಘ್ಯನಾದವನು. ಅಂತಹ ಪುರುಷನಿಗಿಂತ ಪೂಜ್ಯನಾದ ಪ್ರಾಣಾತ್ಮನು ಸಾರರೂಪನು, ಪ್ರಾಣಾತ್ಮನಿಗೆ ಈ ಸಮಸ್ತ ಜಗತ್ತು ಅಧೀನವಾಗಿದೆ.

೨೦. ಪ್ರಾಣಕ್ಕಿಂತ ವ್ಯೋಮತತ್ತ್ವವು ಶ್ರೇಷ್ಠವಾದುದು. ವ್ಯೋಮ ತತ್ತ್ವಕ್ಕಿಂತಲೂ ಅಗ್ನಿರೂಪಿಯಾದ ಈಶ್ವರನು ಉತ್ತಮನು. ಅಂತಹ ಅವ್ಯಯನೂ, ಶಾಂತನೂ, ಪರಬ್ರಹ್ಮನೂ ಆದ ಈಶ್ವರನು ನಾನೇ ಆಗಿರುವೆನು. ಈ ಜಗತ್ತು ಮಾಯೆಯ ಪಾರಮಾರ್ಥಿಕ ಸಂಬಂಧವನ್ನು ಲಂಘಿಸಿರುವುದು.

೨೧. ಲೋಕದಲ್ಲಿ ನನಗಿಂತ ಬೇರೆಯಾದ ಭೂತವು ಇರುವುದಿಲ್ಲ. ಹೀಗೆ ನನ್ನನ್ನು ತಿಳಿದವನು ಮುಕ್ತನಾಗುವನು. ನನಗೆ ವ್ಯತಿರಿಕ್ತವಾಗಿ ಸ್ಥಾವರ-ಜಂಗಮ ಪ್ರಪಂಚದಲ್ಲಿ ಸೇರಿದ ಭೂತವು ಯಾವುದೂ ಯಾವಾಗಲೂ ಇಲ್ಲ.

೨೨. ಅವ್ಯಕ್ತನೂ, ವ್ಯೋಮರೂಪಿಯೂ ಆದ ಮಹೇಶ್ವರನನ್ನು ಬಿಟ್ಟು ಬೇರೊಂದು ವಸ್ತುವಿಗೆ ಆತ್ಮಲಾಭವಿಲ್ಲ. ಆ ನಾನು ಯಾವಾಗಲೂ ಸಮಸ್ತ ಜಗತ್ತನ್ನು ಸೃಜಿಸುತ್ತೇನೆ; ಹಾಗು ಸಂಹರಿಸುತ್ತೇನೆ.

**ಮಾಯಿೀ ಮಾಯಾಮಯೋ ದೇವಃ ಕಾಲೇನ ಸಹ ಸಂಗತಃ ।**
**ಮತ್ಸನ್ನಿಧಾವೇಷ ಕಾಲಃ ಕರೋತಿ ಸಕಲಂ ಜಗತ್ ।**
**ನಿಯೋಜಯತ್ಯನಂತಾತ್ಮಾ ಹ್ಯೇತದ್ವೇದಾನುಶಾಸನಮ್ ॥ ೨೩ ॥**

**ಇತಿ ಶ್ರೀ ಕೂರ್ಮಪುರಾಣೇ ಷಟ್ಪಂಚಾಶತ್ತಮೋಽಧ್ಯಾಯಃ.**

---

೨೩. ಈಶ್ವರನು ಮಾಯೆಯ ಅಧೀನದಿಂದ ಮಾಯಾಮಯನಾಗಿದ್ದು ಕಾಲದಿಂದ ಕೂಡಿ ಸ್ವವ್ಯಾಪಾರಗಳನ್ನು ನೆರವೇರಿಸುವನು. ಅನಂತಸ್ವರೂಪವಾದ ಕಾಲವು ನನ್ನ ಸನ್ನಿಧಿಯಲ್ಲಿ ಸಮಸ್ತ ಜಗತ್ತನ್ನು ನಿರ್ಮಿಸುವುದು. ಮತ್ತು ಅಸಾಧಾರಣವಾದ ಕರ್ಮಗಳಲ್ಲಿ ನಿಯಮಿಸುವುದು. ಹೀಗೆಂಬುದು ವೇದವಾಕ್ಯಗಳ ಶಾಸನವು.

( ಕೂರ್ಮಪುರಾಣದಲ್ಲಿ ಐವತ್ತಾರನೆಯ ಅಧ್ಯಾಯವು ಮುಗಿದುದು. )



ಶ್ರೀಃ

# ಕೂರ್ಮಪುರಾಣಂ

## ಸಪ್ತಪಂಚಾಶತ್ತಮೋಽಧ್ಯಾಯಃ.

ಈಶ್ವರ ಉವಾಚ :—

ವಕ್ಷ್ಯೇ ಸಮಾಹಿತಾ ಯೂಯಂ ಶೃಣುಧ್ವಂ ಬ್ರಹ್ಮವಾದಿನಃ ।
ಮಾಹಾತ್ಮ್ಯಂ ದೇವದೇವಸ್ಯ ಯೇನ ಸರ್ವಂ ಪ್ರವರ್ತತೇ ॥ ೧ ॥

ನಾಹಂ ತಪೋಭಿರ್ವಿವಿಧೈರ್ನ ದಾನೇನ ನ ಚೇಜ್ಯಯಾ ।
ಶಕ್ಯೋ ಹಿ ಪುರುಷೈರ್ಜ್ಞಾತುಮೃತೇ ಭಕ್ತಿಮನುತ್ತಮಾಮ್ ॥ ೨ ॥

---

## ಐವತ್ತೇಳನೆಯ ಅಧ್ಯಾಯವು

೧. ಈಶ್ವರನು ಹೀಗೆಂದು ಉಪದೇಶಿಸಿದನು :— ಸಮಸ್ತ ಜಗಚ್ಚಕ್ರವನ್ನು ನಡೆಸುತ್ತಿರುವ ದೇವೋತ್ತಮನಾದ ಮಹೇಶ್ವರನ ಮಾಹಾತ್ಮ್ಯವನ್ನು ವರ್ಣಿಸುತ್ತೇನೆ. ಬ್ರಹ್ಮವಾದಿಗಳೇ! ನೀವೆಲ್ಲರೂ ಸಾವಧಾನರಾಗಿ ಶ್ರವಣಮಾಡಿರಿ.

೨. ತಪಸ್ಸು, ದಾನ, ಯಜ್ಞ ಮುಂತಾದ ವಿವಿಧ ಕರ್ಮಗಳಿಂದ ನನ್ನ ಪರಮಾರ್ಥರೂಪವನ್ನು ಮಾನವರು ತಿಳಿಯಲಾರರು. ತೀವ್ರವಾದ ಭಕ್ತಿಯನ್ನು ಇಡುವುದೊಂದೇ ನನ್ನ ತತ್ತ್ವಜ್ಞಾನಕ್ಕೆ ಸಾಧನೆಯು.

ಅಹಂ ಹಿ ಸರ್ವಭೂತಾನಾಮಂತಸ್ತಿಷ್ಠಾಮಿ ಸರ್ವತಃ ।
ಮಾಂ ಸರ್ವಸಾಕ್ಷಿಣಂ ಲೋಕೋ ನ ಜಾನಾತಿ ಮುನೀಶ್ವರಾಃ ॥ ೩॥

ಯಸ್ಯಾಂತರಾ ಸರ್ವಮಿದಂ ಯೋ ಹಿ ಸರ್ವಾಂತಕಃ ಪರಃ ।
ಸೋಽಹಂ ಧಾತಾ ವಿಧಾತಾ ಚ ಕಾಲೋಽಗ್ನಿರ್ವಿಶ್ವತೋಮುಖಃ ॥ ೪ ॥

ನ ಮಾಂ ಪಶ್ಯಂತಿ ಮುನಯಃ ಸರ್ವೇ ಪಿತೃದಿವೌಕಸಃ ।
ಬ್ರಹ್ಮಾ ಚ ಮನವಃ ಶಕ್ರೋ ಯೇ ಚಾನ್ಯೇ ಪ್ರಥಿತೌಜಸಃ ॥ ೫ ॥

ಗೃಣಂತಿ ಸತತಂ ದೇವಾ ಮಾಮೇಕಂ ಪರಮೇಶ್ವರಮ್ ।
ಯಜಂತಿ ವಿವಿಧೈರ್ಯಜ್ಞೈರ್ಬ್ರಾಹ್ಮಣಾ ವೈದಿಕೈರ್ಮಖೈಃ ॥ ೬ ॥

---

೩. ಮುನೀಶ್ವರರೆ ! ನಾನು ಸರ್ವಭೂತಗಳ ಅಂತರ್ಯಾಮಿಯಾಗಿ ಸರ್ವ ದೇಶಗಳಲ್ಲಿಯೂ ಇರುವೆನು. ಜನರು ಸರ್ವಭೂತಗಳಿಗೆ ಸಾಕ್ಷಿರೂಪನಾಗಿರುವ ನನ್ನನ್ನು ತಿಳಿದುಕೊಂಡಿಲ್ಲ.

೪. ಯಾವ ಪರಮಾತ್ಮನಲ್ಲಿ ಈ ವಿಶ್ವಪ್ರಪಂಚವು ಅಡಗಿರುವುದೊ ; ಪ್ರಪಂಚದಲ್ಲಿ ಯಾವ ಪರಮಾತ್ಮನು ಅಂತರ್ಯಾಮಿಯಾಗಿರುವನೊ ; ಸೃಷ್ಟಿ ಕರ್ತನೂ, ಪಾಲಕನೂ, ಕಾಲರೂಪನೂ, ವಿಶ್ವತೋಮುಖನೂ, ಅಗ್ನಿರೂಪನೂ ಆದ ಆ ಪರಮಾತ್ಮನು ನಾನೇ ಆಗಿರುವೆನು.

೫. ಬ್ರಹ್ಮ, ಮನು, ಇಂದ್ರ, ಮುನಿ, ಪಿತೃ, ದೇವ ಮುಂತಾದವರಾರೂ ನನ್ನನ್ನು ಸಾಕ್ಷಾತ್ಕರಿಸಲು ಶಕ್ತರಾಗಿಲ್ಲ. ಹಾಗು ಪ್ರಸಿದ್ಧ ತೇಜಸ್ವಿಗಳು ಮತ್ತಾರೂ ನನ್ನನ್ನು ಸಾಕ್ಷಾತ್ಕರಿಸಲಾರರು.

೬. ವೇದಗಳು ಯಾವಾಗಲೂ ಅದ್ವಿತೀಯನೂ, ಪರಮೇಶ್ವರನೂ ಆದ ನನ್ನನ್ನು ಸ್ತುತಿಸುತ್ತವೆ. ಮತ್ತು ಬ್ರಾಹ್ಮಣರು ವೇದ ವಿಹಿತವಾದ ಅನೇಕ ಯಜ್ಞಕರ್ಮಾನುಷ್ಠಾನಗಳಿಂದ ನನ್ನನ್ನು ಅರ್ಚಿಸುತ್ತಾರೆ.

ಸರ್ವೇ ಲೋಕಾ ನ ಪಶ್ಯಂತಿ ಬ್ರಹ್ಮಾ ಲೋಕಪಿತಾಮಹಃ ।
ಧ್ಯಾಯಂತಿ ಯೋಗಿನೋ ದೇವಂ ಭೂತಾಧಿಪತಿಮೀಶ್ವರಮ್ ॥ ೭ ॥

ಅಹಂ ಹಿ ಸರ್ವಹವಿಷಾಂ ಭೋಕ್ತಾ ಚೈವ ಫಲಪ್ರದಃ ।
ಸರ್ವದೇವತನುರ್ಭೂತ್ವಾ ಸರ್ವಾತ್ಮಾ ಸರ್ವಸಂಪ್ಲುತಃ ॥ ೮ ॥

ಮಾಂ ಪಶ್ಯಂತೀಹ ವಿದ್ವಾಂಸೋ ಧಾರ್ಮಿಕಾ ವೇದವಾದಿನಃ ।
ತೇಷಾಂ ಸನ್ನಿಹಿತೋ ನಿತ್ಯಂ ಯೋ ಮಾಂ ನಿತ್ಯಮುಪಾಸತೇ ॥ ೯ ॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಧಾರ್ಮಿಕಾ ಮಾಮುಪಾಸತೇ ।
ತೇಷಾಂ ದದಾಮಿ ತತ್ ಸ್ಥಾನಮಾನಂದಂ ಪರಮಂ ಪದಮ್ ॥ ೧೦ ॥

---

೭. ಸಮಸ್ತ ಜನರು ಸರ್ವೇಶ್ವರನಾದ ನನ್ನನ್ನು ನಮಸ್ಕರಿಸುತ್ತಾರೆ. ಲೋಕಗಳಿಗೆ ಪಿತಾಮಹನೆನಿಸಿಕೊಂಡಿರುವ ಬ್ರಹ್ಮದೇವನು ವಂದಿಸುವನು. ಸಮಸ್ತ ಭೂತಾಧಿಪತಿಯೂ, ಈಶ್ವರನೂ ಆದ ನನ್ನನ್ನು ಯೋಗಿಗಳು ಧ್ಯಾನಿಸುತ್ತಾರೆ.

೮. ನಾನು ಸಮಸ್ತ ವಸ್ತುಗಳಲ್ಲಿ ಮಿಶ್ರಿತನೂ, ಸರ್ವಾತ್ಮಸ್ವರೂಪನೂ ಆಗಿ ಆಯಾಯ ಅನೇಕ ದೇವತಾ ವಿಗ್ರಹಗಳಿಂದ ಸಮಸ್ತ ಹವಿಸ್ಸುಗಳನ್ನು ಭುಂಜಿಸುವವನೂ ಮತ್ತು ಕರ್ಮಫಲ ಪ್ರದಾಯಕನೂ ಆಗಿರುವೆನು.

೯. ವೇದಗಳನ್ನು ನಂಬಿದವರೂ, ಧಾರ್ಮಿಕರೂ, ಮತ್ತು ಜ್ಞಾನಿಗಳೂ ಆಗಿರುವ ಮಾನವರು ನನ್ನನ್ನು ನೋಡುತ್ತಾರೆ. ಯಾವ ಮಾನವರು ನನ್ನನ್ನು ನಿತ್ಯದಲ್ಲಿಯೂ ಉಪಾಸನಮಾಡುವರೊ ಅವರಿಗೆ ಯಾವಾಗಲೂ ನಾನು ಸನ್ನಿಹಿತನಾಗಿರುವೆನು.

೧೦. ಬ್ರಾಹ್ಮಣರು, ಕ್ಷತ್ರಿಯರು, ಅಥವಾ ವೈಶ್ಯರು ಧಾರ್ಮಿಕರಾಗಿ ನನ್ನನ್ನು ಉಪಾಸನೆ ಮಾಡಿದರೆ ಅವರಿಗೆ ಆನಂದಾತ್ಮಕವೂ ಪರಮಪದವಿಯೂ ಆದ ಸ್ಥಾನವನ್ನು ನಾನು ಕೊಡುತ್ತೇನೆ.

ಅನ್ಯೇಽಪಿ ಯೇ ಸ್ವಧರ್ಮಸ್ಥಾಃ ಶೂದ್ರಾದ್ಯಾ ನೀಚಜಾತಯಃ ।
ಭಕ್ತಿಮಂತಃ ಪ್ರಮುಚ್ಯಂತೇ ಕಾಲೇನಾಪಿ ಹಿ ಸಂಗತಾಃ ॥ ೧೧ ॥

ಮದ್ಭಕ್ತಾ ನ ವಿನಶ್ಯಂತಿ ಮದ್ಭಕ್ತಾ ವೀತಕಲ್ಮಷಾಃ ।
ಆದಾವೇವ ಪ್ರತಿಜ್ಞಾತಂ ನ ಮೇ ಭಕ್ತಃ ಪ್ರಣಶ್ಯತಿ ॥ ೧೨ ॥

ಯೋ ವೈ ನಿಂದತಿ ತಂ ಮೂಢೋ ದೇವದೇವಂ ಸ ನಿಂದತಿ ।
ಯೋ ಹಿ ಪೂಜಯತೇ ಭಕ್ತ್ಯಾ ಸ ಪೂಜಯತಿ ಮಾಂ ಸದಾ ॥ ೧೩ ॥

ಪತ್ರಂ ಪುಷ್ಪಂ ಫಲಂ ತೋಯಂ ಮದಾರಾಧನಕಾರಣಾತ್ ।
ಯೋ ಮೇ ದದಾತಿ ನಿಯತಂ ಸ ಮೇ ಭಕ್ತಃ ಪ್ರಿಯೋ ಮಮ॥ ॥೧೪॥

---

೧೧. ತ್ರೈವರ್ಣಿಕರಲ್ಲದ ಶೂದ್ರ ಮುಂತಾದ ಅಧಮ ಜಾತಿಯವರು ಸ್ವಧರ್ಮದಲ್ಲಿದ್ದು ಭಕ್ತಿಯಿಂದ ನನ್ನನ್ನು ಸೇವಿಸಿದರೆ ಕಾಲಕ್ಕೆ ಅಧೀನರಾಗಿದ್ದರೂ ಕ್ರಮವಾಗಿ ಮುಕ್ತಿಯನ್ನು ಹೊಂದುವರು.

೧೨. ಯಾವಾಗಲೂ ನನ್ನ ಭಕ್ತರು ನಾಶಹೊಂದುವುದಿಲ್ಲ. ನನ್ನ ಭಕ್ತರು ಕಲ್ಮಷರಹಿತರಾದ ಪವಿತ್ರಾತ್ಮರು. ನನ್ನ ಭಕ್ತನು ಎಂದಿಗೂ ನಾಶಹೊಂದುವುದಿಲ್ಲ. ಎಂಬುದು ನನ್ನ ಮೊದಲನೆಯ ಪ್ರತಿಜ್ಞೆಯಾಗಿರುವುದು.

೧೩. ಯಾವ ಮಾನವನು ನನ್ನ ಭಕ್ತನನ್ನು ನಿಂದಿಸುವನೋ ; ಅವನು ದೇವದೇವನಾದ ಈಶ್ವರನನ್ನು ನಿಂದಿಸಿದಂತಾಗುವುದು. ಹಾಗು ನನ್ನ ಭಕ್ತನನ್ನು ಭಕ್ತಿಯಿಂದ ಪೂಜಿಸಿದರೆ ಯಾವಾಗಲೂ ನನ್ನನ್ನು ಪೂಜಿಸಿದಂತೆ ತಿಳಿಯುವೆನು.

೧೪. ನನ್ನನ್ನು ಆರಾಧಿಸುವ ಭಾವನೆಯಿಂದ ಯಾವ ಮಾನವನು ಪತ್ರ-ಪುಷ್ಪ-ಫಲ ಜಲಗಳೆಂಬ ಲಘು ವಸ್ತುಗಳನ್ನಾದರೂ ವಿನಿಯೋಗಿಸುವನೊ ; ಅವನು ನಿಜವಾಗಿ ನನಗೆ ಪ್ರಿಯನಾದ ಭಕ್ತನಾಗಿರುವನು.

ಅಹಂ ಹಿ ಜಗತಾಮಾದೌ ಬ್ರಹ್ಮಾಣಂ ಪರಮೇಷ್ಠಿನಮ್ ।
ವಿದಧೌ ದತ್ತವಾನ್ ವೇದಾನಶೇಷಾನಾತ್ಮನಿಃಸೃತಾನ್ ॥ ೧೫ ॥

ಅಹಮೇವ ಹಿ ಸರ್ವೇಷಾಂ ಯೋಗಿನಾಂ ಗುರುರವ್ಯಯಃ ।
ಧಾರ್ಮಿಕಾಣಾಂ ಚ ಗೋಪ್ತಾಹಂ ನಿಹಂತಾ ವೇದವಿದ್ವಿಷಾಮ್॥ ೧೬ ॥

ಅಹಂ ಹಿ ಸರ್ವಸಂಸಾರಾನ್ಮೋಚಿತೋ ಯೋಗಿನಾಮಿಹ ।
ಸಂಸಾರಹೇತುರೇವಾಹಂ ಸರ್ವಸಂಸಾರವರ್ಜಿತಃ ॥ ೧೭ ॥

ಅಹಮೇವ ಹಿ ಸಂಹರ್ತಾ ಸಂಸ್ರಷ್ಟಾ ಪರಿಪಾಲಕಃ ।
ಮಾಯಾ ವೈ ಮಾಮಿಕಾ ಶಕ್ತಿರ್ಮಾಯಾ ಲೋಕವಿಮೋಹನೀ ॥೧೮॥

---

೧೫. ಈ ಪ್ರಪಂಚದ ಸೃಷ್ಟಿಯ ಆದಿಯಲ್ಲಿ ನಾನು ಪರಮಸ್ಥಾನದಲ್ಲಿರುವ ಬ್ರಹ್ಮದೇವನನ್ನು ಸೃಷ್ಟಿಮಾಡಿದೆನು. ತರುವಾಯ ನನ್ನಿಂದ ಆವಿರ್ಭಾವಹೊಂದಿದ ಸಂಪೂರ್ಣ ವೇದಗಳನ್ನು ಬ್ರಹ್ಮದೇವನಿಗೆ ಉಪದೇಶಿಸಿದೆನು.

೧೬. ಸಮಸ್ತ ಯೋಗಿಗಳಿಗೆ ವ್ಯಯರಹಿತನಾದ ಸದ್ಗುರುವು ನಾನೇ ಆಗಿರುವೆನು. ಧಾರ್ಮಿಕ ಜನರನ್ನು ರಕ್ಷಿಸುವವನು ನಾನೇ ಆಗಿರುವೆನು. ಮತ್ತು ದುಷ್ಟರಾದ ವೇದನಿಂದಕರನ್ನು ಸಂಹರಿಸುವವನು ನಾನೇ ಆಗಿದ್ದೇನೆ.

೧೭. ನಾನುಈ ಲೋಕದಲ್ಲಿ ಯೋಗಿಗಳಿಗೆ ಸಮಸ್ತ ಸಂಸಾರಬಂಧನದಿಂದ ಮುಕ್ತಿಯನ್ನು ಕೊಡುವವನಾಗಿದ್ದೇನೆ. ಸಮಸ್ತ ಜಂತುಗಳ ಸಂಸಾರಕ್ಕೆ ಕಾರಣನೂ, ಸರ್ವ ಸಂಸಾರಧರ್ಮಗಳಿಂದ ವರ್ಜಿತನೂ ನಾನೇ ಆಗಿರುವೆನು.

೧೮. ಪ್ರಪಂಚದ ಸೃಷ್ಟಿ-ಸಂಹಾರ-ಪಾಲನ ವ್ಯಾಪಾರಗಳನ್ನು ನಾನು ನಿರ್ವಹಿಸುತ್ತೇನೆ. ಮಾಯೆಯು ನನ್ನ ಶಕ್ತಿರೂಪವಾಗಿ ನನ್ನನ್ನು ಆಶ್ರಯಿಸಿಕೊಂಡಿದೆ. ಅಂತಹ ಮಾಯೆಯು ಸರ್ವ ಪ್ರಾಣಿಗಳನ್ನು ಮುಗ್ಧರನ್ನಾಗಿ ಮಾಡುವುದು.

ಮಮೈವ ಚ ಪರಾ ಶಕ್ತಿರ್ಯಾ ಸಾ ವಿದ್ಯೇತಿ ಗೀಯತೇ ।
ನಾಶಯಾಮಿ ಚ ತಾಂ ಮಾಯಾಂ ಯೋಗಿನಾಂ ಹೃದಿ ಸಂಸ್ಥಿತಃ ॥೧೯॥

ಅಹಂ ಹಿ ಸರ್ವಶಕ್ತೀನಾಂ ಪ್ರವರ್ತಕನಿವರ್ತಕಃ ।
ಆಧಾರಭೂತಃ ಸರ್ವಾಸಾಂ ನಿಧಾನಮಮೃತಸ್ಯ ಚ ॥ ೨೦ ॥

ಏಕಾ ಸರ್ವಾಂತರಾ ಶಕ್ತಿಃ ಕರೋತಿ ವಿವಿಧಂ ಜಗತ್ ।
ನಾಹಂ ಪ್ರೇರಯಿತಾ ವಿಪ್ರಾಃ ಪರಮಂ ಯೋಗಮಾಶ್ರಿತಾಃ

ಆಸ್ಥಾಯ ಬ್ರಹ್ಮಣೋ ರೂಪಂ ಮನ್ಮಯೀ ಮದಧಿಷ್ಠಿತಾ ॥ ೨೧ ॥

ಅನ್ಯಾ ಚ ಶಕ್ತಿರ್ವಿಪುಲಾ ಸಂಸ್ಥಾಪಯತಿ ಮೇ ಜಗತ್ ।
ಭೂತ್ವಾ ನಾರಾಯಣೋಽನಂತೋ ಜಗನ್ನಾಥೋ ಜಗನ್ಮಯಃ ॥ ೨೨ ॥

---

೧೯. ತತ್ತ್ವವಿದ್ಯೆಯೆಂದು ಕರೆಯಲ್ಪಡುವ ವಸ್ತುವು ನನ್ನದೇ ಆದ ಒಂದು ಉತ್ತಮ ಶಕ್ತಿಯು. ಯೋಗಿಗಳ ಹೃದಯದಲ್ಲಿ ಸನ್ನಿಹಿತನಾಗಿದ್ದ ನಾನು ವಿದ್ಯಾ ಶಕ್ತಿಯಿಂದ ಆ ಮಾಯೆಯನ್ನು ನಾಶಮಾಡುವೆನು.

೨೦. ನಾನು ಸರ್ವವಿಧ ಶಕ್ತಿಗಳ ಪ್ರವೃತ್ತಿಕಾರಣನೂ, ನಿವೃತ್ತಿಕಾರಣನೂ, ಆಧಾರಸ್ವರೂಪನೂ ಮತ್ತು ಅಮೃತಸ್ವರೂಪವಾದ ಮೋಕ್ಷ ಪುರುಷಾರ್ಥಕ್ಕೆ ನಿಧಿಯಂತೆ ಇರುವವನೂ ಆಗಿದ್ದೇನೆ.

೨೧. ಸರ್ವಾಂತರವಾದ ಒಂದು ಶಕ್ತಿಯು ನನ್ನಿಂದ ಪ್ರೇರೇಪಿಸಲ್ಪಟ್ಟುದೂ ನನ್ನಿಂದ ಪೂರ್ಣವೂ ಆಗಿ ಬ್ರಹ್ಮದೇವನ ರೂಪವನ್ನು ಧರಿಸಿ ವಿವಿಧ ಜಗತ್ತನ್ನು ನಿರ್ಮಿಸುತ್ತಿರುವುದು.

೨೨. ನನ್ನ ವಿಪುಲವಾದ ಮತ್ತೊಂದು ಶಕ್ತಿಯು ವಿಶ್ವರೂಪನೂ, ಜಗನ್ನಾಯಕನೂ, ಅಂತಶೂನ್ಯನೂ ಆದ ನಾರಾಯಣಸ್ವರೂಪದಿಂದ ಜಗತ್ತನ್ನು ಯಾವಾಗಲೂ ಪಾಲಿಸುತ್ತಿರುವುದು.

ತೃತೀಯಾ ಮಹತೀ ಶಕ್ತಿರ್ನಿಹಂತಿ ಸಕಲಂ ಜಗತ್ ।
ತಾಮಸೀ ಮೇ ಸಮಾಖ್ಯಾತಾ ಕಾಲಾಖ್ಯಾ ರುದ್ರರೂಪಿಣೀ ॥ ೨೩ ॥

ಧ್ಯಾನೇನ ಮಾಂ ಪ್ರಪಶ್ಯಂತಿ ಕೇಚಿಜ್ಞಾನೇನ ಚಾಪರೇ ।
ಅಪರೇ ಭಕ್ತಿಯೋಗೇನ ಕರ್ಮಯೋಗೇನ ಚಾಪರೇ ॥ ೨೪ ॥

ಸರ್ವೇಷಾಮೇವ ಭಕ್ತಾನಾಮಿಷ್ಟಃ ಪ್ರಿಯತಮೋ ಮಮ ।
ಯೋ ಹಿ ಜ್ಞಾನೇನ ಮಾಂ ನಿತ್ಯಮಾರಾಧಯತಿ ನಾನ್ಯಥಾ ॥ ೨೫ ॥

ಅನ್ಯೇ ಚ ಹರಯೇ ಭಕ್ತಾ ಮದಾರಾಧನಕಾರಿಣಃ ।
ತೇಽಪಿ ಮಾಂ ಪ್ರಾಪ್ನುವಂತ್ಯೇವ ನಾವರ್ತಂತೇ ಚ ವೈ ಪುನಃ ॥ ೨೬ ॥

---

೨೩. ಮಹತ್ತಾದ ನನ್ನ ಮೂರನೆಯ ಶಕ್ತಿಯು ಸಕಲ ಪ್ರಪಂಚವನ್ನು ಸಂಹಾರಮಾಡುವುದು, ಹಾಗೆ ಸಂಹಾರಕ ಶಕ್ತಿಯು ತಮೋಗುಣಮಯವೂ, ಕಾಲ ಕಾಲ ಎಂಬ ಸಂಜ್ಞಾಂಕಿತವೂ, ರುದ್ರರೂಪವೂ, ಆಗಿರುವುದು.

೨೪. ಕೆಲವರು ನನ್ನನ್ನು ಧ್ಯಾನಯೋಗದಿಂದ ನೋಡುವರು ; ಮತ್ತೆ ಕೆಲವರು ಜ್ಞಾನಯೋಗದಿಂದ ನೋಡುವರು ; ಇನ್ನು ಕೆಲವರು ಭಕ್ತಿಯೋಗದಿಂದ ನೋಡುವರು ; ಮತ್ತು ಮತ್ತೆ ಕೆಲವರು ಕರ್ಮಯೋಗದಿಂದ ನನ್ನನ್ನು ನೋಡಲು ಯತ್ನಿಸುವರು.

೨೫. ಈ ಸಮಸ್ತ ಭಕ್ತರಲ್ಲಿ ಜ್ಞಾನಯೋಗದಿಂದ ನನ್ನನ್ನು ನಿತ್ಯದಲ್ಲಿಯೂ ಆರಾಧಿಸುವ ಮಾನವನು ನನಗೆ ಅತಿ ಪ್ರೀತಿಪಾತ್ರನಾದ ಇಷ್ಟ ಭಕ್ತನಾಗುವನು. ಮತ್ತಾವನೂ ಅಂತಹ ಪ್ರಿಯತಮ ಭಕ್ತನಾಗುವುದಿಲ್ಲ.

೨೬. ಕೆಲವರು ಮಹಾವಿಷ್ಣುವಿನಲ್ಲಿ ಪರಮಭಕ್ತರಾಗಿ ತನ್ಮೂಲಕವಾಗಿ ನನ್ನನ್ನು ಆರಾಧಿಸುತ್ತಿರುವರು. ಅಂತಹ ವಿಷ್ಣು ಭಕ್ತರು ನನ್ನನ್ನು ಹೊಂದಿ ಸದ್ಗತಿಯನ್ನು ಅನುಭವಿಸುವರು. ಅವರು ಪುನರಾವೃತ್ತಿಯನ್ನು ಹೊಂದುವುದಿಲ್ಲ.

ಮಯಾ ತತಮಿದಂ ಕೃತ್ಸ್ನಂ ಪ್ರಧಾನಪುರುಷಾತ್ಮಕಮ್ ।
ಮಯ್ಯೇವ ಸಂಸ್ಥಿತಂ ಚಿತ್ತಂ ಮಯಾ ಸಂಪ್ರೇರ್ಯತೇ ಜಗತ್ ॥೨೭॥

ನಾಹಂ ಪ್ರೇರಯಿತಾ ವಿಪ್ರಾಃ ಪರಮಂ ಯೋಗಮಾಸ್ಥಿತಃ ।
ಪ್ರೇರಯಾಮಿ ಜಗತ್ ಕೃತ್ಸ್ನಮೇತದ್ಯೋ ವೇದ ಸೋಽಮೃತಃ ॥೨೮॥

ಪಶ್ಯಾಮ್ಯಶೇಷಮೇವೇದಂ ವರ್ತಮಾನಂ ಸ್ವಭಾವತಃ ।
ಕರೋತಿ ಕಾಲೋ ಭಗವಾನ್ ಮಹಾಯೋಗೇಶ್ವರಃ ಸ್ವಯಮ್ ॥೨೯॥

ಯೋಽಹಂ ಸಂಪ್ರೋಚ್ಯತೇ ಯೋಗೀ ಮಾಯೀ ಶಾಸ್ತ್ರೇಷು ಸೂರಿಭಿಃ।
ಯೋಗೀಶ್ವರೋಽಸೌ ಭಗವಾನ್ ಮಹಾಯೋಗೇಶ್ವರಃ ಸ್ವಯಮ್ ॥

---

೨೭. ಪ್ರಧಾನ-ಪುರುಷರಿಂದ ಆದಿಯಾದ ಸಮಸ್ತ ಜಗತ್ತು ನನ್ನಿಂದ ವಿಸ್ತರಿಸಲ್ಪಟ್ಟಿದೆ. ಮತ್ತು ಚಿತ್ತವೆಂಬುದು ನನ್ನಲ್ಲಿಯೇ ಅಡಗಿರುವುದು. ಆದುದರಿಂದ ನನ್ನಿಂದ ಸರ್ವ ಪ್ರಪಂಚವು ಪ್ರೇರೇಪಿಸಲ್ಪಡುತ್ತದೆ.

೨೮. ವಿಪ್ರರೆ! ಪರಮಾರ್ಥವಾಗಿ ನಾನು ಯಾವುದಕ್ಕೂ ಪ್ರೇರೇಪಕನಾಗಿಲ್ಲ. ಉತ್ತಮವಾದ ಮಾಯಾಶಕ್ತಿಯೆಂಬ ಯೋಗವನ್ನು ಅವಲಂಬಿಸಿ ಸಂಪೂರ್ಣ ಜಗತ್ತನ್ನು ಪ್ರೇರೇಪಿಸುವೆನು. ಈ ಪರಮಾರ್ಥವನ್ನು ತಿಳಿದ ಜ್ಞಾನಿಯು ಮುಕ್ತನಾಗುವನು.

೨೯. ವರ್ತಮಾನಕಾಲದಲ್ಲಿ ಸ್ಥಿತಿಯನ್ನು ಹೊಂದಿದ ಈ ವಿಶ್ವವನ್ನು ನನ್ನ ಸ್ವಭಾವದಿಂದ ವೀಕ್ಷಿಸುತ್ತಿದ್ದೇನೆ. ಮಹಾ ಯೋಗೇಶ್ವರರೂಪನಾಗಿರುವ ಕಾಲಾತ್ಮನು ತಾನಾಗಿ ಸರ್ವ ಭಾವಗಳನ್ನು ರಚಿಸುವನು.

೩೦. ವಿದ್ವಾಂಸರಿಂದ ಯೋಗಿಯು, ಮಾಯಾವಿಯು ಮುಂತಾದ ಗುಣವಾಚಕಗಳಿಂದ ಶಾಸ್ತ್ರಗಳಲ್ಲಿ ಯಾವ ನಾನು ವರ್ಣಿಸಲ್ಪಡುವೆನೋ, ಆ ನಾನು-ಸಾಕ್ಷಾತ್ತಾಗಿ ಯೋಗೀಶ್ವರನೂ, ಭಗವಂತನೂ ಮಹಾಯೋಗೇಶ್ವರನೂ ಆಗಿರುವೆನು

ಮಹತ್ತ್ವಂ ಸರ್ವಸತ್ತ್ವಾನಾಂ ವರತ್ವಾತ್ ಪರಮೇಷ್ಠಿನಃ ।
ಪ್ರೋಚ್ಯತೇ ಭಗವಾನ್ ಬ್ರಹ್ಮಾ ಮಹಾಬ್ರಹ್ಮಮಯೋಽಮಲಃ ॥ ೩೧ ॥

ಯೋ ಮಾಮೇವಂ ವಿಜಾನಾತಿ ಮಹಾಯೋಗೇಶ್ವರೇಶ್ವರಮ್ ।
ಸೋಽವಿಕಲ್ಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥ ೩೨ ॥

ಸೋಽಹಂ ಪ್ರೇರಯಿತಾ ದೇವಃ ಪರಮಾನಂದಮಾಶ್ರಿತಃ ।
ನೃತ್ಯಾಮಿ ಯೋಗೀ ಸತತಂ ಯಸ್ತದ್ವೇದ ಸ ಯೋಗವಿತ್ ॥ ೩೩ ॥

ಇತಿ ಗುಹ್ಯತಮಂ ಜ್ಞಾನಂ ಸರ್ವವೇದೇಷು ನಿಶ್ಚಿತಮ್ ।
ಪ್ರಸನ್ನಚೇತಸೇ ದೇಯಂ ಧಾರ್ಮಿಕಾಯಾಹಿತಾಗ್ನಯೇ ॥ ೩೪ ॥

ಇತಿ ಶ್ರೀ ಕೂರ್ಮಪುರಾಣೇ ಸಪ್ತಪಂಚಾಶತ್ತಮೋಽಧ್ಯಾಯಃ.

---

೩೧. ಸಮಸ್ತ ವಸ್ತುಗಳಲ್ಲಿ ಪರಮಸ್ಥಾನದಲ್ಲಿರುವ ಬ್ರಹ್ಮದೇವನು ಭಗವಂತನೂ, ಪರಿಚ್ಛೇದರಹಿತನೂ, ಮಹಾವೇದಮಯನೂ, ಮತ್ತು ನಿರ್ಮಲನೂ ಆಗಿ ಶ್ರೇಷ್ಠನಾಗಿರುವುದರಿಂದ ಮಹಾನಾತ್ಮಾ ಎಂದು ಕರೆಯಲ್ಪಡುವನು.

೩೨. ಈ ರೀತಿಯಾಗಿ ಮಹಾಯೋಗೇಶ್ವರರಿಗೆ ಈಶ್ವರನಾದ ನನ್ನನ್ನು ಯಾರು ಅರಿಯುವನೊ; ಅವನು ಕಲ್ಪನಾತೀತವಾದ ಯೋಗ ಸಮಾಧಿಯಲ್ಲಿ ತತ್ಪರನಾಗುವನು. ಈ ವಿಷಯದಲ್ಲಿ ಸಂಶಯವಿಲ್ಲ.

೩೩. ಸರ್ವಪ್ರೇರಕನೂ, ಸ್ವಾಮಿಯೂ, ಪರಮಯೋಗಿಯೂ ಆದ ನಾನು ಪರಮಾನಂದವನ್ನು ಹೊಂದಿದವನಾಗಿ ಸಂತತವಾಗಿ ಜಗದ್ರಚನೆಯೆಂಬ ನರ್ತನವನ್ನು ಆಡುತ್ತೇನೆ. ಇದನ್ನು ತಿಳಿದವನು ನಿಜವಾದ ಯೋಗಜ್ಞನಾಗುವನು.

೩೪. ರಹಸ್ಯತಮವಾದ ಈ ಜ್ಞಾನಯೋಗವು ಸಮಸ್ತ ವೇದಗಳಲ್ಲಿ ಪ್ರಕಾಶವನ್ನು ಹೊಂದಿರುವುದು. ಇದನ್ನು ನಿರ್ಮಲವಾದ ಅಂತಃಕರಣವುಳ್ಳವನೂ, ಧಾರ್ಮಿಕನೂ, ಮತ್ತು ಆಹಿತಾಗ್ನಿಯೂ ಆದ ಶಿಷ್ಯನಿಗೆ ಉಪದೇಶಿಸಬೇಕು.

( ಕೂರ್ಮಪುರಾಣದಲ್ಲಿ ಐವತ್ತೇಳನೆಯ ಅಧ್ಯಾಯವು ಸಮಾಪ್ತವು. )

---

ಶ್ರೀ

# ಕೂರ್ಮಪುರಾಣಂ

---

## ಅಷ್ಟಾಪಂಚಾಶತ್ತಮೋಽಧ್ಯಾಯಃ.

ವ್ಯಾಸ ಉವಾಚ :—

ಏತಾವದುಕ್ತ್ವಾ ಭಗವಾನ್ ಯೋಗಿನಾಂ ಪರಮೇಶ್ವರಃ ।
ನನರ್ತ ಪರಮಂ ಭಾವಮೈಶ್ವರಂ ಸಂಪ್ರದರ್ಶಯನ್ ॥ ೧ ॥

ತಂ ತೇ ದದೃಶುರೀಶಾನಂ ತೇಜಸಾಂ ಪರಮಂ ನಿಧಿಮ್ ।
ನೃತ್ಯಮಾನಂ ಮಹಾದೇವಂ ವಿಷ್ಣುನಾ ಗಗನೇಽಮಲೇ ॥ ೨ ॥

---

## ಐವತ್ತೆಂಟನೆಯ ಅಧ್ಯಾಯವು.

೧. ವ್ಯಾಸಮುನಿಯು ಹೀಗೆಂದು ಹೇಳಿದನು :—ಷಡ್ಗುಣೈಶ್ವರ್ಯ ಸಂಪನ್ನನಾದ ಪರಮೇಶ್ವರನು ಯೋಗಿಗಳಿಗೆ ಹೀಗೆಂದು ಹೇಳಿ ಈಶ್ವರನ ತತ್ತ್ವಮಯವಾದ ಪರಮಭಾವವನ್ನು ತೋರಿಸುತ್ತ ನರ್ತನಮಾಡಿದನು.

೨. ಆಗ ಆ ಯೋಗಿಗಳು ಸರ್ವೇಶ್ವರನೂ, ತೇಜೋನಿಧಿಯೂ ಸರ್ವೋತ್ತಮನೂ, ನಿರ್ಮಲವಾದ ಆಕಾಶದಲ್ಲಿ ಮಹಾವಿಷ್ಣುವಿನ ಸಂಗಡ ನರ್ತನಮಾಡುವವನೂ ಆದ ಮಹಾದೇವನನ್ನು ಸಾಕ್ಷಾತ್ಕರಿಸಿದರು.

ಯಂ ವಿದುರ್ಯೋಗತತ್ತ್ವಜ್ಞಾ ಯೋಗಿನೋ ಯತಮಾನಸಾಃ ।
ತಮೀಶಂ ಸರ್ವಭೂತಾನಾಮಾಕಾಶೇ ದದೃಶುಃ ಕಿಲ ॥ ೩ ॥

ಯಸ್ಯ ಮಾಯಾಮಯಂ ಸರ್ವಂ ಯೇನೇದಂ ಪ್ರೇರ್ಯತೇ ಜಗತ್ ।
ನೃತ್ಯಮಾನಃ ಸ್ವಯಂ ವಿಪ್ರೈರ್ವಿಶ್ವೇಶಃ ಖಲು ದೃಶ್ಯತೇ ॥ ೪ ॥

ಯತ್ಪಾದಪಂಕಜಂ ಸ್ಮೃತ್ವಾ ಪುರುಷೋಽಜ್ಞಾನಜಂ ಭಯಮ್ ।
ಜಹಾತಿ ನೃತ್ಯಮಾನಂ ತಂ ಭೂತೇಶಂ ದದೃಶುಃ ಕಿಲ ॥ ೫ ॥

ಕೇಚಿನ್ನಿದ್ರಾಜಿತಶ್ವಾಸಾಃ ಶಾಂತಾ ಭಕ್ತಿಸಮನ್ವಿತಾಃ ।
ಜ್ಯೋತಿರ್ಮಯಂ ಪ್ರಪಶ್ಯಂತಿ ಸ ಯೋಗೀ ದೃಶ್ಯತೇ ಕಿಲ ॥ ೬ ॥

---

೩. ಯೋಗಾಭ್ಯಾಸದ ತತ್ತ್ವವನ್ನು ಅರಿತು ಜಯಿಸಲ್ಪಟ್ಟ ಅಂತಃಕರಣವುಳ್ಳ ಯೋಗಿಗಳು ಯಾವ ಪರಮೇಶ್ವರನನ್ನು ಸಾಕ್ಷಾತ್ಕಸಿರುವರೊ ; ಸರ್ವಭೂತೇಶ್ವರನಾದ ಆ ಪರಮಾತ್ಮನನ್ನು ಆಕಾಶದಲ್ಲಿ ವೀಕ್ಷಿಸಿದರು.

೪. ಈ ವಿಶ್ವಪ್ರಪಂಚವು ಯಾರ ಮಾಯೆಯಿಂದ ಪೂರ್ಣವಾಗಿದೆಯೊ ; ಈ ಜಗತ್ತು ಯಾರಿಂದ ಪ್ರೇರೇಪಿಸಲ್ಪಡುತ್ತಿರುವುದೊ ; ವಿಶ್ವನಿಯಾಮಕನಾದ ಆ ಪರಮೇಶ್ವರನು ನರ್ತನಮಾಡುತ್ತಿರುವುದನ್ನು ವಿಪ್ರರು ಸಾಕ್ಷಾತ್ಕಾರಮಾಡಿದರು.

೫. ಮಾನವನು ಯಾವ ಪರಮಾತ್ಮನ ಚರಣಕಮಲಗಳನ್ನು ಸ್ಮರಿಸಿ ಅಜ್ಞಾನದಿಂದ ಸಂಭವಿಸಿದ ಭಯುವನ್ನು ಕಳೆದುಕೊಳ್ಳುವನೊ ; ಅಂತಹ ನರ್ತನ ಮಾಡುತ್ತಿದ್ದ ಸರ್ವೇಶ್ವರನನ್ನು ನೋಡಿದರು.

೬. ಕೆಲವರು ನಿದ್ರೆಯನ್ನೂ, ಶ್ವಾಸಗಳನ್ನೂ ನಿಗ್ರಹಿಸಿದವರೂ, ಶಾಂತರೂ, ಮತ್ತು ಭಕ್ತಿಪರಿಪೂರ್ಣರೂ ಆಗಿ ಜ್ಯೋತಿರ್ಮಯನಾದ ಯಾವ ಪರಮೇಶ್ವರನನ್ನು ಸಾಕ್ಷಾತ್ಕರಿಸುವರೊ ; ಅಂತಹ ನರ್ತನ ಮಾಡುತ್ತಿದ್ದ ಪರಮಯೋಗಿಯು ಕಾಣಿಸಿಕೊಂಡನು.

ಯೋಽಜ್ಞಾನಾನ್ಮೋಚಯೇತ್ ಕ್ಷಿಪ್ರಂ ಪ್ರಸನ್ನೋ ಭಕ್ತವತ್ಸಲಃ ।
ತಮೇವಂ ಮೋಚನಂ ರುದ್ರಮಾಕಾಶೇ ದದೃಶುಃ ಪರಮ್ ॥ ೭ ॥

ಸಹಸ್ರಶಿರಸಂ ದೇವಂ ಸಹಸ್ರಚರಣಾಕೃತಿಮ್ ।
ಸಹಸ್ರಬಾಹುಂ ಜಟಿಲಂ ಚಂದ್ರಾರ್ಧಕೃತಶೇಖರಮ್ ॥ ೮ ॥

ವಸಾನಂ ಚರ್ಮ ವೈಯಾಘ್ರಂ ಶೂಲಾಸಕ್ತಮಹಾಕರಮ್ ।
ದಂಡಪಾಣಿಂ ತ್ರಯೀನೇತ್ರಂ ಸೂರ್ಯಸೋಮಾಗ್ನಿಲೋಚನಮ್ ॥೯॥

ಬ್ರಹ್ಮಾಂಡಂ ತೇಜಸಾ ಸ್ವೇನ ಸರ್ವಮಾವೃತ್ಯ ಧಿಷ್ಠಿತಮ್ ।
ದಂಷ್ಟ್ರಾಕರಾಲಂ ದುರ್ಧರ್ಷಂ ಸೂರ್ಯಕೋಟಿಸಮಪ್ರಭಮ್॥೧೦॥

---

೭. ಭಕ್ತರಲ್ಲಿ ಪ್ರೇಮಿಯಾದ ಯಾವ ಪರಮಾತ್ಮನು ಪ್ರಸನ್ನನಾಗಿ ಭಕ್ತರನ್ನು ಅಜ್ಞಾನದಿಂದ ಮೋಚನಮಾಡುವನೋ ಅಂತಹ ಸಂಸಾರ ಮೋಚಕನಾದ ಮತ್ತು ಸರ್ವೋತ್ತಮನಾದ ರುದ್ರಮೂರ್ತಿಯನ್ನು ಆಕಾಶದಲ್ಲಿ ನೋಡಿದರು.

೮. ಸಹಸ್ರ ಸಂಖ್ಯೆಯ ಶಿರಸ್ಸುಗಳಿಂದಲೂ, ಚರಣಗಳಿಂದಲೂ ಮತ್ತು ಬಾಹುಗಳಿಂದಲೂ ಕೂಡಿದ ವಿಗ್ರಹವುಳ್ಳವನೂ, ಅರ್ಧಚಂದ್ರನಿಂದ ರಚಿಸಲ್ಪಟ್ಟ ಶಿರೋಭೂಷಣವುಳ್ಳವನೂ ಮತ್ತು ಜಟಾಧಾರಿಯೂ ಆದ ಪರಮೇಶ್ವರನನ್ನು ಸಾಕ್ಷಾತ್ಕರಿಸಿದರು.

೯. ಮತ್ತು ವ್ಯಾಘ್ರಚರ್ಮಾಂಬರವನ್ನು ಧರಿಸಿದವನೂ, ಶೂಲವನ್ನು ಧರಿಸಿದ ಮಹಾ ಹಸ್ತವುಳ್ಳವನೂ, ಹಸ್ತದಲ್ಲಿ ದಂಡವನ್ನು ಧರಿಸಿದವನೂ, ಸೂರ್ಯ ಚಂದ್ರ-ಅಗ್ನಿ ಎಂಬ ತೇಜಸ್ತ್ರಯರೂಪವಾದ ನೇತ್ರವುಳ್ಳವನೂ ಆದ ಪರಮಶಿವನನ್ನು ನೋಡಿದರು.

೧೦. ಹಾಗು ಸಕಲ ಬ್ರಹ್ಮಾಂಡವನ್ನು ತನ್ನ ತೇಜಃಪುಂಜದಿಂದ ಆವರಿಸಿ ಪ್ರಕಾಶಿಸುವವನೂ, ಕೋರೆಹಲ್ಲುಗಳಿಂದ ಕರಾಲನೂ, ತಿರಸ್ಕರಿಸಲು ಅಶಕ್ಯನೂ ಮತ್ತು ಕೋಟಿ ಸಂಖ್ಯೆಯ ಸೂರ್ಯರಿಗೆ ಸಮಾನವಾದ ಪ್ರಭಾಪುಂಜವುಳ್ಳವನೂ ಆದ ಮಹೇಶ್ವರನನ್ನು ವೀಕ್ಷಿಸಿದರು.

**ಸೃಜಂತಮನಲಜ್ವಾಲಂ ದಹಂತಮಖಿಲಂ ಜಗತ್ ।**
**ನೃತ್ಯಂತಂ ದದೃಶುರ್ದೇವಂ ವಿಶ್ವಕರ್ಮಾಣಮೀಶ್ವರಮ್ ॥ ೧೧ ॥**

**ಮಹಾದೇವಂ ಮಹಾಯೋಗಂ ದೇವಾನಾಮಪಿ ದೈವತಮ್ ।**
**ಪಶೂನಾಂ ಪತಿಮೀಶಾನಮಾನಂದಂ ಜ್ಯೋತಿರವ್ಯಯಮ್ ॥ ೧೨ ॥**

**ಪಿನಾಕಿನಂ ವಿಶಾಲಾಕ್ಷಂ ಭೇಷಜಂ ಭವರೋಗಿಣಾಮ್ ।**
**ಕಾಲಾತ್ಮಾನಂ ಕಾಲಕಾಲಂ ದೇವದೇವಂ ಮಹೇಶ್ವರಮ್ ॥ ೧೩ ॥**

**ಉಮಾಪತಿಂ ವಿಶಾಲಾಕ್ಷಂ ಯೋಗಾನಂದಮಯಂ ಪರಮ್ ।**
**ಜ್ಞಾನವೈರಾಗ್ಯನಿಲಯಂ ಜ್ಞಾನಯೋಗಂ ಸನಾತನಮ್ ॥ ೧೪ ॥**

---

೧೧. ಅಗ್ನಿಯ ಜ್ವಾಲಾಮಾಲೆಗಳನ್ನು ಸೃಜಿಸುವವನೂ, ಸಮಸ್ತ ಜಗತ್ತನ್ನು ದಹಿಸುವವನೂ, ವಿಶ್ವವನ್ನು ನಿರ್ಮಿಸುವವನೂ ಮತ್ತು ಸರ್ವೇಶ್ವರನೂ ಆದ ಶಿವನು ನರ್ತನಮಾಡುತ್ತಿರುವುದನ್ನು ಕಂಡರು.

೧೨. ಮಹಾದೇವಸ್ವರೂಪನೂ, ಮಹಾಯೋಗಿಯೂ, ದೇವತೆಗಳಿಗೆ ದೇವತಾ ರೂಪನೂ, ಪಶುಗಳಿಗೆ ಪತಿಯೂ, ಈಶ್ವರನೂ, ಆನಂದಸ್ವರೂಪನೂ, ಪ್ರಕಾಶಾತ್ಮಕನೂ, ನಾಶವಿಲ್ಲದವನೂ ಆದ ಪರಮೇಶ್ವರನನ್ನು ಸಾಕ್ಷಾತ್ಕರಿಸಿದರು.

೧೩. ಪಿನಾಕಾಯುಧಧಾರಿಯೂ, ವಿಶಾಲವಾದ ನೇತ್ರಗಳಿಂದ ಶೋಭಿತನೂ, ಸಂಸಾರ ರೋಗಪೀಡಿತರಿಗೆ ಭೇಷಜಸ್ವರೂಪನೂ, ಕಾಲಸ್ವರೂಪನೂ, ಅಂತಕನಿಗೆ ಅಂತಕಸ್ವರೂಪನೂ ಮತ್ತು ದೇವಾಧಿದೇವನೂ ಆದ ಮಹೇಶ್ವರನನ್ನು ನೋಡಿದರು.

೧೪. ಪಾರ್ವತೀ ರಮಣನೂ, ವಿಶಾಲನೇತ್ರಗಳುಳ್ಳವನೂ, ಉತ್ತಮವಾದ ಯೋಗಾನಂದಸ್ವರೂಪನೂ, ಜ್ಞಾನ-ವೈರಾಗ್ಯಗಳಿಗೆ ಆಧಾರನೂ, ಜ್ಞಾನಯೋಗ ಲಭ್ಯನೂ ಮತ್ತು ಅನಾದಿಯೂ ಆದ ಪರಮಾತ್ಮನನ್ನು ವೀಕ್ಷಿಸಿದರು.

ಶಾಶ್ವತೈಶ್ವರ್ಯವಿಭವಂ ಧರ್ಮಾಧಾರಂ ದುರಾಸದಮ್ ।
ಮಹೇಂದ್ರೋಪೇಂದ್ರನಮಿತಂ ಮಹರ್ಷಿಗಣವಂದಿತಮ್ ॥ ೧೫ ॥

ಯೋಗಿನಾಂ ಹೃದಿ ತಿಷ್ಠಂತಂ ಯೋಗಮಾಯಾಸಮಾವೃತಮ್ ।
ಕ್ಷಣೇನ ಜಗತೋ ಯೋನಿಂ ನಾರಾಯಣಮನಾಮಯಮ್ ॥ ೧೬ ॥

ಈಶ್ವರೇಣೈಕ್ಯಮಾಪನ್ನಮಪಶ್ಯನ್ ಬ್ರಹ್ಮವಾದಿನಃ ।
ದೃಷ್ಟ್ವಾ ತದೈಶ್ವರಂ ರೂಪಂ ರುದ್ರಂ ನಾರಾಯಣಾತ್ಮಕಮ್ ।
ಕೃತಾರ್ಥಂ ಮೇನಿರೇ ಸಂತಃ ಸ್ವಾತ್ಮಾನಂ ಬ್ರಹ್ಮವಾದಿನಃ ॥ ೧೭ ॥

ಸನತ್ಕುಮಾರಃ ಸನಕೋ ಭೃಗುಶ್ಚ
ಸನಾತನಶ್ಚೈವ ಸನಂದನಶ್ಚ ।
ರೈಭ್ಯೋಽಂಗಿರಾ ವಾಮದೇವೋಽಥ ಶುಕ್ರೋ
ಮಹರ್ಷಿರತ್ರಿಃ ಕಪಿಲೋ ಮರೀಚಿಃ ॥ ೧೮ ॥

---

೧೫. ಶಾಶ್ವತವಾದ ಐಶ್ವರ್ಯಕ್ಕೆ ವಾಸಭೂಮಿಯೂ, ಧರ್ಮಗಳಿಗೆ ಆಧಾರನೂ, ಅಲಭ್ಯನೂ, ಮಹೇಂದ್ರ-ಉಪೇಂದ್ರರಿಂದ ವಂದಿತನೂ, ಮತ್ತು ಮಹರ್ಷಿಗಳ ಸಂಘದಿಂದ ನಮಸ್ಕರಿಸಲ್ಪಟ್ಟವನೂ ಆದ ಶಿವನನ್ನು ಕಂಡರು.

೧೬. ಯೋಗಿಗಳ ಹೃದಯದಲ್ಲಿ ವಾಸಿಸುವವನೂ, ಯೋಗಮಾಯೆಯಿಂದ ಆವರಿಸಲ್ಪಟ್ಟವನೂ, ಕ್ಷಣಮಾತ್ರದಿಂದ ಜಗತ್ತನ್ನು ನಿರ್ಮಿಸುವವನೂ, ನಾರಾಯಣ ಮೂರ್ತಿಸ್ವರೂಪನೂ ಮತ್ತು ವ್ಯಾಧಿಪೀಡಾರಹಿತನೂ ಆದ ಭಗವಂತನನ್ನು ಸಾಕ್ಷಾತ್ಕರಿಸಿದರು.

೧೭. ಬ್ರಹ್ಮವಾದಿಗಳು, ನಾರಾಯಣನು ರುದ್ರನಲ್ಲಿ ಐಕ್ಯಹೊಂದಿರುವುದನ್ನು ನೋಡಿದರು. ಮತ್ತು ಸಾಧುಗಳಾದ ಆ ಬ್ರಹ್ಮವಾದಿಗಳು ನಾರಾಯಣನ ಐಕ್ಯವನ್ನು ಹೊಂದಿರುವ, ಈಶ್ವರನ ರೂಪವೆನಿಸಿದ ರುದ್ರಮೂರ್ತಿಯನ್ನು ನೋಡಿ ತಮ್ಮನ್ನು ಕೃತಾರ್ಥರೆಂದು ಭಾವಿಸಿದರು.

೧೮. ಹಾಗೆ ಕೃತಾರ್ಥತೆಯನ್ನುಂಟು ಮಾಡುವ ಈಶ್ವರ ಸಾಕ್ಷಾತ್ಕಾರವನ್ನು ಸನತ್ಕುಮಾರ, ಸನಕ, ಭೃಗು, ಸನಾತನ, ಸನಂದನ, ರೈಭ್ಯ, ಅಂಗಿರಾ, ವಾಮದೇವ, ಶುಕ್ರ, ಅತ್ರಿ, ಕಪಿಲ ಮತ್ತು ಮರೀಚಿ ಮುಂತಾದ ಬ್ರಹ್ಮರ್ಷಿಗಳು ಹೊಂದಿದವರಾದರು.

ದೃಷ್ಟ್ವಾಥ ರುದ್ರಂ ಜಗದೀಶಿತಾರಂ
ತಂ ಪದ್ಮನಾಭಾಶ್ರಿತವಾಮಭಾಗಮ್ ।
ಧ್ಯಾತ್ವಾ ಹೃದಿಸ್ಥಂ ಪ್ರಣಿಪತ್ಯ ಮೂರ್ಧ್ನಾ
ಕೃತ್ವಾಂಜಲಿಂ ಸ್ವೇಷು ಶಿರಸ್ಸು ಭೂಯಃ ॥ ೧೯ ॥

ಓಂಕಾರಮುಚ್ಚಾರ್ಯ ವಿಲೋಕ್ಯ ದೇವ-
ಮಂತಃಶರೀರಂ ನಿಹಿತಂ ಗುಹಾಯಾಮ್ ।
ಸಮಸ್ತುವನ್ ಬ್ರಹ್ಮಮಯೈರ್ವಚೋಭಿ-
ರಾನಂದಪೂರ್ಣಾಹಿತಮಾನಸಾ ನೈ ॥ ೨೦ ॥

**ಮುನಯ ಊಚುಃ :—**

ತ್ವಾಮೇಕಮೀಶಂ ಪುರುಷಂ ಪುರಾಣಂ
ಪ್ರಾಣೇಶ್ವರಂ ರುದ್ರಮನಂತಯೋಗಮ್ ।
ನಮಾಮ ಸರ್ವೇ ಹೃದಿ ಸನ್ನಿವಿಷ್ಟಂ
ಪ್ರಚೇತಸಂ ಬ್ರಹ್ಮಮಯಂ ಪವಿತ್ರಮ್ ॥ ೨೧ ॥

---

೧೯. ಮಹಾವಿಷ್ಣುವಿನಿಂದ ಆಶ್ರಯಿಸಲ್ಪಟ್ಟ ವಾಮಭಾಗವುಳ್ಳ, ಜಗದೀಶ್ವರನಾದ ಆ ರುದ್ರನನ್ನು ನೋಡಿ ತಮ್ಮ ಹೃದಯದಲ್ಲಿದ್ದ ಸ್ವಾತ್ಮರೂಪನನ್ನಾಗಿ ಧ್ಯಾನಿಸಿ ತಲೆ ಬಾಗಿ ನಮಸ್ಕಾರಮಾಡಿ ಮತ್ತೆ ತಮ್ಮ ಶಿರಸ್ಸುಗಳಲ್ಲಿ ಪ್ರಣಾಮಾಂಜಲಿಗಳನ್ನು ಧರಿಸಿದರು.

೨೦. ಮತ್ತು ಓಂಕಾರವನ್ನು ಉಚ್ಚರಿಸಿ ಶರೀರದೊಳಗೆ ಹೃದಯಗುಹೆಯಲ್ಲಿರುವ ಆತ್ಮನನ್ನು ನೋಡಿ ಆನಂದ ಪರಿಪೂರ್ಣವಾದ ಮಾನಸವುಳ್ಳವರಾಗಿ ವೇದಮಯವಾದ ವಾಕ್ಯಗಳಿಂದ ಭಗವಂತನನ್ನು ಸ್ತುತಿಮಾಡಿದರು.

೨೧. ಮುನಿಗಳು ಹೀಗೆಂದರು :— ಅದ್ವಿತೀಯನೂ, ಸರ್ವೇಶ್ವರನೂ, ಪುರಾಣಪುರುಷನೂ, ಪ್ರಾಣೇಶ್ವರನೂ, ರುದ್ರಮೂರ್ತಿಯೂ, ಅನಂತಯೋಗಗಳುಳ್ಳವನೂ, ಹೃದಯದಲ್ಲಿ ವಾಸಿಸುವವನೂ, ಪ್ರಜ್ಞಾನರೂಪನೂ, ಪರಬ್ರಹ್ಮಸ್ವರೂಪನೂ ಮತ್ತು ಪವಿತ್ರನೂ ಆದ ನಿನ್ನನ್ನು ವಂದಿಸುವೆವು.

ಪಶ್ಯಂತಿ ತ್ವಾಂ ಮುನಯೋ ಬ್ರಹ್ಮಯೋನಿಂ
ದಾಂತಾಃ ಶಾಂತಾ ವಿಮಲಂ ರುಕ್ಮವರ್ಣಮ್ ।
ಧ್ಯಾತ್ವಾತ್ಮಸ್ಥಮಚಲಂ ಸ್ವೇ ಶರೀರೇ
ಕವಿಂ ಪರೇಭ್ಯಃ ಪರಮಂ ಪರಂ ಚ ॥ ೨೨ ॥

ತ್ವತ್ತಃ ಪ್ರಸೂತಾ ಜಗತಃ ಪ್ರಸೂತಿಃ
ಸರ್ವಾನುಭೂಸ್ತ್ವಂ ಪರಮಾಣುಭೂತಃ ।
ಅಣೋರಣೀಯಾನ್ ಮಹತೋ ಮಹೀಯಾಂ-
ಸ್ತ್ವಾಮೇವ ಸರ್ವಂ ಪ್ರವದಂತಿ ಸಂತಃ ॥ ೨೩ ॥

ಹಿರಣ್ಯಗರ್ಭೋ ಜಗದಂತರಾತ್ಮಾ
ತ್ವತ್ತೋಽಸ್ತಿ ಜಾತಃ ಪುರುಷಃ ಪುರಾಣಃ ।
ಸಂಜಾಯಮಾನೋ ಭವತಾ ನಿಸೃಷ್ಟೋ
ಯಥಾವಿಧಾನಂ ಸಕಲಂ ಸ ಸದ್ಯಃ ॥ ೨೪ ॥

---

೨೨. ಜಿತೇಂದ್ರಿಯರೂ, ನಿರ್ವಿಕಾರರೂ ಆದ ಮುನಿಗಳು ನಿರ್ಮಲನೂ, ಸುವರ್ಣದಂತೆ ತೇಜಸ್ವಿಯೂ, ತನ್ನ ಶರೀರದಲ್ಲಿ ಆತ್ಮಶಕ್ತಿಯಿಂದ ಚಲಿಸುವವನೂ, ಸರ್ವಜ್ಞನೂ, ಪರವಸ್ತುಗಳಿಗಿಂತ ಪರತಮನೂ ಆದ ನಿನ್ನನ್ನು ಸಾಕ್ಷಾತ್ಕರಿಸುತ್ತಾರೆ.

೨೩. ಜಗತ್ತಿನ ಉತ್ಪತ್ತಿಯು ನಿನ್ನಿಂದ ಆಗಿರುವುದು. ನೀನು ಸರ್ವ ವಸ್ತುಗಳನ್ನು ಗೋಚರಿಸುವವನೂ, ಪರಮಾಣುವಿನಂತೆ ಸೂಕ್ಷ್ಮನೂ, ಅಣುವಸ್ತುಗಳಿಗಿಂತ ಅಣುಸ್ವರೂಪನೂ, ಮಹಾವಸ್ತುಗಳಿಗಿಂತ ಮಹಾಪರಿಮಾಣವುಳ್ಳವನೂ ಆಗಿದ್ದೀಯೆ. ಸಾಧುಗಳು ನಿನ್ನನ್ನು ಸರ್ವಾತ್ಮ ಎಂದು ಕರೆಯುವರು.

೨೪. ಪುರಾಣಪುರುಷನೂ, ಜಗತ್ತಿನ ಅಂತರಾತ್ಮನೂ ಆದ ಬ್ರಹ್ಮದೇವನು ಮೊದಲು ನಿನ್ನಿಂದ ಜನಿಸಿದವನಾಗಿರುವನು. ತರುವಾಯ ಜನ್ಮವೆತ್ತಿದ ಆ ಹಿರಣ್ಯಗರ್ಭನಿಗೆ ವಿಧಿ-ವಿಧಾನಗಳಿಗೆ ಅನುಗುಣವಾಗಿ ಸಮಸ್ತ ವಿಷಯಗಳು ನಿನ್ನಿಂದ ಬೋಧಿಸಲ್ಪಟ್ಟವು.

ತ್ವತ್ತೋ ವೇದಾಃ ಸಕಲಾಃ ಸಂಪ್ರಸೂತಾ-
ಸ್ತ್ವಯ್ಯೇವಾಂತೇ ಸಂಸ್ಥಿತಿಂ ತೇ ಲಭಂತೇ ।
ಪಶ್ಯಾಮಸ್ತ್ವಾಂ ಜಗತೋ ಹೇತುಭೂತಂ
ನೃತ್ಯಂತಂ ಸ್ವೇ ಹೃದಯೇ ಸನ್ನಿವಿಷ್ಟಮ್　　॥ ೨೫ ॥

ತ್ವಯ್ಯೈವೇದಂ ಭ್ರಾಮ್ಯತೇ ಬ್ರಹ್ಮಚಕ್ರಂ
ಮಾಯಾವೀ ತ್ವಂ ಜಗತಾಮೇಕನಾಥಃ ।
ನಮಾಮಸ್ತ್ವಾಂ ಶರಣಂ ಸಂಪ್ರಪನ್ನಾ
ಯೋಗಾತ್ಮಾನಂ ನೃತ್ಯಂತಂ ದಿವ್ಯನೃತ್ಯಮ್　　॥ ೨೬ ॥

ಪಶ್ಯಾಮಸ್ತ್ವಾಂ ಪರಮಾಕಾಶಮಧ್ಯೇ
ನೃತ್ಯಂತಂ ತೇ ಮಹಿಮಾನಂ ಸ್ಮರಾಮಃ ।
ಸರ್ವಾತ್ಮಾನಂ ಬಹುಧಾ ಸನ್ನಿವಿಷ್ಟಂ
ಬ್ರಹ್ಮಾನಂದಮನುಭೂಯಾನುಭೂಯ　　॥ ೨೭ ॥

---

೨೫. ನಿನ್ನಿಂದ ಸಮಸ್ತ ವೇದಗಳು ಆವಿರ್ಭಾವವನ್ನು ಹೊಂದಿರುತ್ತವೆ. ಪ್ರಲಯದಲ್ಲಿ ಆ ವೇದಗಳು ನಿನ್ನಲ್ಲಿಯೇ ಸ್ಥಿತಿಯನ್ನು ಹೊಂದುತ್ತವೆ. ಜಗನ್ನಿರ್ಮಾಣಕ್ಕೆ ಕಾರಣನೂ, ನರ್ತನಮಾಡುತ್ತಿರುವವನೂ ಆದ ನಿನ್ನನ್ನು ನಮ್ಮ ಹೃದಯದಲ್ಲಿ ಸನ್ನಿಹಿತನಾಗಿರುವಂತೆ ನೋಡುತ್ತೇವೆ.

೨೬. ಬ್ರಹ್ಮನ ಕಾರ್ಯರೂಪವಾದ ಈ ಜಗಚ್ಚಕ್ರವು ನಿನ್ನಿಂದ ಸುತ್ತಿಸಲ್ಪಡುತ್ತದೆ. ಜಗತ್ತಿಗೆ ಏಕಪ್ರಭುವಾದ ನೀನು ಬಹು ಮಾಯಾವಿಯಾಗಿದ್ದೀಯೆ ; ದಿವ್ಯನೃತ್ಯವನ್ನು ತೋರಿಸುತ್ತ ನೃತ್ಯವಾಡುವ ಯೋಗಾತ್ಮಕನಾದ ನಿನ್ನನ್ನು ಶರಣುಹೊಂದಿದವರಾಗಿ ನಮಸ್ಕರಿಸುತ್ತೇವೆ.

೨೭. ನಾವು ಸರ್ವಾತ್ಮಕನೂ, ಅನೇಕರೂಪವಾಗಿ ತೋರುವವನೂ ಆದ ನಿನ್ನನ್ನು ಪರಮಾಕಾಶ ಮಧ್ಯದಲ್ಲಿ ನೋಡುತ್ತಿದ್ದೇವೆ. ಮತ್ತು ನರ್ತನಮಾಡುವ ನಿನ್ನ ಮಹಿಮೆಯನ್ನು ಸ್ಮರಿಸುತ್ತೇವೆ. ಹಾಗು ಬ್ರಹ್ಮಾನಂದವನ್ನು ಮತ್ತೆ ಮತ್ತೆ ಅನುಭವಿಸುತ್ತೇವೆ.

ಓಂಕಾರಸ್ತೇ ವಾಚಕೋ ಮುಕ್ತಿಬೀಜಂ
ತ್ವಮಕ್ಷರಂ ಪ್ರಕೃತೌ ಗೂಢರೂಪಮ್ ।
ತತ್ತ್ವಾಂ ಸತ್ಯಂ ಪ್ರವದಂತೀಹ ಸಂತಃ
ಸ್ವಯಂಪ್ರಭಂ ಭವತೋ ಯತ್ಪ್ರಭಾವಮ್ ॥ ೨೮ ॥

ಸ್ತುವಂತಿ ತ್ವಾಂ ಸತತಂ ಸರ್ವವೇದಾ
ನಮಂತಿ ತ್ವಾಮೃಷಯಃ ಕ್ಷೀಣದೋಷಾಃ ।
ಶಾಂತಾತ್ಮಾನಃ ಸತ್ಯಸಂಧಂ ವರಿಷ್ಠಂ
ವಿಶಂತಿ ತ್ವಾಂ ಯತಯೋ ಬ್ರಹ್ಮನಿಷ್ಠಾಃ ॥ ೨೯ ॥

ಭುವೋ ನಾಶೋ ನಾದಿಮಾನ್ ವಿಶ್ವರೂಪೋ
ಬ್ರಹ್ಮಾ ವಿಷ್ಣುಃ ಪರಮೇಷ್ಠೀ ವರಿಷ್ಠಃ ।
ಸ್ವಾತ್ಮಾನಂದಮನುಭೂಯ ವಿಶಂತೇ
ಸ್ವಯಂ ಜ್ಯೋತಿರಚಲಾ ನಿತ್ಯಮುಕ್ತಾಃ ॥ ೩೦ ॥

---

೨೮. ಓಂಕಾರವು ನಿನ್ನ ವಾಚಕಶಬ್ದವಾಗಿ ಮುಕ್ತಿಗೆ ಬೀಜವಾಗಿರುವುದು. ನೀನು ಪ್ರಕೃತಿಯಲ್ಲಿ ಗೂಢರೂಪನಾಗಿರುವ ಅಕ್ಷರಸ್ವರೂಪನಾಗಿದ್ದೀಯೆ. ಸಾಧುಗಳು ಸ್ವಯಂಪ್ರಕಾಶವಾದ ಮಹಾಪ್ರಭಾವದಿಂದ ಕೂಡಿದ ನಿನ್ನ ರೂಪವನ್ನು ಶಾಶ್ವತ ವನ್ನಾಗಿ ಹೇಳುತ್ತಾರೆ.

೨೯. ಸಮಸ್ತ ವೇದಗಳೂ ನಿನ್ನನ್ನು ಸಂತತವಾಗಿ ಸ್ತುತಿಸುತ್ತವೆ. ರಾಗಾದಿ ದೋಷವರ್ಜಿತರಾದ ಮುನಿಗಳು ನಿನ್ನನ್ನು ವಂದಿಸುತ್ತಾರೆ. ನಿರ್ವಿಕಾರವಾದ ಮನಸ್ಸುಳ್ಳವರೂ, ಬ್ರಹ್ಮನಿಷ್ಠರೂ ಆದ ಯತಿಗಳು ಸತ್ಯಸಂಧನೂ, ಅತ್ಯುತ್ತಮನೂ ಆದ ನಿನ್ನಲ್ಲಿ ಪ್ರವೇಶಿಸುತ್ತಾರೆ.

೩೦. ಭೂಮಿಯ ನಾಶಕ್ಕೆ ಆಧಾರನೂ, ಅನಾದಿಯೂ, ವಿಶ್ವರೂಪನೂ ಆದ ಈಶ್ವರನು ಬ್ರಹ್ಮ, ವಿಷ್ಣು ಮುಂತಾದ ಮೂರ್ತಿಗಳುಳ್ಳವನೂ, ಶ್ರೇಷ್ಠಸ್ಥಾನದಲ್ಲಿ ರುವವನೂ ಆಗಿದ್ದಾನೆ. ಸ್ವಯಂ ಜ್ಯೋತಿಯಾದ ಅಂತಹ ಈಶ್ವರನಲ್ಲಿ ಸ್ಥಿರಚಿತ್ತರೂ, ನಿತ್ಯ ಮುಕ್ತರೂ ಆದ ಯತಿಗಳು ಸ್ವಾತ್ಮಾನಂದವನ್ನು ಅನುಭವಿಸಿ ಪ್ರವೇಶಿಸುತ್ತಾರೆ.

ಏಕೋ ರುದ್ರಸ್ತ್ವಂ ಕರೋಷೀಹ ವಿಶ್ವಂ
ತ್ವಂ ಪಾಲಯಸ್ಯಖಿಲಂ ವಿಶ್ವರೂಪಮ್ ।
ತ್ವಾಮೇವಾಂತೇ ನಿಲಯಂ ವಿಂದತೀದಂ
ನಮಾಮಸ್ತ್ವಾಂ ಶರಣಂ ಸಂಪ್ರಪನ್ನಾಃ ॥ ೩೧ ॥

ಏಕೋ ವೇದೋ ಬಹುಶಾಖೋ ಹ್ಯನಂತ-
ಸ್ತ್ವಾಮೇವೈಕಂ ಬೋಧಯತ್ಯೇಕರೂಪಮ್ ।
ವಂದ್ಯಂ ತ್ವಾಂ ಯೇ ಶರಣಂ ಸಂಪ್ರಪನ್ನಾ
ಮಾಯಾಮೇತಾಂ ತೇ ತರಂತೀಹ ವಿಪ್ರಾಃ ॥ ೩೨ ॥

ತ್ವಾಮೇಕಮಾಹುಃ ಕವಿಮೇಕರುದ್ರಂ
ಬ್ರಹ್ಮಂ ಗೃಣಂತಂ ಹರಿಮಗ್ನಿಮೀಶಮ್ ।
ರುದ್ರಂ ನಿತ್ಯಮನಿಲಂ ಚೇಕಿತಾನಂ
ಧಾತಾರಮಾದಿತ್ಯಮನೇಕರೂಪಮ್ ॥ ೩೩ ॥

---

೩೧. ರುದ್ರನಾದ ನೀನೇ ಈ ವಿಶ್ವವನ್ನು ಸೃಷ್ಟಿಮಾಡುತ್ತೀಯೆ, ನೀನೇ ಸಮಸ್ತ ವಿಶ್ವವನ್ನೂ ರಕ್ಷಿಸುತ್ತೀ. ಈ ಪ್ರಪಂಚವು ಪ್ರಳಯಸಮಯದಲ್ಲಿ ನಿನ್ನಲ್ಲಿ ಲಯ ಹೊಂದುತ್ತದೆ. ಅಂತಹ ನಿನ್ನನ್ನು ಶರಣುಹೊಂದಿ ನಮಸ್ಕರಿಸುತ್ತೇವೆ.

೩೨. ಅನೇಕ ಶಾಖೆಗಳಿಂದ ಕೂಡಿದ ಅನಂತವಾದ ಒಂದೇ ವೇದವು ಏಕ ರೂಪನೂ, ಅದ್ವಿತೀಯನೂ ಆದ ನಿನ್ನನ್ನು ಬೋಧಿಸುತ್ತದೆ. ವಂದನಾರ್ಹನಾದ ನಿನ್ನನ್ನು ಶರಣುಹೊಂದಿರುವ ಈ ವಿಪ್ರರು ಈ ಮಾಯಾ ಬಂಧನದಿಂದ ತರಣ ಹೊಂದುತ್ತಾರೆ.

೩೩. ನೀನು ಅದ್ವಿತೀಯನೂ, ಸರ್ವಜ್ಞನೂ, ಏಕರುದ್ರರೂಪನೂ, ಬ್ರಹ್ಮನೂ, ಹರಿಯೂ, ಅಗ್ನಿಯೂ, ಈಶ್ವರನೂ, ರುದ್ರನೂ ವಾಯುವೂ, ಜ್ಞಾನಮಯನೂ, ಧಾತೃರೂಪನೂ, ಆದಿತ್ಯನೂ ಶಾಶ್ವತನೂ ಮತ್ತು ಸ್ತುತಿಮಾಡುವವನೂ ಆಗಿರುವೆ, ಎಂದು ನಿನ್ನನ್ನು ಅನೇಕರೂಪನನ್ನಾಗಿ ವರ್ಣಿಸುತ್ತಾರೆ.

ತ್ವಮಕ್ಷರಂ ಪರಮಂ ವೇದಿತವ್ಯಂ
ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।
ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ
ಸನಾತನಸ್ತ್ವಂ ಪುರುಷೋತ್ತಮೋಽಸಿ ॥ ೩೪ ॥

ತ್ವಮೇವ ವಿಷ್ಣುಶ್ಚತುರಾನನಸ್ತ್ವಂ
ತ್ವಮೇವ ರುದ್ರೋ ಭಗವಾನಪೀಶಃ ।
ತ್ವಂ ವಿಶ್ವನಾಥಃ ಪ್ರಕೃತಿಃ ಪ್ರತಿಷ್ಠಾ
ಸರ್ವೇಶ್ವರಸ್ತ್ವಂ ಪರಮೇಶ್ವರೋಽಸಿ ॥ ೩೫ ॥

ತ್ವಾಮೇಕಮಾಹುಃ ಪುರುಷಂ ಪುರಾಣ-
ಮಾದಿತ್ಯವರ್ಣಂ ತಮಸಃ ಪರಸ್ತಾತ್ ।
ಚಿನ್ಮಾತ್ರಮವ್ಯಕ್ತಮನಂತರೂಪಂ
ಖಂ ಬ್ರಹ್ಮ ಶೂನ್ಯಂ ಪ್ರಕೃತಿರ್ಗುಣಾಶ್ಚ ॥ ೩೬ ॥

---

೩೪. ತಿಳಿಯಬೇಕಾದ ಶ್ರೇಷ್ಠವಾದ ಅಕ್ಷರಸ್ವರೂಪನು ನೀನೆ. ಈ ವಿಶ್ವಕ್ಕೆ ಉತ್ತಮ ನಿಧಿರೂಪವಾದ ಆಧಾರವು ನೀನೆ. ನಾಶರಹಿತನಾದ ಶಾಶ್ವತ ಧರ್ಮಗಳನ್ನು ಪಾಲಿಸುವವನು ನೀನೇ. ಮತ್ತು ಅನಾದಿಯಾದ ಪುರುಷೋತ್ತಮನೂ ನೀನೇ ಆಗಿದ್ದೀಯೆ.

೩೫. ನೀನು ವಿಷ್ಣು, ಬ್ರಹ್ಮ, ರುದ್ರ, ಪೂಜ್ಯನಾದ ಈಶ್ವರ, ವಿಶ್ವೇಶ್ವರ ಪ್ರಕೃತಿ, ಪ್ರತಿಷ್ಠೆ, ಸರ್ವೇಶ್ವರ ಮುಂತಾದ ಹಲವಾರು ಬಗೆಗಳಿಂದ ಪ್ರಕಾಶಿಸುತ್ತೀಯೆ. ನೀನು ಪರಮೇಶ್ವರನಾಗಿದ್ದೀಯೆ.

೩೬. ಪ್ರಕೃತಿ, ಗುಣ, ಶೂನ್ಯ, ಬ್ರಹ್ಮ, ಆಕಾಶ, ವಿಶ್ವರೂಪ, ಅವ್ಯಕ್ತ, ಚೈತನ್ಯ, ತಮೋಗುಣಾತೀತ, ಆದಿತ್ಯನಂತೆ ವರ್ಣವುಳ್ಳವನು, ಪುರಾಣಪುರುಷ ಮುಂತಾದ ವಿವಿಧ ತತ್ವಗಳರೂಪವಾಗಿ ನಿನ್ನನ್ನು ಒಬ್ಬನನ್ನೇ ಸ್ತುತಿಸುತ್ತಾರೆ.

ಯದಂತರಾ ಸರ್ವಮಿದಂ ವಿಭಾತಿ
ಯದವ್ಯಯಂ ನಿರ್ಮಲಮೇಕರೂಪಮ್ ।
ಕಿಮಪ್ಯಚಿಂತ್ಯಂ ತವ ರೂಪಮೇತ-
ತ್ತದಂತರಾ ಯತ್ಪ್ರತಿಭಾತಿ ತತ್ತ್ವಮ್ ॥ ೩೭ ॥

ಯೋಗೇಶ್ವರಂ ಭದ್ರಮನಂತಶಕ್ತಿಂ
ಪರಾಯಣಂ ಬ್ರಹ್ಮತನುಂ ಪುರಾಣಮ್ ।
ನಮಾಮ ಸರ್ವೇ ಶರಣಾರ್ಥಿನಸ್ತ್ವಾಂ
ಪ್ರಸೀದ ಭೂತಾಧಿಪತೇ ಮಹೇಶ ॥ ೩೮ ॥

ತ್ವತ್ಪಾದಪದ್ಮಸ್ಮರಣಾದಶೇಷ-
ಸಂಸಾರಬೀಜಂ ನಿಲಯಂ ಪ್ರಯಾತಿ ।
ಮನೋ ನಿಯಮ್ಯ ಪ್ರಣಿಧಾಯ ಕಾಯಂ
ಪ್ರಸಾದಯಾಮೋ ವಯಮೇಕಮೀಶಮ್ ॥ ೩೯ ॥

---

೩೭. ಯಾವ ನಿನ್ನ ತತ್ವದ ಮಧ್ಯದಲ್ಲಿ ಜಗತ್ತೆಲ್ಲವೂ ಪ್ರಕಾಶಿಸುವುದೋ, ಯಾವ ನಿನ್ನ ತತ್ವವು ಅವ್ಯಯವೂ, ನಿರ್ಮಲವೂ, ಏಕರೂಪವೂ ಆಗಿರುವುದೋ, ಅಚಿಂತ್ಯವಾದ ನಿನ್ನ ಈ ರೂಪದ ಮಧ್ಯಭಾಗದಲ್ಲಿ ಆ ಪರಮಾತ್ಮ ತತ್ವವು ಪ್ರಕಾಶಿಸುತ್ತಿರುವುದು.

೩೮. ಸರ್ವ ಭೂತಗಳ ಅಧಿಪತಿಯೇ! ಮತ್ತು ಮಹೇಶ್ವರನೇ! ಯೋಗೇಶ್ವರನೂ, ಮಂಗಳಕರನೂ ಅನಂತಶಕ್ತಿ ಸಂಪೂರ್ಣನೂ ಪರಮಗತಿರೂಪನೂ ಬ್ರಹ್ಮಮೂರ್ತಿಯೂ ಮತ್ತು ಪುರಾಣನೂ ಆದ ನಿನ್ನನ್ನು ಶರಣಾರ್ಥಿಗಳಾದ ನಾವೆಲ್ಲರೂ ನಮಸ್ಕರಿಸುತ್ತೇವೆ, ನಮ್ಮಲ್ಲಿ ಅನುಗ್ರಹ ತೋರಿಸು.

೩೯. ನಿನ್ನ ಪಾದಪದ್ಮಗಳ ಸ್ಮರಣದಿಂದ ಸಂಸಾರದ ಬೀಜಭೂತವಾದ ಅಜ್ಞಾನವು ಸಂಪೂರ್ಣವಾಗಿ ಲಯಹೊಂದುವುದು. ನಾವು ಮನಸ್ಸನ್ನು ನಿಗ್ರಹಿಸಿ ದೇಹವನ್ನು ಸ್ಥಿರವಾಗಿ ಧರಿಸಿ ಅದ್ವಿತೀಯನಾದ ನಿನ್ನನ್ನು ಪ್ರಸಾದಗೊಳಿಸುತ್ತೇವೆ

ನಮೋ ಭವಾಯಾಥ ಭವೋದ್ಭವಾಯ
ಕಾಲಾಯ ಸರ್ವಾಯ ಹರಾಯ ತುಭ್ಯಮ್ ।
ನಮೋಽಸ್ತು ರುದ್ರಾಯ ಕಪರ್ದಿನೇ ತೇ
ನಮೋಽಗ್ನಯೇ ದೇವ ನಮಃ ಶಿವಾಯ ॥ ೪೦ ॥

ತತಃ ಸ ಭಗವಾನ್ ಪ್ರೀತಃ ಕಪರ್ದೀ ವೃಷವಾಹನಃ ।
ಸಂಹೃತ್ಯ ಪರಮಂ ರೂಪಂ ಪ್ರಕೃತಿಸ್ಥೋಽಭವದ್ಭವಃ ॥ ೪೧ ॥

ತೇ ಭವಂ ಭೂತಭವ್ಯೇಶಂ ಪೂರ್ವವತ್ ಸಮುವಸ್ಥಿತಮ್ ।
ದೃಷ್ಟ್ವಾ ನಾರಾಯಣಂ ದೇವಂ ವಿಸ್ಮಿತಂ ವಾಕ್ಯಮಬ್ರುವನ್ ॥ ೪೨ ॥

ಭಗವನ್ ಭೂತಭವ್ಯೇಶ ಗೋವೃಷಾಂಕಿತಶಾಸನ ।
ದೃಷ್ಟ್ವಾ ತೇ ಪರಮಂ ರೂಪಂ ನಿರ್ವೃತಾಃ ಸ್ಮಃ ಸನಾತನ ॥ ೪೩ ॥

---

೪೦. ಜಗತ್ತಿಗೆ ಕಾರಣನೂ, ಕಾಲರೂಪಿಯೂ, ಸರ್ವಾತ್ಮನೂ, ಸರ್ವ ಸಂಹಾರಕನೂ, ವ್ಯಾಪಕನೂ ಆದ ನಿನಗೆ ನಮಸ್ಕಾರವು. ಜಟಾಜೂಟವನ್ನು ಧರಿಸಿದ ರುದ್ರಮೂರ್ತಿಯಾದ ನಿನಗೆ ನಮಸ್ಕಾರವು, ಅಗ್ನಿದೇವತಾರೂಪಿಯಾದ ನಿನಗೆ ನಮಸ್ಕಾರವು. ಮತ್ತು ಸರ್ವೇಶ್ವರನಾದ ನಿನಗೆ ನಮಸ್ಕಾರವು.

೪೧. ತರುವಾಯ ವೃಷಭವಾಹನನೂ, ಜಟಾಧರನೂ, ಭಗವಂತನೂ ಆದ ಆ ಈಶ್ವರನು ಸುಪ್ರೀತನಾಗಿ ಶಾಶ್ವತವಾದ ಆ ನಿಜರೂಪವನ್ನು ನಾಶಮಾಡಿ ಪ್ರಕೃತಿ ರೂಪವನ್ನು ಹೊಂದಿದನು.

೪೨. ಆಗ ಆ ಮುನಿಗಳು ಭೂತ, ಭವ್ಯ ವಸ್ತುಗಳಿಗೆ ಒಡೆಯನಾದ ಈಶ್ವರ ನನ್ನು ಮೊದಲಿನಂತೆ ಕುಳಿತಿರುವುದನ್ನು ನೋಡಿ ವಿಸ್ಮಯಗೊಂಡ ಶ್ರೀಮನ್ನಾರಾಯ ಣಸ್ವಾಮಿಯನ್ನು ಕುರಿತು ಈ ವಚನವನ್ನು ಹೇಳಿದರು.

೪೩. ಅನಾದಿಯೂ, ನಂದೀಶ್ವರನಿಂದ ಅಂಕಿತವಾದ ಶಾಸನವುಳ್ಳವನೂ, ಭೂತ-ಭವ್ಯ ವಸ್ತುಗಳಿಗೆ ಈಶ್ವರನೂ ಆದ ಭಗವಂತನೇ ! ಈಗ ನಿನ್ನ ಪರಮ ರೂಪವನ್ನು ಕಂಡು ಅತ್ಯಂತ ಆನಂದವನ್ನು ಹೊಂದಿದ್ದೇವೆ.

ಭವತ್ಪ್ರಸಾದಾದಮಲೇ ಪರಸ್ಮಿನ್ ಪರಮೇಶ್ವರೇ ।
ಅಸ್ಮಾಕಂ ಜಾಯತೇ ಭಕ್ತಿಸ್ತ್ವಯ್ಯೇವಾವ್ಯಭಿಚಾರಿಣೀ ॥ ೪೪ ॥

ಇದಾನೀಂ ಶ್ರೋತುಮಿಚ್ಛಾಮೋ ಮಾಹಾತ್ಮ್ಯಂ ತವ ಶಂಕರ ।
ಭೂಯೋಽಪಿ ಚೈವಂ ಯನ್ನಿತ್ಯಂ ಯಾಥಾತ್ಮ್ಯಂ ಪರಮೇಷ್ಠಿನಃ ॥

ಸ ತೇಷಾಂ ವಾಕ್ಯಮಾಕರ್ಣ್ಯ ಯೋಗಿನಾಂ ಯೋಗಸಿದ್ಧಿದಃ ।
ಪ್ರಾಹ ಗಂಭೀರಯಾ ವಾಚಾ ಸಮಾಲೋಕ್ಯ ಚ ಮಾಧವಮ್ ॥ ೪೬ ॥

ಇತಿ ಶ್ರೀ ಕೂರ್ಮಪುರಾಣೇ ಅಷ್ಟಾಪಂಚಾಶತ್ತಮೋಽಧ್ಯಾಯಃ.

---

೪೪. ಇನ್ನು ಮುಂದೆ ನಿನ್ನ ಅನುಗ್ರಹದಿಂದ ನಮಗೆ ನಿರ್ಮಲನೂ, ಸರ್ವೋತ್ತಮನೂ, ಪರಮೇಶ್ವರನೂ ಆದ ನಿನ್ನಲ್ಲಿಯೇ ಶಾಶ್ವತವಾದ ಭಕ್ತಿಯು ಉಂಟಾಗಲಿ.

೪೫. ಶಂಕರನೇ ! ಶ್ರೇಷ್ಠಸ್ಥಾನದಲ್ಲಿರುವ ನಿನ್ನ ಮಾಹಾತ್ಮ್ಯವನ್ನು ಈಗ ಕೇಳಲು ಕುತೂಹಲಪಡುತ್ತೇವೆ. ನಿನ್ನ ನಿತ್ಯವಾದ ಪರಮಾರ್ಥರೂಪವನ್ನು ಮತ್ತೆ ಕೇಳಬೇಕೆಂದು ಆಶಿಸುತ್ತೇವೆ.

೪೬. ಯೋಗಾಭ್ಯಾಸದ ಸಿದ್ಧಿಯನ್ನು ಅನುಗ್ರಹಿಸುವ ಶಂಕರನು ಆ ಯೋಗಿಗಳ ವಚನವನ್ನು ಕೇಳಿ ವಿಷ್ಣುವನ್ನು ನೋಡುತ್ತಾ ಗಂಭೀರವಾದ ವಾಣಿಯಿಂದ ಈ ಬಗೆಯಾಗಿ ಹೇಳಿದನು.

( ಕೂರ್ಮಪುರಾಣದಲ್ಲಿ ಐವತ್ತೆಂಟನೆಯ ಅಧ್ಯಾಯವು ಮುಗಿದುದು. )

ಶ್ರೀ

# ಕೂರ್ಮ ಪುರಾಣಂ

## ಏಕೋನಷಷ್ಟಿತಮೋಽಧ್ಯಾಯಃ.

ಈಶ್ವರ ಉವಾಚ :—

ಶೃಣುಧ್ವಮೃಷಯಃ ಸರ್ವೇ ಯಥಾವತ್ಪರಮೇಷ್ಠಿನಃ ।
ವಕ್ಷ್ಯಾಮೀಶಸ್ಯ ಮಾಹಾತ್ಮ್ಯಂ ಯತ್ತದ್ವೇದವಿದೋ ವಿದುಃ ॥ ೧ ॥

ಸರ್ವಲೋಕೈಕನಿರ್ಮಾತಾ ಸರ್ವಲೋಕೈಕರಕ್ಷಿತಾ ।
ಸರ್ವಲೋಕೈಕಸಂಹರ್ತಾ ಸರ್ವಾತ್ಮಾಹಂ ಸನಾತನಃ ॥ ೨ ॥

---

## ಐವತ್ತೊಂಭತ್ತನೆಯ ಅಧ್ಯಾಯವು

೧. ಈಶ್ವರನು ಹೀಗೆಂದು ಹೇಳಿದನು :— ಮುನಿಜನರೇ! ನೀವೆಲ್ಲರೂ ನನ್ನ ವಚನವನ್ನು ಕೇಳಿರಿ. ಪರಮಸ್ಥಾನದಲ್ಲಿರುವ ಈಶ್ವರನ ಮಾಹಾತ್ಮ್ಯವನ್ನು ಪರಮಾರ್ಥವಾಗಿ ನಾನು ಹೇಳುವೆನು. ವೇದಾರ್ಥಜ್ಞರು ಶಿವನ ಮಾಹಾತ್ಮ್ಯವನ್ನು ವಿಶೇಷವಾಗಿ ಕೊಂಡಾಡುವರು.

೨. ಸಮಸ್ತ ಲೋಕಗಳನ್ನು ನಿರ್ಮಿಸುವವನೂ, ಸಮಸ್ತ ಲೋಕಗಳನ್ನು ರಕ್ಷಿಸುವವನೂ, ಸಮಸ್ತ ಲೋಕಗಳನ್ನು ಸಂಹರಿಸುವವನೂ, ಸನಾತನನೂ ಆದ ನಾನು ಸರ್ವಾತ್ಮಕನಾಗಿರುವೆನು.

ಸರ್ವೇಷಾಮೇವ ವಸ್ತೂನಾಮಂತರ್ಯಾಮೀ ಮಹೇಶ್ವರಃ ।
ಮಧ್ಯೇ ಚಾಂತಃ ಸ್ಥಿತಂ ಸರ್ವಂ ನಾಹಂ ಸರ್ವತ್ರ ಸಂಸ್ಥಿತಃ ॥ ೩ ॥

ಭವದ್ಭಿರದ್ಭುತಂ ದೃಷ್ಟಂ ಯತ್ ಸ್ವರೂಪಂ ಚ ಮಾಮಕಮ್ ।
ಮಮೈಷಾ ಹ್ಯುಪಮಾ ವಿಪ್ರಾ ಮಾಯಯಾ ವೈ ದರ್ಶಿತಾ ಮಯಾ ॥ ೪ ॥

ಸರ್ವೇಷಾಮೇವ ಭಾವಾನಾಮಂತರಂ ಸಮವಸ್ಥಿತಃ ।
ಪ್ರೇರಯಾಮಿ ಜಗತ್ ಕೃತ್ಸ್ನಂ ಕ್ರಿಯಾಶಕ್ತಿರಿಯಂ ಮಮ ॥ ೫ ॥

ಮಯೇದಂ ಚೇಷ್ಟತೇ ವಿಶ್ವಂ ತದ್ವೈ ಭಾವಾನುವರ್ತಿ ಮೇ ।
ಸೋಽಹಂ ಕಾಲೋ ಜಗತ್ ಕೃತ್ಸ್ನಂ ಪ್ರೇರಯಾಮಿ ಕಲಾತ್ಮಕಮ್ ॥

---

೩. ಮಹೇಶ್ವರನಾದ ನಾನು ಸರ್ವವಸ್ತುಗಳಲ್ಲಿ ಅಂತರ್ಯಾಮಿಯಾಗಿರುವೆನು. ಸರ್ವವಸ್ತುಗಳೂ ನನ್ನೊಳಗೆ ಮಧ್ಯಭಾಗದಲ್ಲಿರುವುವು. ನಾನು ಯಾವ ಆಧಾರದಲ್ಲಿಯೂ ಇರುವವನಲ್ಲ.

೪. ನಿಮ್ಮಿಂದ ಅದ್ಭುತವಾದ ಯಾವ ನನ್ನ ಸ್ವರೂಪವು ಸಂದರ್ಶಿಸಲ್ಪಟ್ಟಿತೋ, ಆ ರೂಪವು ನನಗೆ ಉಪಮಾನವಾಗಿರುವುದು. ವಿಪ್ರರೇ ! ನಿಮಗೆ ನನ್ನಿಂದ ಇದೊಂದು ಮಾಯೆಯು ತೋರಿಸಲ್ಪಟ್ಟಿತು.

೫. ನಾನು ಸಮಸ್ತ ವಸ್ತುಗಳ ಅಂತರದಲ್ಲಿ ಇರುವವನಾಗಿ ಸಂಪೂರ್ಣ ಜಗತ್ತನ್ನು ಆಯಾಯ ಕ್ರಿಯೆಗಳಲ್ಲಿ ಪ್ರೇರಿಸುತ್ತೇನೆ. ಇದು ನನ್ನ ಸಹಜವಾದ ಕ್ರಿಯಾಶಕ್ತಿಯಾಗಿರುವುದು.

೬. ಈ ವಿಶ್ವವು ನನ್ನಿಂದ ಚಲಿಸುತ್ತಿದೆ. ಈ ವಿಶ್ವವು ನನ್ನ ಸ್ವಭಾವವನ್ನು ಅನುಸರಿಸುತ್ತಿದೆ. ಕಾಲರೂಪಿಯಾದ ಆ ನಾನು ನನ್ನ ಅಂಶವಾದ ಸಂಪೂರ್ಣ ಜಗತ್ತನ್ನು ಪ್ರೇರೇಪಿಸುತ್ತೇನೆ.

ಏಕಾಂಶೇನ ಜಗತ್ ಕೃತ್ಸ್ನಂ ಕರೋಮಿ ಮುನಿಪುಂಗವಾಃ ।
ಸಂಹರಾಮ್ಯೇಕರೂಪೇಣ ಸ್ಥಿತಾವಸ್ಥಾ ಮಮೈವ ತು ॥ ೭ ॥

ಆದಿಮಧ್ಯಾಂತನಿರ್ಮುಕ್ತೋ ಮಾಯಾತತ್ತ್ವಪ್ರವರ್ತಕಃ ।
ಕ್ಷೋಭಯಾಮಿ ಚ ಸರ್ಗಾದೌ ಪ್ರಧಾನಪುರುಷಾವುಭೌ ॥ ೮ ॥

ತಾಭ್ಯಾಂ ಸಂಜಾಯತೇ ವಿಶ್ವಂ ಸಂಯುಕ್ತಾಭ್ಯಾಂ ಪರಸ್ಪರಮ್ ।
ಮಹದಾದಿಕ್ರಮೇಣೈವ ಮಮ ತೇಜೋ ವಿಜೃಂಭತೇ ॥ ೯ ॥

ಯೋ ಹಿ ಸರ್ವಜಗತ್ಸಾಕ್ಷೀ ಕಾಲಚಕ್ರಪ್ರವರ್ತಕಃ ।
ಹಿರಣ್ಯಗರ್ಭೋ ಮಾರ್ತಂಡಃ ಸೋಽಪಿ ಮದ್ದೇಹಸಂಭವಃ ॥ ೧೦ ॥

---

೭. ಮುನಿಶ್ರೇಷ್ಠರೇ ! ನಾನು ಒಂದು ಅಂಶದಿಂದ ಸಮಸ್ತ ಜಗತ್ತನ್ನು ನಿರ್ಮಿಸುತ್ತೇನೆ. ನನ್ನ ಮತ್ತೊಂದು ಅಂಶದಿಂದ ಜಗತ್ತನ್ನು ಸಂಹರಿಸುತ್ತೇನೆ. ಆದರೂ ನನ್ನ ಸ್ವರೂಪವು ನಿರ್ವಿಕಾರವಾಗಿರುವುದು.

೮. ಆದಿ-ಮಧ್ಯ-ಅಂತಗಳಿಂದ ವರ್ಜಿತನೂ, ಮಾಯಾ ತತ್ತ್ವವನ್ನು ಪ್ರೇರೇಪಿಸುವವನೂ ಆದ ನಾನು ಸೃಷ್ಟಿಯ ಆದಿ ಸಮಯದಲ್ಲಿ ಪ್ರಧಾನ ಮತ್ತು ಪುರುಷ. ಎಂಬ ಎರಡು ತತ್ತ್ವಗಳನ್ನು ಕ್ಷೋಭಪಡಿಸುತ್ತೇನೆ.

೯. ಹೀಗೆ ಪರಸ್ಪರವಾಗಿ ಸಂಯೋಗ ಹೊಂದಿದ ಪ್ರಧಾನ-ಪುರುಷರಿಂದ ಮಹತ್ತತ್ತ್ವ ಮುಂತಾದ ಕ್ರಮವನ್ನು ಅನುಸರಿಸಿ ವಿಶ್ವವು ಹುಟ್ಟುವುದು ತನ್ಮೂಲಕವಾಗಿ ನನ್ನ ತೇಜಸ್ಸು ವಿಜೃಂಭಿಸುತ್ತದೆ.

೧೦. ಸಮಸ್ತ ಜಗತ್ತಿಗೆ ಸಾಕ್ಷಿಸ್ವರೂಪನೂ, ಕಾಲಚಕ್ರವನ್ನು ತಿರುಗಿಸುವವನೂ, ಹಿರಣ್ಯಗರ್ಭನೂ ಆದ ಆದಿತ್ಯದೇವನೂ ಕೂಡ ನನ್ನ ದೇಹದಿಂದ ಜನ್ಮವೆತ್ತಿರುವನು.

ತಸ್ಮೈ ದಿವ್ಯಂ ಸ್ವಮೈಶ್ವರ್ಯಂ ಜ್ಞಾನಯೋಗಂ ಸನಾತನಮ್ ।
ದತ್ತವಾನಾತ್ಮಜಾನ್ ವೇದಾನ್ ಕಲ್ಪಾದೌ ಚತುರೋ ದ್ವಿಜಾಃ ॥ ೧೧ ॥

ಸ ಮನ್ನಿಯೋಗತೋ ದೇವೋ ಬ್ರಹ್ಮಾ ಮದ್ಭಾವಭಾವಿತಃ ।
ದಿವ್ಯಂ ತನ್ಮಾಮಕೈಶ್ವರ್ಯಂ ಸರ್ವದಾವಗತಃ ಸ್ವಯಮ್ ॥ ೧೨ ॥

ಸ ಸರ್ವಲೋಕನಿರ್ಮಾತಾ ಮನ್ನಿಯೋಗೇನ ಸರ್ವವಿತ್ ।
ಭೂತ್ವಾ ಚತುರ್ಮುಖಃ ಸರ್ಗಂ ಸೃಜತ್ಯೇವಾತ್ಮಸಂಭವಃ ॥ ೧೩ ॥

ಯೋಽಪಿ ನಾರಾಯಣೋಽನಂತೋ ಲೋಕಾನಾಂ ಪ್ರಭವೋಽವ್ಯಯಃ।
ಮಮೈವ ಚ ಪರಾ ಮೂರ್ತಿಃ ಕರೋತಿ ಪರಿಪಾಲನಮ್ ॥ ೧೪ ॥

---

೧೧. ದ್ವಿಜರೇ ! ಆ ಹಿರಣ್ಯಗರ್ಭನಿಗೆ ಕಲ್ಪಾದಿಯಲ್ಲಿ ನನ್ನ ದಿವ್ಯವಾದ ಐಶ್ವರ್ಯರೂಪವೂ, ಅನಾದಿಯೂ ಆದ ಜ್ಞಾನಯೋಗವನ್ನೂ, ವೇದವನ್ನೂ ಜಾಗರೂಕನಾದ ನಾನು ಉಪದೇಶಿಸಿರುವೆನು.

೧೨. ನನ್ನ ಭಾವನೆಯಿಂದ ಸಂಸ್ಕೃತನಾಗಿರುವ ಆ ಬ್ರಹ್ಮದೇವನು ನನ್ನ ನಿಯೋಗದಂತೆ ದಿವ್ಯವಾದ ನನ್ನ ಐಶ್ವರ್ಯ ಶಕ್ತಿಯನ್ನು ಯಾವಾಗಲೂ ತಾನಾಗಿ ತಿಳಿದುಕೊಂಡಿರುವನು.

೧೩. ಸಮಸ್ತ ಲೋಕಗಳನ್ನು ನಿರ್ಮಾಣಮಾಡುವವನೂ, ತನ್ನ ಶಕ್ತಿಯಿಂದ ಜನಿಸಿದವನೂ ಆದ ಬ್ರಹ್ಮದೇವನು ನನ್ನ ನಿಯೋಗದಿಂದ ಸರ್ವಜ್ಞನಾಗಿ ಪ್ರಪಂಚದ ಸೃಷ್ಟಿಯನ್ನು ರಚಿಸುತ್ತಾನೆ.

೧೪. ಲೋಕಗಳಿಗೆ ಕಾರಣನೂ, ವ್ಯಯರಹಿತನೂ, ಅಂತಶೂನ್ಯನೂ ಆದ ನಾರಾಯಣನು ಕೂಡ ನನ್ನದೇ ಆದ ಒಂದು ಮೂರ್ತಿರೂಪನಾಗಿ ಜಗತ್ತಿನ ರಕ್ಷಣೆಯನ್ನು ನಿರ್ವಹಿಸುತ್ತಾನೆ.

ಯೋಽಂತಕಃ ಸರ್ವಭೂತಾನಾಂ ರುದ್ರಃ ಕಾಲಾತ್ಮಕಃ ಪ್ರಭುಃ ।
ಮದಾಜ್ಞಯಾಽಸೌ ಸತತಂ ಸಂಹರಿಷ್ಯತಿ ಮೇ ತನುಃ ॥ ೧೫ ॥

ಹವ್ಯಂ ವಹತಿ ದೇವಾನಾಂ ಕವ್ಯಂ ಕವ್ಯಾಶಿನಾಮಪಿ ।
ಪಾಕಂ ಚ ಕುರುತೇ ವಹ್ನಿಃ ಸೋಽಪಿ ಮಚ್ಛಕ್ತಿನೋದಿತಃ ॥ ೧೬ ॥

ಭುಕ್ತಮಾಹಾರಜಾತಂ ಚ ಪಚತೇ ತದಹರ್ನಿಶಮ್ ।
ವೈಶ್ವಾನರೋಽಗ್ನಿರ್ಭಗವಾನೀಶ್ವರಸ್ಯ ನಿಯೋಗತಃ ॥ ೧೭ ॥

ಯೋಽಪಿ ಸರ್ವಾಂಭಸಾಂ ಯೋನಿರ್ವರುಣೋ ದೇವಪುಂಗವಃ ।
ಸೋಽಪಿ ಸಂಜೀವಯೇತ್ ಕೃತ್ಸ್ನಮೀಶ್ವರಸ್ಯ ನಿಯೋಗತಃ ॥ ೧೮ ॥

---

೧೫. ಸರ್ವದಕ್ಷನೂ, ಕಾಲಸ್ವರೂಪಿಯೂ, ರುದ್ರಮೂರ್ತಿಯೂ ಆದ ಸಮಸ್ತ ಭೂತಗಳನ್ನು ಸಂಹರಿಸುವ ಅಂತಕನು ಕೂಡ ನನ್ನ ಮೂರ್ತಿ ವಿಶೇಷ ರೂಪನಾಗಿ ನನ್ನ ಆಜ್ಞೆಯಿಂದ ಸಂತತವಾಗಿ ಜಗತ್ತನ್ನು ಸಂಹರಿಸುವನು.

೧೬. ದೇವತೆಗಳಿಗೆ ಹವ್ಯರೂಪವಾದ ಅನ್ನವನ್ನೂ ಪಿತೃಗಳಿಗೆ ಕವ್ಯರೂಪವಾದ ಅನ್ನವನ್ನೂ ವಹಿಸುವವನೂ, ಪಾಕಕ್ರಿಯೆಗೆ ಸಾಧಕನೂ ಆದ ವಹ್ನಿಯೂ ಕೂಡ ತನ್ನ ಕಾರ್ಯರಂಗದಲ್ಲಿ ನನ್ನ ಶಕ್ತಿಯಿಂದ ಪ್ರೇರೇಪಿಸಲ್ಪಡುವನು.

೧೭. ವೈಶ್ವಾನರರೂಪದಿಂದ ಜಠರದಲ್ಲಿ ವಾಸಮಾಡುವ ಪೂಜ್ಯವಾದ ಜಠರಾಗ್ನಿಯು ಈಶ್ವರನ ಆಜ್ಞೆಯಿಂದ ಭುಂಜಿಸಿದ ಆಹಾರಸಾಮಗ್ರಿಯನ್ನು ಹಗಲು ರಾತ್ರಿಗಳಲ್ಲಿ ಪಚನಮಾಡುತ್ತಿರುವನು.

೧೮. ಸಮಸ್ತ ಜಲಗಳಿಗೆ ಕಾರಣನೂ, ವರುಣ ಎಂಬ ಸಂಜ್ಞಾಂಕಿತನೂ ಆದ ಉತ್ತಮದೇವನೂ ಕೂಡ ಈಶ್ವರನ ನಿಯೋಗದಿಂದ ಸಂಪೂರ್ಣ ಜಗತ್ತನ್ನು ಜೀವನಗೊಳಿಸುತ್ತಿರುವನು.

ಯೋಽಂತಸ್ತಿಷ್ಠತಿ ಭೂತಾನಾಂ ಬಹಿರ್ದೇವಃ ಪ್ರಭಂಜನಃ ।
ಮದಾಜ್ಞಯಾಸೌ ಭೂತಾನಾಂ ಶರೀರಾಣಿ ಬಿಭರ್ತಿ ಹಿ ॥ ೧೯ ॥

ಯೋಽಪಿ ಸಂಜೀವನೋ ನೃಣಾಂ ದೇವಾನಾಮಮೃತಾಕರಃ ।
ಸೋಮಃ ಸ ಮನ್ನಿಯೋಗೇನ ನೋದಿತಃ ಕಿಲ ವರ್ತತೇ ॥ ೨೦ ॥

ಯಃ ಸ್ವಭಾಸಾ ಜಗತ್ ಕೃತ್ಸ್ನಂ ಪ್ರಭಾಸಯತಿ ಸರ್ವಶಃ ।
ಸೂರ್ಯೋ ವೃಷ್ಟಿಂ ವಿತನುತೇ ಸ್ವೋಽಸ್ರೇಣೈವ ಸ್ವಯಂಭುವಃ ॥ ೨೧ ॥

ಯೋಽಪ್ಯಶೇಷಜಗಚ್ಛಾಸ್ತಾ ಶಕ್ರಃ ಸರ್ವಾಮರೇಶ್ವರಃ ।
ಯಜ್ವನಾಂ ಫಲದೋ ದೇವೋ ವರ್ತತೇ ಸ ಮದಾಜ್ಞಯಾ ॥ ೨೨ ॥

---

೧೯. ಹೊರಭಾಗದಲ್ಲಿ ಬೀಸುತ್ತಿರುವ ಯಾವ ವಾಯುದೇವನು ಪ್ರಾಣಿಗಳ ಶರೀರದೊಳಗೆ ಸಂಚರಿಸುವನೋ, ಅವನು ನನ್ನ ಆಜ್ಞೆಯಿಂಲೇ ಪ್ರಾಣಿಗಳ ಶರೀರಗಳನ್ನು ಧರಿಸಿರುವನು.

೨೦. ಮನುಷ್ಯರಿಗೂ, ದೇವತೆಗಳಿಗೂ, ಜೀವವನ್ನುಂಟುಮಾಡುವ, ಅಮೃತ ಕಿರಣಗಳಿಗೆ ನಿಧಿಯಾದ ಚಂದ್ರನೂ ಕೂಡ ನನ್ನ ಆಜ್ಞೆಯಿಂದ ಪ್ರೇರೇಪಿಸಲ್ಪಟ್ಟವನಾಗಿ ತನ್ನ ಕಾರ್ಯನಿರ್ವಾಹಕ್ಕೆ ಇಳಿಯುತ್ತಾನೆ.

೨೧. ತನ್ನ ಪ್ರಕಾಶದಿಂದ ಯಾವಾಗಲೂ ಸಂಪೂರ್ಣ ಜಗತ್ತನ್ನು ಬೆಳಗುವವನೂ, ತನ್ನ ಕಿರಣಗಳಿಂದ ವೃಷ್ಟಿಯನ್ನು ವಿಸ್ತರಿಸುವವನೂ ಆದ ಸೂರ್ಯನು ನನ್ನ ಆಜ್ಞಾಧಾರಕನಾಗಿರುವನು.

೨೨. ಅಶೇಷ ಜಗತ್ತನ್ನು ಶಾಸನಮಾಡುವವನೂ, ಸಮಸ್ತ ದೇವತೆಗಳಿಗೆ ರಾಜನೂ, ಯಜ್ಞಾನುಷ್ಠಾನಮಾಡಿದವರಿಗೆ ಫಲದಾಯಕನೂ ಆದ ಇಂದ್ರನು ನನ್ನ ಆಜ್ಞೆಯಂತೆ ನಡೆಯುವನು.

ಯಃ ಪ್ರಶಾಸ್ತಾ ಹ್ಯಸಾಧೂನಾಂ ವರ್ತತೇ ನಿಯಮಾದಿಹ ।
ಯಮೋ ವೈವಸ್ವತೋ ದೇವೋ ದೇವದೇವನಿಯೋಗತಃ ॥ ೨೩ ॥

ಯೋಽಪಿ ಸರ್ವಧನಾಧ್ಯಕ್ಷೋ ಧನಾನಾಂ ಸಂಪ್ರದಾಯಕಃ ।
ಸೋಽಪೀಶ್ವರನಿಯೋಗೇನ ಕುಬೇರೋ ವರ್ತತೇ ಸದಾ ॥ ೨೪ ॥

ಯಃ ಸರ್ವರಕ್ಷಸಾಂ ನಾಥಸ್ತಾಮಸಾನಾಂ ಫಲಪ್ರದಃ ।
ಮನ್ನಿಯೋಗಾದಸೌ ದೇವೋ ವರ್ತತೇ ನಿರ್ಋತಿಃ ಸದಾ ॥ ೨೫ ॥

ವೇತಾಲಗಣಭೂತಾನಾಂ ಸ್ವಾಮೀ ಭೋಗಫಲಪ್ರದಃ ।
ಈಶಾನಃ ಕಿಲ ಭಕ್ತಾನಾಂ ಸೋಽಪಿ ತಿಷ್ಠೇನ್ಮದಾಜ್ಞಯಾ ॥ ೨೬ ॥

---

೨೩. ದುಷ್ಟಜನರನ್ನು ಶಿಕ್ಷಿಸುವ ಸೂರ್ಯನ ಪುತ್ರನಾದ ಯಮಧರ್ಮರಾಜನು ದೇವೋತ್ತಮನಾದ ಈಶ್ವರನ ನಿಯೋಗದಿಂದ ನಿಯಮವಾಗಿ ತನ್ನ ಕಾರ್ಯಗಳನ್ನು ನೆರವೇರಿಸುವನು.

೨೪. ಸಮಸ್ತ ಧನಗಳಿಗೆ ಅಧಿಪತಿಯೂ, ಧನವನ್ನು ಯಥೇಚ್ಛವಾಗಿ ವಿನಿಯೋಗಿಸುವವನೂ ಆದ ಕುಬೇರನೂ ಕೂಡ ಯಾವಾಗಲೂ ಈಶ್ವರನ ನಿಯೋಗವನ್ನು ಅನುವರ್ತಿಸುವನು.

೨೫. ಮತ್ತು ಸಮಸ್ತ ರಾಕ್ಷಸರಿಗೆ ಅಧಿಪತಿಯೂ, ತಾಮಸವಾದ ಕರ್ಮಗಳಿಗೆ ಫಲದಾಯಕನೂ ಆದ ನಿರ್ಋತಿ ಎಂಬ ದೇವನು ಕೂಡ ಯಾವಾಗಲೂ ನನ್ನ ಆಜ್ಞಾಪಥದಲ್ಲಿ ಸಂಚರಿಸುವನು.

೨೬. ಭೇತಾಳ, ಗಣ, ಭೂತ ಮುಂತಾದುವುಗಳಿಗೆ ಸ್ವಾಮಿಯೂ, ಭೋಗಫಲವನ್ನು ನೀಡುವವನೂ, ಭಕ್ತವೃಂದಕ್ಕೆ ನಿಯಾಮಕನೂ ಆದ ಈಶಾನಮೂರ್ತಿಯು ನನ್ನ ಆಜ್ಞೆಯಂತೆ ಇರುವನು.

ಯೋ ವಾಮದೇವೋಽಂಗಿರಸಃ ಶಿಷ್ಯೋ ರುದ್ರಗಣಾಗ್ರಣೀಃ ।
ರಕ್ಷಕೋ ಯೋಗಿನಾಂ ನಿತ್ಯಂ ವರ್ತತೇಽಸೌ ಮದಾಜ್ಞಯಾ ॥ ೨೭ ॥

ಯಶ್ಚ ಸರ್ವಜಗತ್ಪೂಜ್ಯೋ ವರ್ತತೇ ವಿಘ್ನನಾಯಕಃ ।
ವಿನಾಯಕೋ ಧರ್ಮರತಃ ಸೋಽಪಿ ಮದ್ವಚನಾತ್ ಕಿಲ ॥ ೨೮ ॥

ಯೋಽಪಿ ಬ್ರಹ್ಮವಿದಾಂ ಶ್ರೇಷ್ಠೋ ದೇವಸೇನಾಪತಿಃ ಪ್ರಭುಃ ।
ಸ್ಕಂದೋಽಸೌ ವರ್ತತೇ ನಿತ್ಯಂ ಸ್ವಯಂಭೂರ್ವಿಧಿನೋದಿತಃ ॥ ೨೯ ॥

ಯೇ ಚ ಪ್ರಜಾನಾಂ ಪತಯೋ ಮರೀಚ್ಯಾದ್ಯಾ ಮಹರ್ಷಯಃ ।
ಸೃಜಂತಿ ವಿವಿಧಂ ಲೋಕಂ ಪರಸ್ಯೈವ ನಿಯೋಗತಃ ॥ ೩೦ ॥

---

೨೭. ಅಂಗಿರೋಮುನಿಯ ಶಿಷ್ಯನೂ, ರುದ್ರಮೂರ್ತಿಗಳ ಗಣಕ್ಕೆ ನಾಯಕನೂ ಯೋಗಿಗಳಿಗೆ ರಕ್ಷಕನೂ ಆದ ವಾಮದೇವಮೂರ್ತಿಯು ನನ್ನ ಆಜ್ಞೆಯಂತೆ ನಡೆಯುವನು.

೨೮. ಸಮಸ್ತ ಜಗತ್ತಿಗೆ ಪೂಜ್ಯನೂ, ವಿಘ್ನಗಳಿಗೆ ನಾಯಕನೂ, ಧರ್ಮ ಮಾರ್ಗದಲ್ಲಿ ಆಸಕ್ತನೂ ಆದ ವಿನಾಯಕ ಸ್ವಾಮಿಯು ನನ್ನ ಆಜ್ಞಾ ವಚನವನ್ನನು ಸರಿಸಿ ನಡೆದುಕೊಳ್ಳುವನು.

೨೯. ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನೂ, ದೇವಸೈನ್ಯಕ್ಕೆ ಅಧಿಪತಿಯೂ, ಪ್ರಭುವೂ, ತಾನಾಗಿ ಜನಿಸಿದವನೂ ಆದ ಕುಮಾರಮೂರ್ತಿಯು ಯಾವಾಗಲೂ ನನ್ನ ಆಜ್ಞೆಯಿಂದ ಪ್ರೇರೇಪಿಸಲ್ಪಡುವನು.

೩೦. ಮಹರ್ಷಿಗಳೆಂದೆನಿಸಿದ ಮರೀಚಿ ಮುಂತಾದ ಪ್ರಜಾಪತಿಗಳು ಅನೇಕ ವಿಧವಾದ ಲೋಕಗಳನ್ನು ನಿರ್ಮಾಣಮಾಡುವುದೂ ಪರಮಾತ್ಮನ ನಿಯೋಗ ದಿಂದ ಆಗಿದೆ.

ಯಾ ಚ ಶ್ರೀಃ ಸರ್ವಭೂತಾನಾಂ ದದಾತಿ ವಿಪುಲಾಂ ಶ್ರಿಯಮ್ ।
ಪತ್ನೀ ನಾರಾಯಣಸ್ಯಾಸೌ ವರ್ತತೇ ಮದನುಗ್ರಹಾತ್ ॥ ೩೧ ॥

ವಾಚಂ ದದಾತಿ ವಿಪುಲಾಂ ಯಾ ಚ ದೇವೀ ಸರಸ್ವತೀ ।
ಸಾಪೀಶ್ವರನಿಯೋಗೇನ ನೋದಿತಾ ಸಂಪ್ರವರ್ತತೇ ॥ ೩೨ ॥

ಯಾಶೇಷಪುರುಷಾನ್ ಘೋರಾನ್ನರಕಾತ್ತಾರಯಿಷ್ಯತಿ ।
ಸಾವಿತ್ರೀ ಸಂಸ್ಮೃತಾ ಚಾಪಿ ಮದಾಜ್ಞಾನುವಿಧಾಯಿನೀ ॥ ೩೩ ॥

ಪಾರ್ವತೀ ಪರಮಾ ದೇವೀ ಬ್ರಹ್ಮವಿದ್ಯಾಪ್ರದಾಯಿನೀ ।
ಯಾಪಿ ಧ್ಯಾತಾ ವಿಶೇಷೇಣ ಸಾಪಿ ಮದ್ವಚನಾನುಗಾ ॥ ೩೪ ॥

---

೩೧. ಸರ್ವ ಭೂತಗಳಿಗೆ ವಿಸ್ತಾರವಾದ ಸಂಪತ್ತನ್ನು ದಾನಮಾಡುವ ಶೀಲವುಳ್ಳ ಶ್ರೀಮನ್ನಾರಾಯಣನ ಪತ್ನಿಯಾದ ಲಕ್ಷ್ಮೀದೇವಿಯು ನನ್ನ ಅನುಗ್ರಹದಿಂದ ಇರುವಳು.

೩೨. ಸರ್ವ ಪ್ರಾಣಿಗಳಿಗೆ ವಿಪುಲವಾದ ವಾಕ್ ಶಕ್ತಿಯನ್ನು ಅನುಗ್ರಹಿಸುವ ಸರಸ್ವತೀ ದೇವಿಯು ಈಶ್ವರನ ಆಜ್ಞೆಯಿಂದ ಪ್ರೇರಿಸಲ್ಪಟ್ಟವಳಾಗಿ ತನ್ನ ಕಾರ್ಯವನ್ನು ನಿರ್ವಹಿಸುತ್ತಾಳೆ.

೩೩. ಸಮಸ್ತ ಮಾನವರನ್ನು ಘೋರವಾದ ನರಕದಿಂದ ಉದ್ಧರಿಸಿ ಅನುಗ್ರಹಮಾಡುವಳೆಂದು ಸ್ಮರಿಸಲ್ಪಟ್ಟ ಸಾವಿತ್ರೀದೇವಿಯು ನನ್ನ ಆಜ್ಞಾವಶವರ್ತಿಯಾಗಿರುವಳು.

೩೪. ಭಕ್ತರಿಂದ ಧ್ಯಾನಮಾಡಲ್ಪಟ್ಟವಳಾಗಿ ಬ್ರಹ್ಮವಿದ್ಯೆಯನ್ನು ಅನುಗ್ರಹಿಸುವ ಸರ್ವೋತ್ತಮಳಾದ ಪಾರ್ವತೀದೇವಿಯು ನನ್ನ ಆಜ್ಞಾವಚನವನ್ನು ಮಾನಿಸಿ ಸ್ವಕಾರ್ಯದಲ್ಲಿ ತೊಡಗುವಳು.

ಯೋಽನಂತಮಹಿಮಾನಂತಃ ಶೇಷೋಽಶೇಷಾಮರಪ್ರಭುಃ ।
ದಧಾತಿ ಶಿರಸಾ ಲೋಕಂ ಸೋಽಪಿ ದೇವನಿಯೋಗತಃ ॥ ೩೫ ॥

ಯೋಽಗ್ನಿಃ ಸಂವರ್ತಕೋ ನಿತ್ಯಂ ಬಡವಾರೂಪಸಂಸ್ಥಿತಃ ।
ಪಿಬತ್ಯಖಿಲಮಂಭೋಧಿಮೀಶ್ವರಸ್ಯ ನಿಯೋಗತಃ ॥ ೩೬ ॥

ಯೇ ಚತುರ್ದಶ ಲೋಕೇಽಸ್ಮಿನ್ಮನವಃ ಪ್ರಥಿತೌಜಸಃ ।
ಪಾಲಯಂತಿ ಪ್ರಜಾಃ ಸರ್ವಾಸ್ತೇಽಪಿ ತಸ್ಯ ನಿಯೋಗತಃ ॥ ೩೭ ॥

ಆದಿತ್ಯಾ ವಸವೋ ರುದ್ರಾ ಮರುತಶ್ಚ ತಥಾಶ್ವಿನೌ ।
ಅನ್ಯಾಶ್ಚ ದೇವತಾಃ ಸರ್ವಾಃ ಶಾಸ್ತ್ರೇಣೈವ ವಿನಿರ್ಮಿತಾಃ ॥ ೩೮ ॥

---

೩೫. ಅಪಾರವಾದ ಮಹಿಮೆಗಳಿಂದ ಕೂಡಿದವನೂ, ಸಮಸ್ತ ದೇವತೆಗಳಿಗೆ ಪ್ರಭುವೂ, ಅಂತರಹಿತನೂ ಆದ ಆದಿಶೇಷನು ಈಶ್ವರನ ನಿಯೋಗದಿಂದ ತನ್ನ ಶಿರಸ್ಸಿನಲ್ಲಿ ಲೋಕಗಳನ್ನು ಧರಿಸಿಕೊಂಡಿರುವನು.

೩೬. ಸಮುದ್ರದಲ್ಲಿ ಬಡಬಾಗ್ನಿರೂಪದಿಂದ ಯಾವಾಗಲೂ ವಾಸಮಾಡಿಕೊಂಡಿರುವ ಸಂವರ್ತಕವೆಂಬ ಅಗ್ನಿಯು ಈಶ್ವರನ ನಿಯೋಗವನ್ನು ಅನುಸರಿಸಿ ಸಂಪೂರ್ಣವಾಗಿ ಸಮುದ್ರವನ್ನು ಪಾನಮಾಡುತ್ತಿರುವುದು.

೩೭. ಈ ಲೋಕದಲ್ಲಿ ಪ್ರಸಿದ್ಧವಾದ ಮಹಿಮೆಯುಳ್ಳ ಯಾವ ಹದಿನಾಲ್ಕು ಮಂದಿ ಮನುರಾಜರು ಮೂಲಭೂತರಾಗಿರುವರೋ, ಅವರೆಲ್ಲರೂ ಈಶ್ವರನ ನಿಯೋಗಾಧೀನರಾಗಿ ಸಮಸ್ತ ಪ್ರಜೆಗಳನ್ನು ಪಾಲಿಸುತ್ತಾರೆ.

೩೮. ಮತ್ತು ಆದಿತ್ಯ, ವಸು, ರುದ್ರ, ಮರುತ್, ಅಶ್ವಿ ಎಂಬ ಅನೇಕ ಗಣ ದೇವತೆಗಳೂ ಹಾಗೂ ಇತರ ಸಮಸ್ತ ದೇವತೆಗಳೂ ನನ್ನ ಆಜ್ಞಾಧಾರಕರಾಗಿ ಇರುವಂತೆ ನಿರ್ಮಾಣಮಾಡಲ್ಪಟ್ಟಿರುವರು.

ಗಂಧರ್ವಾ ಗರುಡಾದ್ಯಾಶ್ಚ ಸಿದ್ಧಾಃ ಸಾಧ್ಯಾಶ್ಚ ಚಾರಣಾಃ ।
ಯಕ್ಷರಕ್ಷಃಪಿಶಾಚಾಶ್ಚ ಸ್ಥಿತಾಃ ಸೃಷ್ಟಾಃ ಸ್ವಯಂಭುವಾ ॥ ೩೯ ॥

ಕಲಾಕಾಷ್ಠಾನಿಮೇಷಾಶ್ಚ ಮುಹೂರ್ತಾ ದಿವಸಾಃ ಕ್ಷಪಾಃ ।
ಋತವಃ ಪಕ್ಷಮಾಸಾಶ್ಚ ಸ್ಥಿತಾಃ ಶಾಸ್ತ್ರೇ ಪ್ರಜಾಪತೇ ॥ ೪೦ ॥

ಯುಗಮನ್ವಂತರಾಣ್ಯೇವ ಮಮ ತಿಷ್ಠಂತಿ ಶಾಸನೇ ।
ಪರಾಶ್ಚೈವ ಪರಾರ್ಧಾಶ್ಚ ಕಾಲಭೇದಾಸ್ತಥಾ ಪರೇ ॥ ೪೧ ॥

ಚತುರ್ವಿಧಾನಿ ಭೂತಾನಿ ಸ್ಥಾವರಾಣಿ ಚರಾಣಿ ಚ ।
ನಿಯೋಗಾದೇವ ವರ್ತಂತೇ ದೇವಸ್ಯ ಪರಮಾತ್ಮನಃ ॥ ೪೨ ॥

---

೩೯. ಮತ್ತು ಗಂಧರ್ವ, ಗರುಡ ಸಿದ್ಧ, ಸಾಧ್ಯ, ಚಾರಣ, ಯಕ್ಷ, ರಾಕ್ಷಸ, ಪಿಶಾಚ ಮುಂತಾದ ಅನೇಕ ಪ್ರಜಾವರ್ಗವು ಈಶ್ವರನ ನಿಯೋಗವನ್ನು ಮೀರದಂತೆ ಈಶ್ವರನಿಂದ ಸೃಷ್ಟಿಸಲ್ಪಟ್ಟಿದೆ.

೪೦. ಕಲಾ, ಕಾಷ್ಠಾ, ನಿಮೇಷ, ಮುಹೂರ್ತ, ದಿವಸ, ರಾತ್ರಿ, ಋತು, ಪಕ್ಷ ಮತ್ತು ಮಾಸ ಮುಂತಾದ ಗಣನಾಸ್ಪದವಾದ ಕಾಲಾವಯವಗಳು ಸರ್ವೇಶ್ವರನ ಶಾಸನಾಧೀನವಾಗಿ ಜರುಗುವುವು.

೪೧. ಹಾಗು ಯುಗ, ಮನ್ವಂತರ, ಪರ, ಪರಾರ್ಧವೆಂಬ ಮಿಕ್ಕ ಅನೇಕ ವಿಧವಾದ ಕಾಲವಿಶೇಷಗಳು ನನ್ನ ಶಾಸನ ಪಥದಲ್ಲಿದ್ದು ಸ್ವಕಾರ್ಯಪರಿಣಾಮವನ್ನು ನೆರವೇರಿಸುತ್ತವೆ.

೪೨. ಜರಾಯುಜ, ಅಂಡಜ, ಸ್ವೇದಜ, ಉಬ್ಭಿಜ್ಜ ಎಂಬ ನಾಲ್ಕು ವಿಧದ ಪ್ರಾಣಿಗಳೂ ಚರ, ಅಚರಪ್ರಾಣಿಗಳೂ ಮಹೇಶ್ವರನಾದ ಪರಮಾತ್ಮನ ನಿಯೋಗವನ್ನು ಅನುಸರಿಸಿ ಜೀವಿಸುವುವು.

ಪಾತಾಲಾನಿ ಚ ಸರ್ವಾಣಿ ಭುವನಾನಿ ಚ ಶಾಸನಾತ್ ।
ಬ್ರಹ್ಮಾಂಡಾನಿ ಚ ವರ್ತಂತೇ ಸರ್ವಾಣ್ಯೇವ ಸ್ವಯಂಭುವಃ ॥ ೪೩ ॥

ಅತೀತಾನ್ಯಪ್ಯಸಂಖ್ಯಾನಿ ಬ್ರಹ್ಮಾಂಡಾನಿ ಮಮಾಜ್ಞಯಾ ।
ಪ್ರವೃತ್ತಾನಿ ಪದಾರ್ಥೌಘೈಃ ಸಹಿತಾನಿ ಸಮಂತತಃ ॥ ೪೪ ॥

ಬ್ರಹ್ಮಾಂಡಾನಿ ಭವಿಷ್ಯಂತಿ ಸಹ ಚಾತ್ಮಭಿರಾತ್ಮಗೈಃ ।
ಕರಿಷ್ಯಂತಿ ಸದೈವಾಜ್ಞಾಂ ಪರಸ್ಯ ಪರಮಾತ್ಮನಃ ॥ ೪೫ ॥

ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ।
ಭೂತಾದಿರಾದಿಪ್ರಕೃತಿರ್ನಿಯೋಗೇ ಮಮ ವರ್ತತೇ ॥ ೪೬ ॥

---

೪೩. ಮತ್ತು ಸಮಸ್ತ ಪಾತಾಳಲೋಕಗಳೂ ಎಲ್ಲಾ ಊರ್ಧ್ವಭಾಗದಲ್ಲಿರುವ ಲೋಕಗಳೂ ಮತ್ತು ಎಲ್ಲಾ ಬ್ರಹ್ಮಾಂಡಗಳೂ ಸರ್ವೇಶ್ವರನಾದ ಪರಮಾತ್ಮನ ಶಾಸನದಿಂದ ಒಂದೇ ಕ್ರಮದಲ್ಲಿ ನಿಂತಿರುವುವು.

೪೪. ಮತ್ತು ಹಿಂದೆ ಅನೇಕ ಪದಾರ್ಥಗಳ ಗುಂಪಿನಿಂದ ಕೂಡಿ ಕೆಲವುಕಾಲ ಪ್ರವರ್ತಿಸಿ ಕಳೆದುಹೋಗಿರುವ ಸಂಖ್ಯಾತೀತವಾದ ಅನೇಕ ಬ್ರಹ್ಮಾಂಡಗಳು ಸರ್ವ ದೇಶಗಳಲ್ಲಿಯೂ ನನ್ನ ಅಜ್ಞೆಯಿಂದಲೇ ನಿಯಮಿತವಾಗಿದ್ದುವು.

೪೫. ಮತ್ತು ಆತ್ಮನಿಗೆ ಉಪಕರಣವಾದ ಅನೇಕ ವಸ್ತುಗಳಿಂದ ಕೂಡಿ ಮುಂದೆ ಹುಟ್ಟುವ ಅನೇಕ ಬ್ರಹ್ಮಾಂಡಗಳು ಯಾವಾಗಲೂ ಸರ್ವೋತ್ತಮನಾದ ಪರಮಾತ್ಮನ ಆಜ್ಞಾವಚನವನ್ನು ಅನುಸರಿಸುತ್ತವೆ.

೪೬. ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ, ಭೂತಾದಿ ಮತ್ತು ಮೂಲ ಪ್ರಕೃತಿ ಎಂಬ ಪ್ರಪಂಚದ ಮೂಲತತ್ತ್ವಗಳು ನನ್ನ ಅಧೀನ ದಲ್ಲಿರುತ್ತವೆ.

ಯಾಶೇಷಜಗತಾಂ ಯೋನಿರ್ಮೋಹಿನೀ ಸರ್ವದೇಹಿನಾಮ್ ।
ಮಾಯಾ ವಿವರ್ತತೇ ನಿತ್ಯಂ ಸಾಪೀಶ್ವರನಿಯೋಗತಃ ॥ ೪೭ ॥

ಯೋ ವೈ ದೇಹಭೃತಾಂ ದೇವಃ ಪುರುಷಃ ಪಠ್ಯತೇ ಪರಃ ।
ಆತ್ಮಾಸೌ ವರ್ತತೇ ನಿತ್ಯಮೀಶ್ವರಸ್ಯ ನಿಯೋಗತಃ ॥ ೪೮ ॥

ವಿಧೂಯ ಮೋಹಕಲಿಲಂ ಯದಾ ಪಶ್ಯತಿ ತತ್ಪದಮ್ ।
ಸಾಪಿ ಬುದ್ಧಿರ್ಮಹೇಶಸ್ಯ ನಿಯೋಗವಶವರ್ತಿನೀ ॥ ೪೯ ॥

ಬಹುನಾತ್ರ ಕಿಮುಕ್ತೇನ ಮಮ ಶಕ್ತ್ಯಾತ್ಮಕಂ ಜಗತ್ ।
ಮಯೈವ ಪ್ರೇರ್ಯತೇ ಕೃತ್ಸ್ನಂ ಮಯ್ಯೇವ ಪ್ರಲಯಂ ವ್ರಜೇತ್ ॥

---

೪೭. ಅಶೇಷ ಜಗತ್ತಿಗೆ ಕಾರಣವೂ, ಸರ್ವಭೂತಗಳನ್ನು ಮೋಹಪಡಿಸುವುದೂ ಆದ ಮಾಯಾ ಶಕ್ತಿಯು ಈಶ್ವರನ ನಿಯೋಗವನ್ನು ಅನುಸರಿಸಿ ಆಯಾಯ ರೂಪಗಳಿಂದ ಪರಿಣಮಿಸುವುದು.

೪೮. ದೇಹಧಾರಿಗಳಾದ ಪ್ರಾಣಿಗಳಿಗೆ ಶ್ರೇಷ್ಠನಾದ ದೇವನೆಂದು ಯಾವ ಪುರುಷನು ಕರೆಯಲ್ಪಡುವನೊ ; ಅಂತಹ ಆತ್ಮನು ಈಶ್ವರನ ನಿಯೋಗಾನುಸಾರವಾಗಿ ವ್ಯವಸ್ಥಿತನಾಗಿರುವನು.

೪೯. ಮೋಹವೆಂಬ ಕಲ್ಮಷವನ್ನು ದೂರಮಾಡಿ ಯಾವ ಬುದ್ಧಿಯಿಂದ ಪರಮಾರ್ಥಪದವನ್ನು ಹೊಂದಬಹುದೊ ; ಅಂತಹ ಬುದ್ಧಿಯು ಮಹೇಶ್ವರನ ನಿಯೋಗದ ಅಧೀನದಲ್ಲಿರುವುದು.

೫೦. ಇದನ್ನು ಹೆಚ್ಚಾಗಿ ವರ್ಣಿಸಿ ಆಗುವುದೇನು. ಈ ಸಮಸ್ತ ಜಗತ್ತು ನನ್ನ ಶಕ್ತಿ ರೂಪವಾಗಿರುವುದು. ಇದೆಲ್ಲವು ನನ್ನಿಂದ ಪ್ರೇರೇಪಿಸಲ್ಪಡುತ್ತದೆ. ಮತ್ತು ನನ್ನಲ್ಲಿಯೆ ಲಯವನ್ನು ಹೊಂದುತ್ತದೆ.

ಅಹಂ ಹಿ ಭಗವಾನೀಶಃ ಸ್ವಯಂಜ್ಯೋತಿಃ ಸನಾತನಃ ।
ಪರಮಾತ್ಮಾ ಪರಂ ಬ್ರಹ್ಮ ಮತ್ತೋ ಹ್ಯನ್ಯೋ ನ ವಿದ್ಯತೇ ॥ ೫೧ ॥

ಇತ್ಯೇತತ್ಪರಮಂ ಜ್ಞಾನಂ ಯುಷ್ಮಾಕಂ ಕಥಿತಂ ಮಯಾ ।
ಜ್ಞಾತ್ವಾ ವಿಮುಚ್ಯತೇ ಜಂತುರ್ಜನ್ಮಸಂಸಾರಬಂಧನಾತ್ ॥ ೫೨ ॥

ಇತಿ ಶ್ರೀ ಕೂರ್ಮಪುರಾಣೇ ಏಕೋನಷಷ್ಟಿತಮೋಽಧ್ಯಾಯಃ

---

೫೧. ನಾನು ಸ್ವಯಂಪ್ರಕಾಶನೂ, ಸನಾತನನೂ, ಭಗವಂತನೂ, ಮಹೇಶ್ವರನೂ, ಪರಮಾತ್ಮನೂ ಮತ್ತು ಪರಬ್ರಹ್ಮರೂಪನೂ ಆಗಿರುವೆನು. ನನಗಿಂತ ವ್ಯತಿರಿಕ್ತನಾಗಿ ಮತ್ತಾವ ಆತ್ಮನೂ ಇಲ್ಲ.

೫೨. ಈರೀತಿಯಾಗಿರುವ ಪರಮತತ್ತ್ವಜ್ಞಾನವು ನನ್ನಿಂದ ನಿಮಗೆ ಉಪದೇಶಿಸಲ್ಪಟ್ಟಿದೆ. ಪ್ರಾಣಿಸಾಮಾನ್ಯವು ಈ ತತ್ತ್ವವನ್ನು ತಿಳಿದು ಜನ್ಮ-ಮರಣಗಳೆಂಬ ಸಂಸಾರ ಬಂಧನದಿಂದ ಮುಕ್ತನಾಗುವನು.

( ಕೂರ್ಮ ಪುರಾಣದಲ್ಲಿ ಐವತ್ತೊಂಭತ್ತನೆಯ ಅಧ್ಯಾಯವು ಸಮಾಪ್ತವು. )

---

ಶ್ರೀಃ

# ಕೂರ್ಮಪುರಾಣಂ



## ಷಷ್ಟಿತಮೋऽಧ್ಯಾಯಃ.

ಈಶ್ವರ ಉವಾಚ :—

ಶೃಣುಧ್ವಮೃಷಯಃ ಸರ್ವೇ ಪ್ರಭಾವಂ ಪರಮೇಷ್ಠಿನಃ ।
ಯಂ ಜ್ಞಾತ್ವಾ ಪುರುಷೋ ಮುಕ್ತೋ ನ ಸಂಸಾರೇ ಪತೇತ್ಪುನಃ ॥೧॥

ಪರಾತ್ಪರತರಂ ಬ್ರಹ್ಮ ಶಾಶ್ವತಂ ಧ್ರುವಮವ್ಯಯಮ್ ।
ನಿತ್ಯಾನಂದಂ ನಿರ್ವಿಕಲ್ಪಂ ತದ್ಧಾಮ ಪರಮಂ ಮಮ ॥ ೨ ॥

---

## ಅರವತ್ತನೆಯ ಅಧ್ಯಾಯವು.

೧. ಈಶ್ವರನು ಹೀಗೆಂದು ಉಪದೇಶಿಸಿದನು :—ಪರಮಸ್ಥಾನದಲ್ಲಿರುವ ಮಹೇಶ್ವರನ ಪ್ರಭಾವವನ್ನು ಮಹರ್ಷಿಗಳಾದ ನೀವೆಲ್ಲರು ಶ್ರವಣಮಾಡಿರಿ. ಪರಮಾತ್ಮ ಮಹಿಮೆಯನ್ನು ತಿಳಿದು ಮುಕ್ತಿಹೊಂದಿದ ಮಾನವನು ಮತ್ತೆ ಸಂಸಾರ ದಲ್ಲಿ ಬೀಳುವುದಿಲ್ಲ.

೨. ಉತ್ತಮ ವಸ್ತುಗಳಿಗಿಂತ ಉತ್ತಮವೂ, ಶಾಶ್ವತವೂ, ಸ್ಥಿರವೂ, ಅವ್ಯಯವೂ, ನಿತ್ಯಾನಂದರೂಪವೂ, ವಿಕಲ್ಪಶೂನ್ಯವೂ ಆದ ಪರಬ್ರಹ್ಮ ತತ್ವವು ನನ್ನ ಉತ್ತಮವಾದ ಆಧಾರಸ್ಥಾನವಾಗಿರುವುದು.

ಅಹಂ ಬ್ರಹ್ಮವಿದಾಂ ಬ್ರಹ್ಮಾ ಸ್ವಯಂಭೂರ್ವಿಶ್ವತೋಮುಖಃ ।
ಮಾಯಾವಿನಾಮಹಂ ದೇವಃ ಪುರಾಣೋ ಹರಿರವ್ಯಯಃ ॥ ೩ ॥

ಯೋಗಿನಾಮಸ್ಮ್ಯಹಂ ಶಂಭುಃ ಸ್ತ್ರೀಣಾಂ ದೇವೀ ಗಿರೀಂದ್ರಜಾ ।
ಆದಿತ್ಯಾನಾಮಹಂ ವಿಷ್ಣುರ್ವಸೂನಾಮಸ್ಮಿ ಪಾವಕಃ ॥ ೪ ॥

ರುದ್ರಾಣಾಂ ಶಂಕರಶ್ಚಾಹಂ ಗರುಡಃ ಪತತಾಮಹಮ್ ।
ಐರಾವತೋ ಗಜೇಂದ್ರಾಣಾಂ ರಾಮಃ ಶಸ್ತ್ರಭೃತಾಮಹಮ್ ॥ ೫ ॥

ಋಷೀಣಾಂ ಚ ವಸಿಷ್ಠೋಽಹಂ ದೇವಾನಾಂ ಚ ಶತಕ್ರತುಃ ।
ಶಿಲ್ಪಿನಾಂ ವಿಶ್ವಕರ್ಮಾಯಂ ಪ್ರಹ್ಲಾದಃ ಸುರವಿದ್ವಿಷಾಮ್ ॥ ೬ ॥

---

೩. ನಾನು ಬ್ರಹ್ಮಜ್ಞಾನಿಗಳಲ್ಲಿ ಸರ್ವತೋಮುಖನೂ ಸ್ವಯಂಭುವೂ ಆದ ಬ್ರಹ್ಮನಾಗಿರುವೆನು. ಮಾಯಾವಿಗಳಲ್ಲಿ ಪುರಾಣನೂ, ಅವ್ಯಯನೂ, ಆದ ಹರಿ ದೇವನಾಗಿರುವೆನು.

೪. ನಾನು ಯೋಗಿಗಳಿಗೆ ಶಂಕರನಾಗಿದ್ದೇನೆ. ಸ್ತ್ರೀಯರಲ್ಲಿ ಪರ್ವತರಾಜನ ಪುತ್ರಿಯಾದ ಪಾರ್ವತೀದೇವಿಯಾಗಿದ್ದೇನೆ. ಆದಿತ್ಯರಲ್ಲಿ ವಿಷ್ಣುವೆಂಬ ಆದಿತ್ಯ ನಾಗಿದ್ದೇನೆ. ಹಾಗು ವಸುಗಳಲ್ಲಿ ಪಾವಕನಾಗಿರುತ್ತೇನೆ.

೫. ನಾನು ರುದ್ರರಲ್ಲಿ ಶಂಕರನಾಗಿದ್ದೇನೆ, ಪಕ್ಷಿಗಳಲ್ಲಿ ಗರುಡನಾಗಿದ್ದೇನೆ. ಗಜೇಂದ್ರಗಳಲ್ಲಿ ಐರಾವತನಾಗಿದ್ದೇನೆ. ಮತ್ತು ಶಸ್ತ್ರಧಾರಿಗಳಲ್ಲಿ ರಾಮಚಂದ್ರ ನಾಗಿದ್ದೇನೆ.

೬. ಮಹರ್ಷಿಗಳಲ್ಲಿ ವಸಿಷ್ಠಮುನಿಯು ಆಗಿದ್ದೇನೆ. ದೇವತೆಗಳಲ್ಲಿ ದೇವರಾಜ ನಾದ ಇಂದ್ರನಾಗಿದ್ದೇನೆ. ಶಿಲ್ಪಿಗಳಲ್ಲಿ ವಿಶ್ವಕರ್ಮನಾಗಿದ್ದೇನೆ. ಹಾಗು ಸುರದ್ವೇಷಿ ಗಳಾದ ಅಸುರರಲ್ಲಿ ಪ್ರಹ್ಲಾದನಾಗಿದ್ದೇನೆ.

ಮುನೀನಾಮಪ್ಯಹಂ ವ್ಯಾಸೋ ಗಣಾನಾಂ ಚ ವಿನಾಯಕಃ ।
ವೀರಾಣಾಂ ವೀರಭದ್ರೋऽಹಂ ಸಿದ್ಧಾನಾಂ ಕಪಿಲೋ ಮುನಿಃ ॥ ೭ ॥

ಪರ್ವತಾನಾಮಹಂ ಮೇರುರ್ನಕ್ಷತ್ರಾಣಾಂ ಚ ಚಂದ್ರಮಾಃ ।
ವಜ್ರಂ ಪ್ರಹರಣಾನಾಂ ಚ ವ್ರತಾನಾಂ ಸತ್ಯಮಸ್ಮ್ಯಹಮ್ ॥ ೮ ॥

ಅನಂತೋ ಭೋಗಿನಾಂ ದೇವಃ ಸೇನಾನೀನಾಂ ಚ ಪಾವಕಿಃ ।
ಆಶ್ರಮಾಣಾಂ ಗೃಹಸ್ಥೋऽಹಮೀಶ್ವರಾಣಾಂ ಮಹೇಶ್ವರಃ ॥ ೯ ॥

ಮಹಾಕಲ್ಪಶ್ಚ ಕಲ್ಪಾನಾಂ ಯುಗಾನಾಂ ಕೃತಮಸ್ಮ್ಯಹಮ್ ।
ಕುಬೇರಃ ಸರ್ವಯಕ್ಷಾಣಾಂ ತೃಣಾನಾಂ ಚೈವ ವೀರುಧಃ ॥ ೧೦ ॥

---

೭. ನಾನು ಮುನಿಗಳಲ್ಲಿ ವ್ಯಾಸಮುನಿಯಾಗಿದ್ದೇನೆ. ಗಣಗಳಲ್ಲಿ ವಿನಾಯಕ ಗಣರೂಪನಾಗಿದ್ದೇನೆ. ವೀರರಲ್ಲಿ ವೀರಭದ್ರನಾಗಿದ್ದೇನೆ. ಮತ್ತು ಸಿದ್ಧಜನರಲ್ಲಿ ಕಪಿಲಮುನಿಯು ಆಗಿದ್ದೇನೆ.

೮. ಪರ್ವತಗಳಲ್ಲಿ ಮೇರುಪರ್ವತವಾಗಿದ್ದೇನೆ. ನಕ್ಷತ್ರ ಶ್ರೇಣಿಯಲ್ಲಿ ಚಂದ್ರನಾಗಿದ್ದೇನೆ. ಆಯುಧವರ್ಗದಲ್ಲಿ ವಜ್ರಾಯುಧವಾಗಿದ್ದೇನೆ. ಮತ್ತು ನಿಯಮಗಳಲ್ಲಿ ಸತ್ಯಸ್ವರೂಪನಾಗಿದ್ದೇನೆ.

೯. ನಾನು ಸರ್ಪಗಳಲ್ಲಿ ಅನಂತದೇವನಾಗಿದ್ದೇನೆ. ಸೇನಾನಾಯಕರಲ್ಲಿ ಕುಮಾರ ಸ್ವಾಮಿಯಾಗಿದ್ದೇನೆ. ಆಶ್ರಮಗಳಲ್ಲಿ ಗೃಹಸ್ಥಾಶ್ರಮಿಯಾಗಿದ್ದೇನೆ. ಮತ್ತು ಈಶ್ವರ ಪುರುಷರಲ್ಲಿ ಮಹೇಶ್ವರನಾಗಿದ್ದೇನೆ.

೧೦. ನಾನು ಕಲ್ಪಗಳಲ್ಲಿ ಮಹಾಕಲ್ಪಸ್ವರೂಪನಾಗಿದ್ದೇನೆ. ಯುಗಗಳಲ್ಲಿ ಕೃತಯುಗಸ್ವರೂಪನಾಗಿದ್ದೇನೆ. ಸಮಸ್ತಯಕ್ಷರಲ್ಲಿ ಕುಬೇರನಾಗಿದ್ದೇನೆ. ಹಾಗು ಹುಲ್ಲು ಜಾತಿಯಲ್ಲಿ ಲತಾಸ್ವರೂಪನಾಗಿದ್ದೇನೆ.

ಪ್ರಜಾಪತೀನಾಂ ದಕ್ಷೋಽಹಂ ನಿರ್ಋತಿಃ ಸರ್ವರಕ್ಷಸಾಮ್ ।
ವಾಯುರ್ಬಲವತಾಮಸ್ಮಿ ದ್ವೀಪಾನಾಂ ಪುಷ್ಕರೋಽಸ್ಮ್ಯಹಮ್॥ ೧೧ ॥

ಮೃಗೇಂದ್ರಾಣಾಂ ಚ ಸಿಹ್ಮೋಽಹಂ ಯಂತ್ರಾಣಾಂ ಧನುರೇವ ಚ ।
ವೇದಾನಾಂ ಸಾಮವೇದೋಽಹಂ ಯಜುಷಾಂ ಶತರುದ್ರಿಯಮ್ ॥೧೨॥

ಸಾವಿತ್ರೀ ಸರ್ವಜಪ್ಯಾನಾಂ ಗುಹ್ಯಾನಾಂ ಪ್ರಣವೋಽಸ್ಮ್ಯಹಮ್ ।
ಸೂಕ್ತಾನಾಂ ಪೌರುಷಂ ಸೂಕ್ತಂ ಜ್ಯೇಷ್ಠಸಾಮ ಚ ಸಾಮಸು ॥ ೧೩ ॥

ಸರ್ವವೇದಾರ್ಥವಿದುಷಾಂ ಮನುಃ ಸ್ವಾಯಂಭುವೋಽಸ್ಮ್ಯಹಮ್ ।
ಬ್ರಹ್ಮಾವರ್ತಸ್ತು ದೇಶಾನಾಂ ಕ್ಷೇತ್ರಾಣಾಮವಿಮುಕ್ತಕಮ್ ॥ ೧೪ ॥

---

೧೧. ನಾನು ಪ್ರಜಾಪ್ರತಿಗಳಲ್ಲಿ ದಕ್ಷಪ್ರಜಾಪತಿಯಾಗಿದ್ದೇನೆ. ಸಮಸ್ತ ರಾಕ್ಷಸರಲ್ಲಿ ನಿರ್ಋತಿಯಾಗಿದ್ದೇನೆ. ಬಲವಂತರಾದ ವ್ಯಕ್ತಿಗಳಲ್ಲಿ ವಾಯುದೇವನಾಗಿದ್ದೇನೆ. ಹಾಗು ದ್ವೀಪಗಳಲ್ಲಿ ಪುಷ್ಕರದ್ವೀಪವಾಗಿದ್ದೇನೆ.

೧೨. ನಾನು ಮೃಗರಾಜರಲ್ಲಿ ಸಿಹ್ಮನಾಗಿದ್ದೇನೆ. ಯಂತ್ರವಸ್ತುಗಳಲ್ಲಿ ಬಿಲ್ಲಿನರೂಪನಾಗಿದ್ದೇನೆ. ವೇದಗಳಲ್ಲಿ ಸಾಮವೇದರೂಪನಾಗಿದ್ದೇನೆ. ಮತ್ತು ಯಜುರ್ಮಂತ್ರಗಳಲ್ಲಿ ಶತರುದ್ರಿಯರೂಪನಾಗಿದ್ದೇನೆ.

೧೩. ಜಪಾರ್ಹವಾದ ಮಂತ್ರಗಳಲ್ಲಿ ಸಾವಿತ್ರೀ ಮಂತ್ರವಾಗಿದ್ದೇನೆ. ರಹಸ್ಯ ಮಂತ್ರಗಳಲ್ಲಿ ಓಂಕಾರವಾಗಿದ್ದೇನೆ. ಸೂಕ್ತಗಳಲ್ಲಿ ಪುರುಷಸೂಕ್ತರೂಪವಾಗಿದ್ದೇನೆ. ಮತ್ತು ಸಾಮಮಂತ್ರಗಳಲ್ಲಿ ಜ್ಯೇಷ್ಠಸಾಮರೂಪನಾಗಿದ್ದೇನೆ.

೧೪. ನಾನು ಸಮಸ್ತವೇದಾರ್ಥ ಜ್ಞಾನಿಗಳಲ್ಲಿ ಸ್ವಾಯಂಭುವನೆಂಬ ಮನುರಾಜನಾಗಿದ್ದೇನೆ. ಸಮಸ್ತ ದೇಶಗಳಲ್ಲಿ ಬ್ರಹ್ಮಾವರ್ತದೇಶರೂಪನಾಗಿದ್ದೇನೆ ಮತ್ತು ಕ್ಷೇತ್ರಗಳಲ್ಲಿ ಅವಿಮುಕ್ತ ಕ್ಷೇತ್ರಸ್ವರೂಪನಾಗಿದ್ದೇನೆ.

ವಿದ್ಯಾನಾಮಾತ್ಮವಿದ್ಯಾಹಂ ಜ್ಞಾನಾನಾಮೈಶ್ವರಂ ಪರಮ್ ।
ಭೂತಾನಾಮಸ್ಮ್ಯಹಂ ವ್ಯೋಮ ತತ್ತ್ವಾನಾಂ ಮೃತ್ಯುರೇವ ಚ ॥ ೧೫ ॥

ಪಾಶಾನಾಮಸ್ಮ್ಯಹಂ ಮಾಯಾ ಕಾಲಃ ಕಲಯತಾಮಹಮ್ ।
ಗತೀನಾಂ ಮುಕ್ತಿರೇವಾಹಂ ಪರೇಷಾಂ ಪರಮೇಶ್ವರಃ ॥ ೧೬ ॥

ಯಚ್ಚಾನ್ಯದಪಿ ಲೋಕೇಽಸ್ಮಿನ್ ಸತ್ತ್ವಂ ತೇಜೋಬಲಾಧಿಕಮ್ ।
ತತ್ಸರ್ವಂ ಪ್ರತಿಜಾನೀಧ್ವಂ ಮಮ ತೇಜೋವಿಜೃಂಭಿತಮ್ ॥ ೧೭ ॥

ಆತ್ಮಾನಃ ಪಶವಃ ಪ್ರೋಕ್ತಾಃ ಸರ್ವೇ ಸಂಸಾರವರ್ತಿನಃ ।
ತೇಷಾಂ ಪತಿರಹಂ ದೇವಃ ಸ್ಮೃತಃ ಪಶುಪತಿರ್ಬುಧೈಃ ॥ ೧೮ ॥

---

೧೫. ನಾನು ವಿದ್ಯೆಗಳಲ್ಲಿ ಆತ್ಮವಿದ್ಯಾಸ್ವರೂಪನಾಗಿದ್ದೇನೆ. ಜ್ಞಾನಗಳಲ್ಲಿ ಉತ್ತಮವಾದ ಈಶ್ವರಜ್ಞಾನಸ್ವರೂಪನಾಗಿದ್ದೇನೆ. ಪಂಚಭೂತಗಳಲ್ಲಿ ಆಕಾಶರೂಪನಾಗಿದ್ದೇನೆ. ಮತ್ತು ತತ್ತ್ವಗಳಲ್ಲಿ ಮೃತ್ಯುಸ್ವರೂಪನಾಗಿದ್ದೇನೆ.

೧೬. ನಾನು ಪಾಶಗಳಲ್ಲಿ ಮಾಯಾಪಾಶವಾಗಿದ್ದೇನೆ. ವಸ್ತುಗಳನ್ನು ಜೀರ್ಣ ಮಾಡುವ ವಸ್ತುಗಳಲ್ಲಿ ಕಾಲಾತ್ಮನಾಗಿದ್ದೇನೆ. ಪ್ರಾಪ್ಯವಾದ ಸದ್ಗತಿಗಳಲ್ಲಿ ಮುಕ್ತಿಸ್ವರೂಪನಾಗಿದ್ದೇನೆ. ಮತ್ತು ನಿಯಾಮಕ ಪುರುಷರಲ್ಲಿ ಪರಮೇಶ್ವರನಾಗಿದ್ದೇನೆ.

೧೭. ಮತ್ತು ಈ ಲೋಕದಲ್ಲಿ ತೇಜಸ್ಸು— ಬಲಗಳಲ್ಲಿ ಉತ್ಕೃಷ್ಟವಾದ ಇನ್ನಾವ ವಸ್ತುವಿರುವುದೋ; ಅದೆಲ್ಲವೂ ನನ್ನ ತೇಜೋವಿಶೇಷದಿಂದ ಉದಾತ್ತವಾಗಿ ಗಣ್ಯವಾಗಿದೆಯೆಂದು ಪ್ರತಿಜ್ಞೆಮಾಡಿ ಹೇಳಿರಿ.

೧೮. ಸಂಸಾರ ಚಕ್ರದಲ್ಲಿ ಸುತ್ತುವ ಸಮಸ್ತ ಆತ್ಮರು ಪಶುಗಳೆಂದು ಹೇಳಲ್ಪಟ್ಟಿರುವರು. ಆ ಪಶುಗಳಿಗೆ ನಾನು ಸ್ವಾಮಿಯಾದ ದೇವನಾಗಿರುವೆನು. ಆದ್ದರಿಂದ ನಾನು ಬುಧಜನರಿಂದ ಪಶುಪತಿಯೆಂದು ಸ್ಮರಿಸಲ್ಪಟ್ಟಿರುವೆನು.

ಮಾಯಾಪಾಶೇನ ಬಧ್ನಾಮಿ ಪಶೂನೇತಾನ್ ಸ್ವಲೀಲಯಾ ।
ಮಾಮೇವ ಮೋಚಕಂ ಪ್ರಾಹುಃ ಪಶೂನಾಂ ವೇದವಾದಿನಃ ॥ ೧೯ ॥

ಮಾಯಾಪಾಶೇನ ಬದ್ಧಾನಾಂ ಮೋಚಕೋsನ್ಯೋ ನ ವಿದ್ಯತೇ ।
ಮಾಮೃತೇ ಪರಮಾತ್ಮಾನಂ ಭೂತಾಧಿಪತಿಮವ್ಯಯಮ್ ॥ ೨೦ ॥

ಚತುರ್ವಿಂಶತಿತತ್ತ್ವಾನಿ ಮಾಯಾ ಕರ್ಮ ಗುಣಾ ಇತಿ ।
ಏತೇ ಪಾಶಾಃ ಪಶುಪತೇಃ ಕ್ಲೇಶಾಶ್ಚ ಪಶುಬಂಧನಾಃ ॥ ೨೧ ॥

ಮನೋ ಬುದ್ಧಿರಹಂಕಾರಃ ಖಾನಿಲಾಗ್ನಿಜಲಾನಿ ಭೂಃ ।
ಏತಾಃ ಪ್ರಕೃತಯಸ್ತ್ವಷ್ಟೌ ವಿಕಾರಾಶ್ಚ ತಥಾ ಪರೇ ॥ ೨೨ ॥

---

೧೯. ನಾನು ಇಂತಹ ಪಶುಗಳನ್ನು ನನ್ನ ಲೀಲೆಯಿಂದ ಮಾಯೆಯೆಂಬ ಪಾಶದಿಂದ ಬಂಧಿಸುವೆನು. ವೇದಾರ್ಥಜ್ಞರು ಮಾಯಾಪಾಶಬದ್ಧರಾದ ಪಶುಗಳಿಗೆ ನಾನೇ ಮೋಚಕನಾಗಿರುವೆನೆಂದು ಹೇಳುವರು.

೨೦. ಮಾಯೆಯೆಂಬ ಪಾಶದಿಂದ ಬದ್ಧರಾಗಿರುವ ಪಶುಗಳಿಗೆ ಸರ್ವಭೂತಾಧಿಪತಿಯೂ, ವ್ಯಯರಹಿತನೂ ಮತ್ತು ಪರಮಾತ್ಮನೂ ಆದ ನನ್ನನ್ನು ಬಿಟ್ಟು ಮತ್ತಾರೂ ಮೋಚಕನು ಇರುವುದಿಲ್ಲ.

೨೧. ಇಪ್ಪತ್ತನಾಲ್ಕು ಸಂಖ್ಯೆಯ ತತ್ತ್ವಗಳು, ಮಾಯೆ, ಪುಣ್ಯ-ಪಾಪಕರ್ಮ, ಸತ್ತ್ವಾದಿಗುಣಗಳು ಮತ್ತು ನಾನಾವಿಧ ಕ್ಲೇಶಗಳು–ಎಂಬುವು ಪಶುಗಳನ್ನು ಬಂಧಿಸುವ ಪಶುಪತಿಗೆ ಬಂಧನಸಾಧನಗಳಾದ ಪಾಶಗಳಾಗಿರುವುವು.

೨೨. ಪ್ರಪಂಚಾಂತರ್ಗತ ತತ್ತ್ವಗಳಲ್ಲಿ ಮನಸ್ಸು, ಬುದ್ಧಿ, ಅಹಂಕಾರ, ಆಕಾಶ, ವಾಯು, ಅಗ್ನಿ, ಜಲ, ಮತ್ತು ಪೃಥಿವಿ ಎಂಬ ಎಂಟು ತತ್ತ್ವಗಳು ಪ್ರಕೃತಿ ರೂಪಗಳಾಗಿಯೂ ಮಿಕ್ಕ ಸಮಸ್ತ ಭಾವಗಳು ವಿಕಾರರೂಪವಾಗಿಯೂ ಇವೆ.

ಶ್ರೋತ್ರಂ ತ್ವಕ್ಚಕ್ಷುಷೀ ಜಿಹ್ವಾ ಘ್ರಾಣಂ ಚೈವ ತು ಪಂಚಮಮ್ ।
ಪಾಯೂಪಸ್ಥಂ ಕರೌ ಪಾದೌ ವಾಕ್ ಚೈವ ದಶಮೀ ಮತಾ ॥ ೨೩ ॥

ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಸ್ತಥೈವ ಚ ।
ತ್ರಯೋವಿಂಶತಿರೇತಾನಿ ತತ್ತ್ವಾನಿ ಪ್ರಾಕೃತಾನಿ ಚ ॥ ೨೪ ॥

ಚತುರ್ವಿಂಶಕಮವ್ಯಕ್ತಂ ಪ್ರಧಾನಂ ಗುಣಲಕ್ಷಣಮ್ ।
ಅನಾದಿಮಧ್ಯನಿಧನಂ ಕಾರಣಂ ಜಗತಃ ಪರಮ್ ॥ ೨೫ ॥

ಸತ್ತ್ವಂ ರಜಸ್ತಮಶ್ಚೇತಿ ಗುಣತ್ರಯಮುದಾಹೃತಮ್ ।
ಸಾಮ್ಯಾವಸ್ಥಿತಿಮೇತೇಷಾಮವ್ಯಕ್ತಂ ಪ್ರಕೃತಿಂ ವಿದುಃ ॥ ೨೬ ॥

---

೨೩. ಹಾಗು ಶ್ರೋತ್ರ, ತ್ವಕ್, ಚಕ್ಷುಸ್ಸು, ಜಿಹ್ವಾ, ಘ್ರಾಣ, ಪಾಯು, ಉಪಸ್ಥ, ಹಸ್ತ, ಪಾದ, ಮತ್ತು ವಾಕ್-ಎಂಬುವು ಕ್ರಮವಾಗಿ ಪಂಚಜ್ಞಾನೇಂದ್ರಿಯ ಗಳೂ, ಪಂಚಕರ್ಮೇಂದ್ರಿಯಗಳೂ ಆಗಿವೆ.

೨೪. ಹಾಗು ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳೆಂಬ ಐದು ವಿಷಯಗಳು ಸೇರಿ ಪ್ರಕೃತಿಯಿಂದ ಹುಟ್ಟಿದ ಇಪ್ಪತ್ತಮೂರು ತತ್ತ್ವಗಳಾಗಿವೆ.

೨೫. ಅವ್ಯಕ್ತವೂ, ಸತ್ತ್ವ ರಜಸ್ತಮೋಗುಣ ಸಂಘಾತವೂ, ಪ್ರಧಾನ ಸಂಜ್ಞಾಂಕಿತವೂ ಆದಿ-ಮಧ್ಯ-ಅಂತಗಳಿಂದ ಶೂನ್ಯವೂ ಮತ್ತು ಜಗತ್ತಿಗೆ ಮೂಲ ಕಾರಣವೂ ಆದ ಮೂಲಪ್ರಕೃತಿಯು ಇಪ್ಪತ್ತನಾಲ್ಕನೆಯ ತತ್ತ್ವವಾಗಿರುವುದು.

೨೬. ಸತ್ತ್ವ, ರಜಸ್ಸು, ತಮಸ್ಸು ಎಂಬುವು ಮೂರು ಗುಣಗಳೆಂದು ಉದಾಹ ರಿಸಲ್ಪಟ್ಟಿವೆ. ಈ ಗುಣತ್ರಯದ ಸಾಮ್ಯಾವಸ್ಥೆಯನ್ನು ಅವ್ಯಕ್ತವಾದ ಮೂಲಪ್ರಕೃತಿ ಯೆಂದು ಪ್ರಾಜ್ಞರು ತಿಳಿದಿರುವರು.

ಸತ್ತ್ವಂ ಜ್ಞಾನಂ ತಮೋ ಜ್ಞಾನಂ ರಾಜಸಂ ಸಮುದಾಹೃತಮ್ ।
ಗುಣಾನಾಂ ಬುದ್ಧಿವೈಷಮ್ಯಾದ್ವೈಷಮ್ಯಂ ಕವಯೋ ವಿದುಃ ॥ ೨೭ ॥

ಧರ್ಮಾಧರ್ಮಾವಿತಿ ಪ್ರೋಕ್ತೌ ಪಾಶೌ ದ್ವೌ ಕರ್ಮಸಂಜ್ಞಿತೌ ।
ಮಯ್ಯರ್ಪಿತಾನಿ ಕರ್ಮಾಣಿ ನ ಬಂಧಾಯ ವಿಮುಕ್ತಯೇ ॥ ೨೮ ॥

ಅವಿದ್ಯಾಮಸ್ಮಿತಾಂ ರಾಗಂ ದ್ವೇಷಂ ಚಾಭಿನಿವೇಶನಮ್ ।
ಕ್ಲೇಶಾಖ್ಯಾಂಸ್ತಾನ್ ಸ್ವಯಂ ಪ್ರಾಹ ಪಾಶಾನಾತ್ಮನಿ ಬಂಧನಾನ್॥೨೯॥

ಏತೇಷಾಮೇವ ಪಾಶಾನಾಂ ಮಾಯಾ ಕಾರಣಮುಚ್ಯತೇ ।
ಮೂಲಪ್ರಕೃತಿರವ್ಯಕ್ತಾ ಸಾ ಶಕ್ತಿರ್ಮಯಿ ತಿಷ್ಠತಿ ॥ ೩೦ ॥

---

೨೭. ಈ ಗುಣಗಳ ಪರಿಣಾಮವಾದ ಬುದ್ಧಿಯ ವೈಷಮ್ಯದಿಂದ ಜ್ಞಾನಗಳಲ್ಲಿ ಸಾತ್ವಿಕಜ್ಞಾನ, ರಾಜಸಜ್ಞಾನ ಮತ್ತು ತಾಮಸಜ್ಞಾನಗಳೆಂದು ವಿಷಮವಾದ ಜ್ಞಾನಗಳು ಹುಟ್ಟುವುವೆಂದು ಪ್ರಾಜ್ಞರು ಅರಿತಿರುವರು.

೨೮. ಧರ್ಮ-ಅಧರ್ಮಗಳೆಂಬುವು ಕರ್ಮ ಎಂಬ ಸಂಜ್ಞಾಂಕಿತಗಳಾದ ಪಾಶರೂಪವಾಗಿವೆ. ಆದರೆ ನನ್ನಲ್ಲಿ ಅರ್ಪಿಸಲ್ಪಟ್ಟ ಕರ್ಮಗಳು ಬಂಧಕವಾಗುವುದಿಲ್ಲ. ಅಂತಹ ನಿಷ್ಕಾಮ ಕರ್ಮಗಳು ಮುಕ್ತಿಸಾಧಕಗಳಾಗುವುವು.

೨೯. ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ, ಮತ್ತು ಅಭಿನಿವೇಶಗಳೆಂಬ ಐದು ವೃತ್ತಿಗಳನ್ನು ಮಹೇಶ್ವರನು ಆತ್ಮನಿಮಿತ್ತದಿಂದ ಸಂಭವಿಸುವ, ಕ್ಲೇಶಗಳೆಂಬ ಹೆಸರುಳ್ಳ ಪಾಶಗಳೆಂದು ಹೇಳುತ್ತಿರುವನು.

೩೦. ಪಂಚಕ್ಲೇಶಗಳೆಂಬ ಈ ಪಾಶಗಳಿಗೆ ಮಾಯೆಯು ಕಾರಣವೆಂದು ಹೇಳಲ್ಪಡುತ್ತದೆ. ಅವ್ಯಾಕೃತವೂ, ಮೂಲಪ್ರಕೃತಿರೂಪವೂ ಆದ ಆ ಮಾಯೆಯು ಶಕ್ತಿರೂಪವಾಗಿ ನನ್ನಲ್ಲಿರುವುದು.

ಸ ಏವ ಮೂಲಪ್ರಕೃತಿಃ ಪ್ರಧಾನಂ ಪುರುಷೋಽಪಿ ಚ ।
ವಿಕಾರಾ ಮಹದಾದೀನಿ ದೇವದೇವಃ ಸನಾತನಃ ॥ ೩೧ ॥

ಸ ಏವ ಬಂಧಃ ಸ ಚ ಬಂಧಕರ್ತಾ ।
ಸ ಏವ ಪಾಶಃ ಪಶುಭೃತ್ ಸ ಏವ ।
ಸ ವೇದ ಸರ್ವಂ ನ ಚ ತಸ್ಯ ವೇತ್ತಾ ।
ತಮಾಹುರಾದ್ಯಂ ಪುರುಷಂ ಪುರಾಣಮ್ ॥ ೩೨ ॥

ಇತಿ ಶ್ರೀ ಕೂರ್ಮಪುರಾಣೇ ಷಷ್ಟಿತಮೋಽಧ್ಯಾಯಃ.

---

೩೧. ವಸ್ತು ದೃಷ್ಟಿಯಲ್ಲಿ ದೇವೋತ್ತಮನೂ, ಅನಾದಿಯೂ ಆದ ಮಹೇಶ್ವರನು ಮೂಲಪ್ರಕೃತಿ-ಪ್ರಧಾನ-ಪುರುಷ ಮತ್ತು ಮಹತ್ತತ್ತ್ವ ಮೊದಲಾದ ಸರ್ವ ವಿಕಾರಗಳೆಂಬ ವಿವಿಧರೂಪಗಳಿಂದ ತೋರುವನು.

೩೨. ಮಹೇಶ್ವರನು ಬಂಧರೂಪನು, ಅವನೇ ಬಂಧಕರ್ತನು, ಅವನೇ ಪಾಶ ಸ್ವರೂಪನು, ಅವನೇ ಪಶುಪತಿಯು, ಆ ಮಹೇಶ್ವರನು ಸರ್ವವಸ್ತುಗಳನ್ನು ತಿಳಿದಿರುವನು. ಪರಮಾತ್ಮನನ್ನು ತಿಳಿದವನು ಯಾರೂ ಇಲ್ಲ. ಪರಮಾತ್ಮನು ಸರ್ವೋತ್ತಮನೂ, ಪುರಾಣಪುರುಷನೂ ಅಗಿರುವನೆಂದು ಪ್ರಾಜ್ಞರು ಹೇಳುವರು.

( ಕೂರ್ಮ ಪುರಾಣದಲ್ಲಿ ಅರವತ್ತನೆಯ ಅಧ್ಯಾಯವು ಸಮಾಪ್ತವು. )



ಶ್ರೀಃ

# ಕೂರ್ಮಪುರಾಣಂ

---

## ಏಕಷಷ್ಟಿತಮೋಽಧ್ಯಾಯಃ.

ಈಶ್ವರ ಉವಾಚ :—

ಅನ್ಯದ್ಗುಹ್ಯತಮಂ ಜ್ಞಾನಂ ವಕ್ಷ್ಯೇ ಬ್ರಾಹ್ಮಣಪುಂಗವಾಃ ।
ಯೇನಾಸೌ ತರತೇ ಜಂತುರ್ಘೋರಂ ಸಂಸಾರಸಾಗರಮ್ ॥ ೧ ॥

ಅಹಂ ಬ್ರಹ್ಮಮಯಃ ಶಾಂತಃ ಶಾಶ್ವತೋ ನಿರ್ಮಲೋಽವ್ಯಯಃ ।
ಏಕಾಕೀ ಭಗವಾನುಕ್ತಃ ಕೇವಲಃ ಪರಮೇಶ್ವರಃ ॥ ೨ ॥

---

## ಅರವತ್ತೊಂದನೆಯ ಅಧ್ಯಾಯವು.

೧. ಬ್ರಾಹ್ಮಣಶ್ರೇಷ್ಠರೆ ! ಮತ್ತೊಂದು ಅತಿರಹಸ್ಯವಾದ ಜ್ಞಾನಯೋಗವನ್ನು ಉಪದೇಶಿಸುತ್ತೇನೆ. ಮಾನವನು ಈ ಜ್ಞಾನದಿಂದ ಘೋರವಾದ ಸಂಸಾರ ಸಮುದ್ರವನ್ನು ದಾಟುವನು.

೨. ನಾನು ಬ್ರಹ್ಮಮಯನೂ, ನಿರ್ವಿಕಾರನೂ, ಶಾಶ್ವತನೂ, ನಿರ್ಮಲನೂ, ವ್ಯಯರಹಿತನೂ, ಏಕಾಕಿಯೂ, ಷಡ್ಗುಣೈಶ್ವರ್ಯಸಂಪನ್ನನೂ, ಅದ್ವಿತೀಯನೂ ಆದ ಪರಮೇಶ್ವರನೆಂದು ಹೇಳಲ್ಪಟ್ಟಿರುವನು.

ಮಮ ಯೋನಿರ್ಮಹದ್ಬ್ರಹ್ಮ ತತ್ರ ಗರ್ಭಂ ದಧಾಮ್ಯಹಮ್ ।
ಮೂಲಮಾಯಾಭಿಧಾನಂ ತಂ ತತೋ ಜಾತಮಿದಂ ಜಗತ್ ॥ ೩ ॥

ಪ್ರಧಾನಂ ಪುರುಷೋ ಹ್ಯಾತ್ಮಾ ಮಹದ್ಭೂತಾದಿರೇವ ಚ ।
ತನ್ಮಾತ್ರಾಣಿ ಮನೋ ಭೂತಾನೀಂದ್ರಿಯಾಣಿ ಚ ಜಜ್ಞಿರೇ ॥ ೪ ॥

ತತೋಽಂಡಮಭವದ್ಧೈಮಮರ್ಕಕೋಟಿಸಮಪ್ರಭಮ್ ।
ತಸ್ಮಿನ್ ಜಜ್ಞೇ ಮಹಾಬ್ರಹ್ಮಾ ಮಚ್ಛಕ್ತ್ಯಾ ಚೋಪಬೃಂಹಿತಃ ॥ ೫ ॥

ಯೇ ಚಾನ್ಯೇ ಬಹವೋ ಜೀವಾಸ್ತನ್ಮಯಾಃ ಸರ್ವ ಏವ ತೇ ।
ನ ಮಾಂ ಪಶ್ಯಂತಿ ಪಿತರಂ ಮಾಯಯಾ ಮಮ ಮೋಹಿತಾಃ ॥ ೬ ॥

---

೩. ಮಹಾಪರಿಮಾಣವೂ, ವ್ಯಾಪಕವೂ ಆದ ಮೂಲ, ಮಾಯಾ ಎಂಬ ಸಂಜ್ಞಾಂಕಿತವಾದ ತತ್ತ್ವವು ನನಗೆ ಯೋನಿರೂಪವಾಗಿರುವುದು. ಅದರಲ್ಲಿ ಸೃಷ್ಟಿ ವಿಷಯದ ಅನುಸಂಧಾನವೆಂಬ ಗರ್ಭವನ್ನು ಧರಿಸುವೆನು. ಆ ಗರ್ಭದಿಂದ ಈ ಜಗತ್ತು ಜನಿಸಿರುವುದು.

೪. ಈ ರೀತಿಯಾದ ಸೃಷ್ಟಿರಚನೆಯಿಂದ ಪ್ರಧಾನ ಪುರುಷ, ಆತ್ಮಾ, ಮಹತ್, ಭೂತಾದಿ, ತನ್ಮಾತ್ರಗಳು, ಭೂತಗಳು, ಮನಸ್ಸು, ಇಂದ್ರಿಯಗಳೆಂಬ ಪ್ರಕೃತಿ ವಿಕೃತಿ ರೂಪವಾದ ಭಾವಗಳು ಆವಿರ್ಭವಿಸಿದುವು.

೫. ತರುವಾಯ ಕೋಟಿ ಸಂಖ್ಯೆಯ ಸೂರ್ಯಬಿಂಬಗಳಂತೆ ಪ್ರಭಾಮಯವಾದ, ಸುವರ್ಣಮಯವಾದ ಒಂದು ಅಂಡವು ಜನಿಸಿತು. ಆ ಅಂಡದಲ್ಲಿ ನನ್ನ ಶಕ್ತಿಯಿಂದ ಪುಷ್ಟನಾಗಿರುವ ಮಹಾಬ್ರಹ್ಮನು ಜನ್ಮವೆತ್ತಿದನು.

೬. ಬ್ರಹ್ಮದೇವನಿಗೆ ವ್ಯತಿರಿಕ್ತರಾಗಿರುವ ಜೀವವರ್ಗವೆಲ್ಲವೂ ಆದಿ ಸೃಷ್ಟನಾದ ಬ್ರಹ್ಮಾಂಶರೇ ಆಗಿರುವರು. ನನ್ನ ಮಾಯೆಯಿಂದ ಮೋಹಿತರಾದ ಜೀವರು ಜನಕನಾದ ನನ್ನನ್ನು ಕಾಣದೇ ಇರುವರು.

ಯಾಸು ಯೋನಿಷು ತಾಃ ಸರ್ವಾಃ ಸಂಭವಂತೀಹ ಮೂರ್ತಯಃ ।
ತಾಂ ಮಾತರಂ ಪರಾಂ ಯೋನಿಂ ಮಾಮೇವ ಪಿತರಂ ವಿದುಃ ॥ ೭ ॥

ಯೋ ಮಾಮೇವಂ ನಿಜಾನಾತಿ ಬೀಜಿನಂ ಪಿತರಂ ಪ್ರಭುಮ್ ।
ಸ ವೀರಃ ಸರ್ವಲೋಕೇಷು ನ ಮೋಹಮಧಿಗಚ್ಛತಿ ॥ ೮ ॥

ಈಶಾನಂ ಸರ್ವವಿದ್ಯಾನಾಂ ಭೂತಾನಾಂ ಪರಮೇಶ್ವರಃ ।
ಓಂಕಾರಮೂರ್ತಿರ್ಭಗವಾನಹಂ ಬ್ರಹ್ಮಾ ಪ್ರಜಾಪತಿಃ ॥ ೯ ॥

ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಮ್ ।
ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ ॥ ೧೦ ॥

---

೭. ಹುಟ್ಟುವ ಸಮಸ್ತ ಮೂರ್ತಿಗಳು ಯಾವ ಯೋನಿಯಲ್ಲಿ ಜನಿಸುತ್ತವೆಯೊ; ಆ ಯೋನಿಯನ್ನು ಉತ್ತಮಳಾದ ಜನನಿ ಎಂದೂ ನನ್ನನ್ನು ಜನಕನೆಂದೂ ಪ್ರಾಜ್ಞರು ತಿಳಿದಿರುತ್ತಾರೆ.

೮. ಈರೀತಿಯಾಗಿ ನನ್ನನ್ನು ಬೀಜಾವಾಪ ಸಮರ್ಥನಾದ ಜನಕನನ್ನಾಗಿ ಯಾವ ಮಾನವನು ಅರಿಯುವನೊ ; ಅವನು ಸಮಸ್ತ ಲೋಕಗಳಲ್ಲಿ ವೀರೋತ್ತಮನೆನಿಸಿಕೊಂಡು ಮೋಹವಶನಾಗುವುದಿಲ್ಲ.

೯. ಸಮಸ್ತ ವಿದ್ಯೆಗಳಿಗೆ ಈಶ್ವರನೂ, ಸರ್ವಭೂತಗಳಿಗೆ ಪರಮನಿಯಾಮಕನೂ, ಭಗವಂತನೂ, ಓಂಕಾರರೂಪವಾದ ವಿಗ್ರಹವನ್ನು ಧರಿಸಿದವನೂ, ಪ್ರಜಾಪಾಲಕನೂ ಮತ್ತು ಬ್ರಹ್ಮದೇವಸ್ವರೂಪನೂ ನಾನೇ ಆಗಿದ್ದೇನೆ.

೧೦. ನಾನು ಸಮಸ್ತ ಭೂತಗಳಲ್ಲಿ ಸಾಮ್ಯರೂಪದಿಂದ ಇರುವವನೂ, ಭೂತಗಳು ನಾಶಹೊಂದಿದರೆ ಅದರಿಂದ ನಾಶಹೊಂದದವನೂ ಆದ ಪರಮೇಶ್ವರನು ಆಗಿದ್ದೇನೆ. ಹೀಗೆ ನನ್ನ ರೂಪವನ್ನು ಅರಿತವನು ಬ್ರಹ್ಮ ಸಾಕ್ಷಾತ್ಕಾರಿಯಾಗುವನು.

ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ ।
ನ ಹಿನಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂ ಗತಿಮ್ ॥ ೧೧ ॥

ವಿದಿತ್ವಾ ಸಪ್ತ ಸೂಕ್ಷ್ಮಾಣಿ ಷಡಂಗಂ ಚ ಮಹೇಶ್ವರಮ್ ।
ಪ್ರಧಾನವಿನಿಯೋಗಜ್ಞಃ ಪರಂ ಬ್ರಹ್ಮಾಧಿಗಚ್ಛತಿ ॥ ೧೨ ॥

ಸರ್ವಜ್ಞತಾ ತೃಪ್ತಿರನಾದಿಬೋಧಃ
ಸ್ವಚ್ಛಂದತಾ ನಿತ್ಯಮಲುಪ್ತಶಕ್ತಿಃ ।
ಅನಂತಶಕ್ತಿಶ್ಚ ವಿಭೋರ್ವಿದಿತ್ವಾ
ಷಡಾಹುರಂಗಾನಿ ಮಹೇಶ್ವರಸ್ಯ ॥ ೧೩ ॥

ತನ್ಮಾತ್ರಾಣಿ ಮನ ಆತ್ಮಾ ಚ ತಾನಿ
ಸೂಕ್ಷ್ಮಾಣ್ಯಾಹುಃ ಸಪ್ತ ತತ್ತ್ವಾತ್ಮಕಾನಿ ।

---

೧೧. ಸರ್ವ ವಸ್ತುಗಳಲ್ಲಿ ಸಾಮ್ಯರೂಪದಿಂದ ಇರುವ ಈಶ್ವರನನ್ನು ತಿಳಿದಿರುವ ಮಾನವನು ತನ್ನ ಆತ್ಮನಿಂದ ಆತ್ಮಕ್ಕೆ ಹಿಂಸೆಯನ್ನು ತಪ್ಪಿಸುವನು. ಮತ್ತು ಅಜ್ಞಾನದಿಂದ ಪರಮಗತಿಯನ್ನು ಹೊಂದುವನು.

೧೨. ವಿಕಾರವಸ್ತುಗಳಿಗೆ ಪ್ರಕೃತಿಗಳಾದ ಏಳು ಸೂಕ್ಷ್ಮ ವಸ್ತುಗಳನ್ನೂ ಸರ್ವಜ್ಞತ್ವಾದಿ ಆರು ಅಂಗಗಳಿಂದ ಕೂಡಿದ ಮಹೇಶ್ವರನನ್ನೂ ಮತ್ತು ಪ್ರಧಾನದಿಂದಾಗುವ ಕಾರ್ಯವಿನಿಯೋಗ ವಿಸ್ತಾರವನ್ನೂ ತಿಳಿದವನು ಪರಬ್ರಹ್ಮವನ್ನು ಹೊಂದುತ್ತಾನೆ.

೧೩. ವಿಭುವಾದ ಪರಮೇಶ್ವರನಲ್ಲಿ ಸರ್ವಜ್ಞತ್ವ, ತೃಪ್ತಿ, ಅನಾದಿಜ್ಞಾನ ಸ್ವತಂತ್ರತ್ವ ಯಾವಾಗಲೂ ಲೋಪವಿಲ್ಲದ ಶಕ್ತಿ ಹಾಗು ಅನಂತವಾದ ಶಕ್ತಿ ಎಂಬ ಆರು ಅಂಗಗಳು ಇರುತ್ತವೆಯೆಂದು ಪ್ರಾಜ್ಞರು ಹೇಳುತ್ತಾರೆ.

೧೪. ಪಂಚಭೂತ ತನ್ಮಾತ್ರಗಳು, ಮನಸ್ಸು, ಆತ್ಮಾ ಎಂಬ ಏಳು ತತ್ತ್ವಗಳನ್ನು ಸೂಕ್ಷ್ಮ ತತ್ತ್ವಗಳೆಂದು ಹೇಳುವರು. ಸಮಸ್ತ ಕಾರ್ಯಗಳಿಗೆ ಹೇತುವಾದ

ಯಾ ಸಾ ಹೇತುಃ ಪ್ರಕೃತಿಃ ಸಾ ಪ್ರಧಾನಂ
ಬಂಧಃ ಪ್ರೋಕ್ತೋ ವಿನಯೇನಾಪಿ ತೇನ　　　　॥ ೧೪ ॥

ಯಾ ಸಾ ಶಕ್ತಿಃ ಪ್ರಕೃತೌ ಲೀನರೂಪಾ
ವೇದೇಷೂಕ್ತಾ ಕಾರಣಂ ಬ್ರಹ್ಮಯೋನಿಃ ।
ತಸ್ಯಾ ಏಕಃ ಪರಮೇಷ್ಠೀ ಪುರಸ್ತಾ-
ನ್ಮಹೇಶ್ವರಃ ಪುರುಷಃ ಸತ್ಯರೂಪಃ　　　　॥ ೧೫ ॥

ಬ್ರಹ್ಮಾ ಯೋಗೀ ಪರಮಾತ್ಮಾ ಮಹೀಯಾನ್
ವ್ಯೋಮವ್ಯಾಪೀ ವೇದವೇದ್ಯಃ ಪುರಾಣಃ ।
ಏಕೋ ರುದ್ರೋ ಮೃತ್ಯುಮವ್ಯಕ್ತಮೇಕಂ
ಬೀಜಂ ವಿಶ್ವಂ ದೇವ ಏಕಃ ಸ ಏವ　　　　॥ ೧೬ ॥

---

ಪ್ರಕೃತಿಯು ಪ್ರಧಾನವೆಂದು ಕರೆಯಲ್ಪಟ್ಟಿದೆ. ಆ ಪ್ರಧಾನದ ನಾನಾ ಬಗೆಯ ಪರಿಣಾಮ ಪ್ರವಾಹವು ಬಂಧವನ್ನು ಉಂಟುಮಾಡುತ್ತದೆ.

೧೫ ಬ್ರಹ್ಮನಿಗೆ ಯೋನಿರೂಪವೆಂದು ವೇದಗಳಲ್ಲಿ ಹೇಳಲ್ಪಟ್ಟಿರುವ ಪ್ರಕೃತಿಯಲ್ಲಿ ಲೀನರೂಪವಾದ ಶಕ್ತಿಯಿಂದ ಸತ್ಯಸ್ವರೂಪನೂ, ಪೂರ್ಣಾಕಾರನೂ, ಮಹೇಶ್ವರನೂ ಆದ ಪರಮಸ್ಥಾನದಲ್ಲಿರುವ ಬ್ರಹ್ಮದೇವನು ಮೊದಲನೆಯ ಕಾರ್ಯರೂಪವಾಗಿ ಆವಿರ್ಭವಿಸಿಹನು.

೧೬. ಬ್ರಹ್ಮಾ, ಯೋಗೀ, ಪರಮಾತ್ಮಾ, ಪರಮಮಹತ್ತು, ಆಕಾಶ, ವ್ಯಾಪಕ. ವೇದಗಳಿಂದ ವೇದ್ಯ, ಪುರಾಣಪುರುಷ ಮುಂತಾದ ವಿವಿಧ ನಾಮಧೇಯಗಳಿಂದ ಕರೆಯಲ್ಪಡುವ ಆತ್ಮ, ಮರಣಗ್ರಸ್ತವಾದ ಅವ್ಯಾಕೃತ ಬೀಜ ತತ್ತ್ವ ಮತ್ತು ಸಮಸ್ತ ವಿಶ್ವಗಳು ಅದ್ವಿತೀಯನೂ, ಮಹೇಶ್ವರನೂ ಆದ ರುದ್ರಮೂರ್ತಿಯೇ ಆಗಿರುವುವು.

ತಮೇವೈಕಂ ಪ್ರಾಹುರನ್ಯೇಽಪ್ಯನೇಕಂ
ತ್ವಾಮೇವಾತ್ಮಾ ಕೇಚಿದನ್ಯಂ ತಮಾಹುಃ ।
ಅಣೋರಣೀಯಾನ್ಮಹತೋ ಮಹೀಯಾನ್
ಮಹಾದೇವಃ ಪ್ರೋಚ್ಯತೇ ವಿಶ್ವರೂಪಃ ॥ ೧೭ ॥

ಏವಂ ಹಿ ಯೋ ವೇದ ಗುಹಾಶಯಂ ಪರಂ
ಪ್ರಭುಂ ಪುರಾಣಂ ಪುರುಷಂ ವಿಶ್ವರೂಪಮ್ ।
ಹಿರಣ್ಮಯಂ ಬುದ್ಧಿಮತಾಂ ಪರಾಂ ಗತಿ
ಸ ಬುದ್ಧಿಮಾನ್ ಬುದ್ಧಿಮತೀತ್ಯ ತಿಷ್ಠತಿ ॥ ೧೮ ॥

ಇತಿ ಶ್ರೀ ಕೂರ್ಮಪುರಾಣೇ ಏಕಷಷ್ಟಿತಮೋಽಧ್ಯಾಯಃ.

---

೧೭. ಅಂತಹ ಪರಮಾತ್ಮನನ್ನು ಕೆಲವರು ಅದ್ವಿತೀಯನನ್ನಾಗಿ ಹೇಳುವರು. ಮತ್ತೆ ಕೆಲವರು ಅನೇಕರೂಪನನ್ನಾಗಿ ವರ್ಣಿಸುವರು. ಜೀವಾತ್ಮವನ್ನೇ ಪರಮಾತ್ಮವೆಂದು ಕೆಲವರು ಹೇಳುವರು, ಮತ್ತೆ ಕೆಲವರು ಜೀವ ಭಿನ್ನನಾದ ಪರಮಾತ್ಮನನ್ನು ಅಂಗೀಕರಿಸುವರು. ಆ ಪರಮಾತ್ಮನು ಅಣುವಸ್ತುಗಳಿಗಿಂತ ಅತ್ಯಂತ ಅಣುರೂಪನೂ, ಮಹಾವಸ್ತುಗಳಿಗಿಂತ ಅತ್ಯಂತ ಮಹತ್ತಾದವನೂ, ಮಹಾದೇವನೂ ಮತ್ತು ವಿಶ್ವರೂಪನೂ ಆಗಿರುವನೆಂದು ಹೇಳಲ್ಪಡುತ್ತಾನೆ.

೧೮. ಹೃದಯ ಗುಹೆಯಲ್ಲಿ ವಾಸಿಸುವನೂ, ಪರಪುರುಷನೂ, ಪ್ರಭುವೂ, ಪುರಾಣಪುರುಷನೂ, ವಿಶ್ವರೂಪನೂ, ಸುವರ್ಣಮಯನೂ ಮತ್ತು ಜ್ಞಾನಿಗಳಿಗೆ ಪರಮಗತಿಯೂ ಆದ ನಿನ್ನನ್ನು ಈ ರೀತಿಯಾಗಿ ತಿಳಿದಿರುವ ಮಾನವನು ಬಹು ವಿವೇಕಿಯಾದುದರಿಂದ ಜಡಬುದ್ಧಿಯನ್ನು ಮೀರಿದವನಾಗುವನು.

( ಕೂರ್ಮಪುರಾಣದಲ್ಲಿ ಅರವತ್ತೊಂದನೆಯ ಅಧ್ಯಾಯವು ಸಮಾಪ್ತವು. )

ಶ್ರೀಃ

# ಕೂರ್ಮಪುರಾಣಂ

---

## ದ್ವಿಷಷ್ಟಿತಮೋಽಧ್ಯಾಯಃ.

ಋಷಯ ಊಚುಃ :—

ನಿಷ್ಕಲೋ ನಿರ್ಮಲೋ ನಿತ್ಯೋ ನಿಷ್ಕ್ರಿಯಃ ಪರಮೇಶ್ವರಃ ।
ತತೋ ವದ ಮಹಾದೇವ ವಿಶ್ವರೂಪಃ ಕಥಂ ಭವಾನ್ ॥ ೧ ॥

ಈಶ್ವರ ಉವಾಚ :—

ನಾಹಂ ವಿಶ್ವೋ ನ ವಿಶ್ವಂ ಚ ಮಾಮೃತೇ ವಿದ್ಯತೇ ದ್ವಿಜಾಃ ।
ಮಾಯಾ ನಿಮಿತ್ತಮಾತ್ರಾಸ್ತಿ ಸಾ ಚಾತ್ಮನಿ ಮಯಾ ಶ್ರಿತಾ ॥ ೨ ॥

---

## ಅರವತ್ತೆರಡನೆಯ ಅಧ್ಯಾಯವು

೧. ಮುನಿಗಳು ಹೀಗೆಂದು ಕೇಳಿದರು :—ಪರಮೇಶ್ವರನು ನಿರವಯವನೂ, ನಿರ್ಮಲನೂ, ನಿತ್ಯನೂ, ಕ್ರಿಯಾರಹಿತನೂ ಆಗಿರುವನು. ಮಹಾದೇವನೆ! ಅಂತಹ ಪರಮೇಶ್ವರನು ಹೇಗೆ ವಿಶ್ವರೂಪನಾಗುವನು ? ಇದನ್ನು ಹೇಳು.

೨. ಈಶ್ವರನು ಹೀಗೆ ಉಪದೇಶಿಸಿದನು :—ದ್ವಿಜರೆ ! ನಾನು ವಿಶ್ವದರೂಪವುಳ್ಳವನಾಗಿಲ್ಲ. ನನ್ನನ್ನು ಬಿಟ್ಟು ವಿಶ್ವವೆಂಬ ಸ್ವತಂತ್ರ ತತ್ತ್ವವು ಒಂದಾಗಿಲ್ಲ. ಅದೆಲ್ಲಕ್ಕೂ ನಿಮಿತ್ತವಾದ ಮಾಯೆ ಎಂಬುದು ಒಂದು ಇದೆ. ಆ ಮಾಯೆಯು ನನ್ನ ಆತ್ಮನಲ್ಲಿ ಆಶ್ರಯಹೊಂದಿದೆ.

ಅನಾದಿನಿಧನಾ ಶಕ್ತಿರ್ಮಾಯಾ ವ್ಯಕ್ತಿಸಮಾಶ್ರಯಾ ।
ತನ್ನಿಮಿತ್ತಃ ಪ್ರಪಂಚೋಽಯಮವ್ಯಕ್ತಾಜ್ಜಾಯತೇ ಖಲು ॥ ೩ ॥

ಅವ್ಯಕ್ತಂ ಕಾರಣಂ ಪ್ರಾಹುರಾನಂದಂ ಜ್ಯೋತಿರಕ್ಷರಮ್ ।
ಅಹಮೇವ ಪರಂ ಬ್ರಹ್ಮ ಮತ್ತೋ ಹ್ಯನ್ಯನ್ನ ವಿದ್ಯತೇ ॥ ೪ ॥

ತಸ್ಮಾನ್ಮೇ ವಿಶ್ವರೂಪತ್ವಂ ನಿಶ್ಚಿತಂ ಬ್ರಹ್ಮವಾದಿಭಿಃ ।
ಏಕತ್ವೇ ಚ ಪೃಥಕ್ತ್ವೇ ಚ ಪ್ರೋಕ್ತಮೇತನ್ನಿದರ್ಶನಮ್ ॥ ೫ ॥

ಅಹಂ ತತ್ಪರಮಂ ಬ್ರಹ್ಮ ಪರಮಾತ್ಮಾ ಸನಾತನಃ ।
ಅಕಾರಣಂ ದ್ವಿಜಾಃ ಪ್ರೋಕ್ತಾ ನ ದೋಷೋ ಹ್ಯಾತ್ಮನಸ್ತಥಾ ॥ ೬ ॥

---

೩. ಜನ್ಮ-ನಾಶಗಳಿಲ್ಲದ ಮಾಯಾಶಕ್ತಿಯು ನನ್ನ ವ್ಯಕ್ತಿಯನ್ನು ಆಶ್ರಯಿಸಿಕೊಂಡಿರುವುದು. ಈ ಪ್ರಪಂಚವು ಅಂತಹ ಮಾಯೆಯ ನಿಮಿತ್ತದಿಂದ ಜನಿಸುವುದಾದ್ದರಿಂದ ಅವ್ಯಕ್ತ ತತ್ತ್ವದಿಂದ ಪ್ರಪಂಚವು ತೋರುವುದು.

೪. ಅವ್ಯಾಕೃತ ತತ್ತ್ವವನ್ನು ಪ್ರಪಂಚ ಕಾರಣವೆಂದು ಹೇಳುವರು. ನಾನು ಆನಂದರೂಪವೂ, ಸ್ವಯಂಜೋತಿಯೂ, ಅಕ್ಷರಾತ್ಮಕವೂ ಆದ ಪರಬ್ರಹ್ಮರೂಪನಾಗಿರುವೆನು, ನನಗಿಂತಲೂ ವಿಲಕ್ಷಣವಾಗಿ ಮತ್ತೊಂದು ವಸ್ತುವಿರುವುದಿಲ್ಲ.

೫. ಆದುದರಿಂದ ಬ್ರಹ್ಮವಾದಿಗಳಿಂದ ನನ್ನಲ್ಲಿ ವಿಶ್ವರೂಪತ್ವವು ನಿರ್ಣಯಿಸಲ್ಪಟ್ಟಿದೆ. ವಾಸ್ತವಿಕವಾಗಿ ನನ್ನ ಅದ್ವಿತೀಯತ್ವದಲ್ಲಿಯೂ ಕಾಲ್ಪನಿಕವಾದ ಅನೇಕತ್ವದಲ್ಲಿಯೂ ಈ ನಿದರ್ಶನವು ಹೇಳಲ್ಪಟ್ಟಿದೆ.

೬. ದ್ವಿಜರೇ! ಪರಬ್ರಹ್ಮರೂಪನೂ, ಪರಮಾತ್ಮನೂ, ಸನಾತನೂ ಆದ ನಾನು ಕಾರಣವಸ್ತುವಲ್ಲದವನೆಂದು ಹೇಳಲ್ಪಟ್ಟಿರುವೆನು. ಆದುದರಿಂದ ನನ್ನ ಆತ್ಮಕ್ಕೆ ಯಾವ ವಿಧವಾದ ದೋಷವೂ ಇಲ್ಲ.

ಅನಂತಾಃ ಶಕ್ತಯೋಽವ್ಯಕ್ತಾ ಮಾಯಯಾ ಸಂಸ್ಥಿತಾ ಧ್ರುವಾಃ ।
ತಸ್ಮಿನ್ ದಿವಿ ಸ್ಥಿತಂ ನಿತ್ಯಮವ್ಯಕ್ತಂ ಭಾತಿ ಕೇವಲಮ್ ॥ ೭ ॥

ಅಭಿನ್ನಂ ವಕ್ಷ್ಯತೇ ಭಿನ್ನಂ ಬ್ರಹ್ಮಾವ್ಯಕ್ತಂ ಸನಾತನಮ್ ।
ಏಕಯಾ ಮಾಯಯಾ ಯುಕ್ತಮನಾಧಿನಿಧನಂ ಧ್ರುವಮ್ ॥ ೮ ॥

ಪುಂಸೋಽನ್ಯಾಭೂದ್ಯಥಾ ಭೂತಿರನ್ಯಯಾ ನ ತಿರೋಹಿತಮ್ ।
ಅನಾದಿಮಧ್ಯಂ ತಿಷ್ಠಂತಂ ಚೇಷ್ಟತೇ ವಿದ್ಯಯಾ ಕಿಲ ॥ ೯ ॥

ತದೇತತ್ಪರಮವ್ಯಕ್ತಂ ಪ್ರಭಾಮಂಡಲಮಂಡಿತಮ್ ।
ತದಕ್ಷರಂ ಪರಂ ಜ್ಯೋತಿಸ್ತದ್ವಿಷ್ಣೋಃ ಪರಮಂ ಪದಮ್ ॥ ೧೦ ॥

---

೭. ನನ್ನಲ್ಲಿ ಅಪರಿಮಿತವೂ, ಶಾಶ್ವತವೂ, ಅವ್ಯಕ್ತವೂ ಆದ ಮಾಯಾ ನಿರ್ಮಿತವಾದ ಅನಂತಶಕ್ತಿಗಳು ಇರುವುವು. ಅಂತಹ ಶಕ್ತಿ ಸಮಷ್ಟಿರೂಪವಾದ ಅವ್ಯಕ್ತವು ದೀಪ್ಯಮಾನನಾದ ಪರಮಾತ್ಮನಲ್ಲಿದ್ದು ಪರಮಾತ್ಮನ ಪ್ರಕಾಶದಿಂದ ಕೇವಲವಾಗಿ ಪ್ರಕಾಶಿಸುವುದು.

೮. ಅತೀಂದ್ರಿಯವೂ, ಸನಾತನವೂ, ಆದಿ–ನಿಧನರಹಿತವೂ, ಸ್ಥಿರವೂ ಆದ ಬ್ರಹ್ಮವಸ್ತುವು ಒಂದು ಮಾಯೆಯ ಸಂಗದಿಂದ ಅಭಿನ್ನವೆಂದೂ ಭಿನ್ನವೆಂದೂ ಹೇಳಲ್ಪಡುತ್ತದೆ.

೯. ಪುರುಷನ ಈಶ್ವರತ್ವವು ಹೇಗೆ ವ್ಯಕ್ತಿಭಿನ್ನವಾಗಿರುವುದೊ ಮತ್ತು ಬೇರೊಂದು ಶಕ್ತಿಯಿಂದ ವ್ಯಕ್ತಿಯು ಹೇಗೆ ಆವರಿಸಲ್ಪಟ್ಟಿಲ್ಲವೊ, ಹಾಗೆ ಶಕ್ತಿರೂಪ ವಾಗಿರುವ ಅವಿದ್ಯೆಯಿಂದ ಆದಿ-ಮಧ್ಯ-ಅವಸಾನಗಳಿಂದ ವರ್ಜಿತವಾದ ಬ್ರಹ್ಮ ವಸ್ತುವು ಚಲಿಸುತ್ತಿರುವುದು.

೧೦. ಪರಮಾತ್ಮನು ಪ್ರಭಾಮಂಡಲದಿಂದ ಅಲಂಕೃತವೂ, ಅವ್ಯಕ್ತವೂ ಆದ ತತ್ತ್ವವು. ಪರಮಾತ್ಮನು ಅಕ್ಷರಾತ್ಮಕವಾದ ಪರಜ್ಯೋತಿರೂಪನು, ಮತ್ತು ಪರಮಾತ್ಮನು ಪರಮಗತಿಸ್ವರೂಪನಾಗಿರುವನು.

ತತ್ರ ಸರ್ವಮಿದಂ ಪ್ರೋತಮೋತಂ ಚೈವಾಖಿಲಂ ಜಗತ್ ।
ತದೇವೇದಂ ಜಗತ್ ಕೃತ್ಸ್ನಂ ತದ್ವಿಜ್ಞಾಯ ವಿಮುಚ್ಯತೇ ॥ ೧೧ ॥

ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ।
ಆನಂದಂ ಬ್ರಹ್ಮಣೋ ವಿದ್ವಾನ್ ಬಿಭೇತಿ ನ ಕುತಶ್ಚನ ॥ ೧೨ ॥

ವೇದಾಹಮೇತಂ ಪುರುಷಂ ಮಹಾಂತ-
ಮಾದಿತ್ಯವರ್ಣಂ ಪುರುಷಂ ಪುರಸ್ತಾತ್ ।
ತಂ ವಿಜ್ಞಾಯ ಪರಿಮುಚ್ಯೇತ ವಿದ್ವಾನ್
ನಿತ್ಯಾನಂದೀ ಭವತಿ ಬ್ರಹ್ಮಭೂತಃ ॥ ೧೩ ॥

ಅಸ್ಮಾತ್ಪರಂ ನಾಪರಮಸ್ತಿ ಕಿಂಚಿ-
ದ್ಯಜ್ಜ್ಯೋತಿಷಾಂ ಜ್ಯೋತಿರೇಕಂ ದಿವಿಸ್ಥಮ್ ।

---

೧೧. ಅಂತಹ ಪರಮಾತ್ಮನಲ್ಲಿ ವ್ಯವಹಾರಗೋಚರವಾದ ಈ ಸಮಸ್ತ ಜಗತ್ತು ಓತ-ಪ್ರೋತಭಾವದಿಂದ ಅಡಗಿರುವುದು. ಹಾಗೆ ಪರಮಾತ್ಮನ ಅಧೀನವಾದ ಈ ಜಗತ್ತನ್ನೂ ಆಧಾರಭೂತನಾದ ಪರಮಾತ್ಮನನ್ನೂ ತಿಳಿದವನು ಮುಕ್ತನಾಗುತ್ತಾನೆ.

೧೨. ವಾಗಿಂದ್ರಿಯವು ಪರಮಾತ್ಮನನ್ನು ಪ್ರಕಾಶಪಡಿಸಲಾರದೆ ಪರಮಾತ್ಮ ವಸ್ತುವಿನ ಸ್ಪರ್ಶವುಕೂಡ ದೊರಕದೆ ಮನಸ್ಸಿನೊಡನೆ ಹಿಂತಿರುಗಿರುವುದು. ಅಂತಹ ಬ್ರಹ್ಮಸ್ವರೂಪವಾದ ಆನಂದವನ್ನು ತಿಳಿದವನು ಮತ್ತಾವ ವಸ್ತುವಿನಿಂದಲೂ ಭಯಪಡುವುದಿಲ್ಲ.

೧೩. ಆದಿತ್ಯನಂತೆ ವರ್ಣವುಳ್ಳವನೂ, ತಮೋಗುಣಾಸ್ಪೃಷ್ಟನೂ, ಮಹಾಪರಿಮಾಣನೂ, ಪೂರ್ಣಪುರುಷನೂ ಆದ ಪರಮಾತ್ಮನನ್ನು ನಾನು ತಿಳಿದಿರುವೆನು. ಮಾನವನು ಬ್ರಹ್ಮಾತ್ಮೈಕ್ಯಭಾವನೆಯಿಂದ ಪರಮಾತ್ಮನನ್ನು ತಿಳಿದು ಮುಕ್ತನಾಗುವನು. ಮತ್ತು ಬ್ರಹ್ಮಭೂತನಾಗಿ ನಿತ್ಯಾನಂದಾನುಭವಿಯಾಗುತ್ತಾನೆ.

೧೪. ಪರಮಾತ್ಮವಸ್ತುವಿಗಿಂತ ಪ್ರತ್ಯೇಕವಾದ ಉತ್ಕೃಷ್ಟ ನಿಕೃಷ್ಟವಸ್ತುವು ಬೇರೊಂದು ಇಲ್ಲ. ಪ್ರಕಾಶಕ ವಸ್ತುಗಳಲ್ಲಿ ಪ್ರಕಾಶ ಶಕ್ತಿಯನ್ನು ಕೊಟ್ಟ ಪರಮಾತ್ಮ

ತದೇವಾತ್ಮಾನಂ ಮನ್ಯಮಾನೋಽಥ ವಿದ್ವಾ-
ನಾತ್ಮಾನಂದೀ ಭವತಿ ಬ್ರಹ್ಮಭೂತಃ ॥ ೧೪ ॥

ತದಪ್ಯಹಂ ಕಲಿಲಂ ಗೂಢದೇಹಂ
ಬ್ರಹ್ಮಾನಂದಮಮೃತಂ ವಿಶ್ವಧಾಮಾ ।
ವದಂತ್ಯೇವಂ ಬ್ರಾಹ್ಮಣಾ ಬ್ರಹ್ಮನಿಷ್ಠಾ
ಯತ್ರ ಗತ್ವಾ ನ ನಿವರ್ತೇತ ಭೂಯಃ ॥ ೧೫ ॥

ಹಿರಣ್ಮಯೇ ಪರಮಾಕಾಶತತ್ತ್ವೇ
ಯದ್ವೈ ದಿವಿ ವಿಪ್ರಭಾತೀವ ತೇಜಃ ।
ತದ್ವಿಜ್ಞಾನೇ ಪರಿಪಶ್ಯಂತಿ ಧೀರಾ
ವಿಭ್ರಾಜಮಾನಂ ವಿಮಲಂ ವ್ಯೋಮಧಾಮ ॥ ೧೬ ॥

---

ವಸ್ತುವು ದ್ಯುಲೋಕದಲ್ಲಿ ನಿರುಪಮ ಜ್ಯೋತಿಯಂತೆ ಭಾಸಿಸುವುದು. ತನ್ನ ಆತ್ಮವನ್ನು ಅಂತಹ ಪರಮಾತ್ಮರೂಪನನ್ನಾಗಿ ತಿಳಿದ ಜ್ಞಾನಿಯು ಬ್ರಹ್ಮಾಭಿನ್ನನಾಗಿ ನಿತ್ಯಾನಂದವನ್ನು ಅನುಭವಿಸುವನು.

೧೫. ಉಪಾಧಿಗಳಿಂದ ಸಂಪೃಕ್ತನೂ, ಗೂಢವಾದ ದೇಹವುಳ್ಳವನೂ, ಆನಂದ ಮಯ ಬ್ರಹ್ಮರೂಪನೂ, ಅಮೃತನೂ, ವಿಶ್ವಾಧಾರನೂ ಆದ ನಾನು ತತ್ಪದಾರ್ಥ ಬ್ರಹ್ಮರೂಪಿಯಾಗಿರುವೆನು. ಬ್ರಹ್ಮನಿಷ್ಠರಾದ ಬ್ರಾಹ್ಮಣರು ಹೀಗೆಂದು ವರ್ಣಿಸುವರು. ಆ ಪದವಿಯನ್ನು ಹೊಂದಿದವನು ಪುನರಾವೃತ್ತಿಯನ್ನು ಹೊಂದುವುದಿಲ್ಲ.

೧೬. ಸುವರ್ಣಮಯವಾದ, ಪರಮಾಕಾಶ ತತ್ತ್ವರೂಪವಾದ ದ್ಯುಲೋಕದಲ್ಲಿ ಪ್ರಕಾಶಿಸುವಂತೆ ಕಾಣುವ ತೇಜಸ್ಸನ್ನು ಜ್ಞಾನಿಗಳು ತಮ್ಮ ವಿಜ್ಞಾನಾತ್ಮನಲ್ಲಿ ಸಾಕ್ಷಾತ್ಕರಿಸುವರು. ಅಂತಹ ತೇಜಸ್ಸು ನಿರ್ಮಲವೂ ಆಕಾಶದಂತೆ ಸೂಕ್ಷ್ಮಾಧಾರವೂ ಆಗಿ ಪ್ರಕಾಶಿಸುವುದು.

ತತಃ ಪರಂ ಪರಿಪಶ್ಯಂತಿ ಧೀರಾ
ಆತ್ಮನ್ಯಾತ್ಮಾನ ಮನುಭೂಯ ಸಾಕ್ಷಾತ್ ।
ಸ್ವಯಂ ಪ್ರಭುಃ ಪರಮೇಷ್ಠೀ ಮಹೀಯಾನ್
ಬ್ರಹ್ಮಾನಂದೀ ಭಗವಾನೀಶ ಏಷಃ ॥ ೧೭ ॥

ಏಕೋ ದೇವಃ ಸರ್ವಭೂತೇಷು ಗೂಢಃ
ಸರ್ವವ್ಯಾಪೀ ಸರ್ವಭೂತಾಂತರಾತ್ಮಾ ।
ತಮೇವೈಕಂ ಯೇಽನುಪಶ್ಯಂತಿ ಧೀರಾ-
ಸ್ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಮ್ ॥ ೧೮ ॥

ಸರ್ವಾನನಶಿರೋಗ್ರೀವಃ ಸರ್ವಭೂತಗುಹಾಶಯಃ ।
ಸರ್ವವ್ಯಾಪೀ ಸ ಭಗವಾಂಸ್ತಸ್ಮಾದನ್ಯನ್ನ ವಿದ್ಯತೇ ॥ ೧೯ ॥

---

೧೭. ಆದುದರಿಂದ ಜ್ಞಾನಿಗಳು ತಮ್ಮ ಜೀವಾತ್ಮನಲ್ಲಿ ಶ್ರೇಷ್ಠನಾದ ಪರಮಾತ್ಮನನ್ನು ಅಭೇದರೂಪನನ್ನಾಗಿ ಅನುಭವಿಸಿ ಸಾಕ್ಷಾತ್ಕಸಿರುವರು. ಈ ಈಶ್ವರನು ಸ್ವಯಂಪ್ರಭುವೂ, ಉತ್ತಮಸ್ಥಾನದಲ್ಲಿರುವವನೂ, ಮಹಾತ್ಮನೂ, ಬ್ರಹ್ಮಾನಂದ ಸ್ವರೂಪನೂ, ಭಗವಂತನೂ ಆಗಿರುವನು.

೧೮. ಅದ್ವಿತೀಯನಾದ ಪರಮಾತ್ಮನು ಸಮಸ್ತ ಭೂತಗಳಲ್ಲಿ ಗೂಢರೂಪನೂ, ಸರ್ವವ್ಯಾಪಕನೂ, ಸಮಸ್ತ ಭೂತಗಳ ಅಂತರಾತ್ಮನೂ ಆಗಿರುವನು. ಯಾವ ಜ್ಞಾನಿಗಳು ಅಂತಹ ಅದ್ವಿತೀಯಾತ್ಮನನ್ನು ಸಂದರ್ಶಿಸುವರೋ ; ಅವರಿಗೆ ಶಾಶ್ವತ ಶಾಂತಿಯು ಲಭ್ಯವಾಗುವುದು. ಇತರರಿಗೆ ಶಾಂತಿ ಉಂಟಾಗಲಾರದು.

೧೯. ಪೂಜ್ಯನಾದ ಪರಮಾತ್ಮನು ಸರ್ವದಿಕ್ಕುಗಳಲ್ಲಿ ಮುಖ, ಶಿರಸ್ಸು, ಕಂಠಗಳುಳ್ಳವನೂ, ಸರ್ವಭೂತಗಳ ಹೃದಯಗುಹೆಯಲ್ಲಿ ವಾಸಿಸುವವನೂ, ಸರ್ವ ವ್ಯಾಪಕನೂ, ಆಗಿರುವನು. ಆ ಪರಮಾತ್ಮನಿಗಿಂತ ಬೇರೊಂದು ವಸ್ತುವಿಲ್ಲ.

ಇತ್ಯೇತದೀಶ್ವರಜ್ಞಾನಮುಕ್ತಂ ವೋ ಮುನಿಪುಂಗವಾಃ ।
ಗೋಪನೀಯಂ ವಿಶೇಷೇಣ ಯೋಗಿನಾಮಪಿ ದುರ್ಲಭಮ್ ॥ ೨೦ ॥

ಇತಿ ಶ್ರೀ ಕೂರ್ಮಪುರಾಣೇ ದ್ವಿಷಷ್ಟಿತಮೋಽಧ್ಯಾಯಃ.

---

೨೦. ಮುನಿಶ್ರೇಷ್ಠರೇ ! ನಿಮಗೆ ಈ ವಿಧವಾಗಿ ಈಶ್ವರಜ್ಞಾನವು ಹೇಳಲ್ಪಟ್ಟಿದೆ. ಯೋಗಿಗಳಿಗೂ ಕೂಡ ದುರ್ಲಭವಾದ ಈ ಜ್ಞಾನವು ಯತ್ನವಿಶೇಷಗಳಿಂದ ರಕ್ಷಿಸಲ್ಪಡಬೇಕು.

( ಕೂರ್ಮಪುರಾಣದಲ್ಲಿ ಅರವತ್ತೆರಡನೆಯ ಅಧ್ಯಾಯವು ಮುಗಿದುದು. )



ಶ್ರೀಃ

# ಕೂರ್ಮಪುರಾಣಂ

## ತ್ರಿಷಷ್ಟಿತಮೋಽಧ್ಯಾಯಃ.

ಈಶ್ವರ ಉವಾಚ :—

ಅಲಿಂಗಮೇಕಮವ್ಯಕ್ತಲಿಂಗಂ ಬ್ರಹ್ಮೇತಿ ನಿಶ್ಚಿತಮ್ ।
ಸ್ವಯಂಜ್ಯೋತಿಃ ಪರಂ ತತ್ತ್ವಂ ಪೂರ್ವಂ ವ್ಯೋಮ್ನಿ ವ್ಯವಸ್ಥಿತಮ್ ॥

ಅವ್ಯಕ್ತಂ ಕಾರಣಂ ಯತ್ತದಕ್ಷರಂ ಪರಮಂ ಪದಮ್ ।
ನಿರ್ಗುಣಂ ಸಿದ್ಧಿವಿಜ್ಞಾನಂ ತದ್ವೈ ಪಶ್ಯಂತಿ ಸೂರಯಃ ॥ ೨ ॥

---

## ಅರವತ್ತಮೂರನೆಯ ಅಧ್ಯಾಯವು

೧. ಈಶ್ವರನು ಹೀಗೆ ಉಪದೇಶಿಸಿದನು :—ಲಿಂಗರಹಿತವೂ, ಅದ್ವಿತೀಯವೂ, ಅಗೋಚರವಾದ ಲಿಂಗವುಳ್ಳದ್ದೂ, ಸ್ವಯಂಪ್ರಕಾಶವೂ, ಪರಮಾರ್ಥ ತತ್ವವೂ ಎಂದು ನಿಶ್ಚಯಿಸಲ್ಪಟ್ಟ ಪರಬ್ರಹ್ಮವಸ್ತುವು ಆದಿಯಲ್ಲಿ ಆಕಾಶತತ್ತ್ವದಲ್ಲಿ ಸ್ಥಿತಿಯನ್ನು ಹೊಂದಿತ್ತು.

೨. ಅತೀಂದ್ರಿಯವೂ, ಕಾರಣಾತ್ಮಕವೂ, ಕ್ಷರಾತೀತವೂ, ಪರಮಪದ ರೂಪವೂ, ನಿರ್ಗುಣವೂ, ಯಾವಾಗಲೂ ಸಿದ್ಧವಾದ ವಿಜ್ಞಾನವುಳ್ಳದ್ದೂ ಆದ ಬ್ರಹ್ಮವಸ್ತುವನ್ನು ಜ್ಞಾನಿಗಳು ಸಾಕ್ಷಾತ್ಕರಿಸುತ್ತಾರೆ.

ತನ್ನಷ್ಟಸ್ವಾಂತಸಂಕಲ್ಪಾ ನಿತ್ಯಂ ತದ್ಭಾವಭಾವಿತಾಃ ।
ಪಶ್ಯಂತಿ ತತ್ಪರಂ ಬ್ರಹ್ಮ ಯತ್ತಲ್ಲಿಂಗಮಿತಿ ಶ್ರುತಿಃ　॥ ೩ ॥

ಅನ್ಯಥಾ ನ ಹಿ ಮಾಂ ದ್ರಷ್ಟುಂ ಶಕ್ಯಂ ವೈ ಮುನಿಪುಂಗವಾಃ ।
ನ ಹಿ ತದ್ವಿದ್ಯತೇ ಜ್ಞಾನಂ ಯೇನ ತಜ್ಜ್ಞಾಯತೇ ಪರಮ್　॥ ೪ ॥

ಏತತ್ತತ್ಪರಮಂ ಸ್ಥಾನಂ ಕೇವಲಂ ಕವಯೋ ವಿದುಃ ।
ಅಜ್ಞಾನತಿಮಿರಂ ಜ್ಞಾನಂ ಯಸ್ಮಾನ್ಮಾಯಾಮಯಂ ಜಗತ್　॥ ೫ ॥

ಯಜ್ಞಾನಂ ನಿರ್ಮಲಂ ಶುದ್ಧಂ ನಿರ್ವಿಕಲ್ಪಂ ನಿರಂಜನಮ್ ।
ಮಮಾತ್ಮಾಸೌ ತದೇವೈನಮಿತಿ ಪ್ರಾಹುರ್ವಿಪಶ್ಚಿತಃ　॥ ೬ ॥

---

೩. ಬ್ರಹ್ಮಸಾಕ್ಷಾತ್ಕಾರದಿಂದ ನಾಶಹೊಂದಿದ ಮನಸ್ಸಿನ ಸಂಕಲ್ಪಗಳುಳ್ಳವರೂ, ಬ್ರಹ್ಮಭಾವನೆಯಿಂದ ಪವಿತ್ರರೂ ಆದ ಯೋಗಿಗಳು ಪರಬ್ರಹ್ಮವನ್ನು ಯಾವ ಆಕಾರದಿಂದ ಸಾಕ್ಷಾತ್ಕರಿಸುವರೋ ; ಆ ಆಕಾರವು ಬ್ರಹ್ಮಲಿಂಗವೆಂದು ಶ್ರುತಿಯು ಹೇಳುವುದು.

೪. ಮುನಿಶ್ರೇಷ್ಠರೇ ! ಬೇರೊಂದು ವಿಧದಿಂದ ನನ್ನನ್ನು ಸಾಕ್ಷಾತ್ಕರಿಸಲು ಶಕ್ಯವಾಗುವುದಿಲ್ಲ. ಯಾವ ಜ್ಞಾನದಿಂದ ಪರಬ್ರಹ್ಮವು ಗೋಚರವಾಗುವುದೋ ; ಅಂತಹ ಮತ್ತೊಂದು ಜ್ಞಾನವಾವುದೂ ಇಲ್ಲ.

೫. ಇಂತಹ ಪರಮಸ್ಥಾನವನ್ನು ವಿದ್ವಾಂಸರು ಮಾತ್ರ ತಿಳಿದಿರುವರು ಅಂತಹ ತತ್ವಜ್ಞಾನವು ಅಜ್ಞಾನವೆಂಬ ಅಂಧಕಾರದಿಂದ ಮರೆಯಾಗಿರುವುದು. ಹಾಗೆ ಅಜ್ಞಾನದ ಮರೆಯಿರುವುದರಿಂದ ಮಾಯಾರೂಪವಾದ ಜಗತ್ತು ಸ್ಫೂರ್ತಿಯಾಗುತ್ತಿರುವುದು.

೬. ನಿರ್ಮಲವೂ, ಶುದ್ಧವೂ, ವಿಕಲ್ಪಾತೀತವೂ, ನಿರ್ದುಷ್ಟವೂ ಆದ ಪ್ರಕಾಶ ತತ್ವವು ನನ್ನ ಆತ್ಮರೂಪವಾಗಿರುವುದು. ನಾನು ಆ ಪ್ರಕಾಶರೂಪನಾಗಿರುವೆನು. ಹೀಗೆಂದು ಜ್ಞಾನಿಗಳು ಉಪದೇಶಿಸುತ್ತಾರೆ.

ಯೇಽಪ್ಯನೇಕಂ ಪ್ರಪಶ್ಯಂತಿ ತತ್ಪರಂ ಪರಮಂ ಪದಮ್ ।
ಆಶ್ರಿತಾಃ ಪರಮಾಂ ನಿಷ್ಠಾಂ ಬುದ್ಧ್ವೈಕಂ ತತ್ತ್ವಮವ್ಯಯಮ್ ॥ ೭ ॥

ಯೇ ಪುನಃ ಪರಮಂ ತತ್ತ್ವಮೇಕಂ ವಾನೇಕಮೀಶ್ವರಮ್ ।
ಭಕ್ತ್ಯಾ ಮಾಂ ಸಂಪ್ರಪಶ್ಯಂತಿ ವಿಜ್ಞೇಯಾಸ್ತೇ ತದಾತ್ಮಕಾಃ ॥ ೮ ॥

ಸಾಕ್ಷಾದ್ದೇವಂ ಪ್ರಪಶ್ಯಂತಿ ಸ್ವಾತ್ಮಾನಂ ಪರಮೇಶ್ವರಮ್ ।
ನಿತ್ಯಾನಂದಂ ನಿರ್ವಿಕಲ್ಪಂ ಸತ್ಯರೂಪಮಿತಿ ಸ್ಥಿತಿಃ ॥ ೯ ॥

ಭಜಂತೇ ಪರಮಾನಂದಂ ಸರ್ವಗಂ ಜಗದಾತ್ಮಕಮ್ ।
ಸ್ವಾತ್ಮನ್ಯವಸ್ಥಿತಾಃ ಶಾಂತಾಃ ಪರೇ ವ್ಯಕ್ತಾಪರಸ್ಯ ತು ॥ ೧೦ ॥

---

೭. ಯಾವ ವಿಮರ್ಶಕರು ಉತ್ತಮವಾದ ಪರಮಪದವೆಂಬ ಪರಬ್ರಹ್ಮ ವಸ್ತುವನ್ನು ಅನೇಕವೆಂದು ನೋಡುವರೋ ; ಅವರು ಉತ್ತಮವಾದ ಜ್ಞಾನನಿಷ್ಠೆಯನ್ನು ಆಶ್ರಯಿಸಿ ಅವ್ಯಯವಾದ ಐಕ್ಯವೆಂಬ ತತ್ತ್ವವನ್ನು ತಿಳಿಯುವರು.

೮. ಯಾವ ವಿಮರ್ಶಕರು ಪರಮತತ್ತ್ವರೂಪನಾದ ಈಶ್ವರನನ್ನು ಏಕ ಅಥವಾ ಅನೇಕರೂಪವಾಗಿ ಭಕ್ತಿಮಾರ್ಗದಿಂದ ತಿಳಿಯುವರೋ ; ಅವರು ಅಂತಹ ಈಶ್ವರಾತ್ಮಸ್ವರೂಪರೆಂದು ತಿಳಿಯಬೇಕು.

೯. ಜ್ಞಾನಿಗಳು ತಮ್ಮ ಆತ್ಮವನ್ನು ಪ್ರಕಾಶಮಯನೂ, ಪರಮೇಶ್ವರನೂ, ನಿತ್ಯಾನಂದ ಸಂಪೂರ್ಣನೂ, ನಿರ್ವಿಕಲ್ಪನೂ ಮತ್ತು ಸತ್ಯಸ್ವರೂಪನೂ ಆದವನೆಂದು ಸಾಕ್ಷಾತ್ತಾಗಿ ತಿಳಿಯುವರು, ಎಂಬುದು ಪರಮಾರ್ಥಸ್ಥಿತಿಯು.

೧೦. ಯೋಗಿಗಳು ಶಾಂತರೂ, ಸ್ವಾತ್ಮನಲ್ಲಿ ನಿಷ್ಠೆಯುಳ್ಳವರೂ ಆಗಿ ಪರಮ ತತ್ತ್ವಗಳನ್ನು ವ್ಯಕ್ತಿಗೊಳಿಸಿರುವುದೂ, ವಿಶ್ವರೂಪವೂ, ಸರ್ವವ್ಯಾಪಿಯೂ ಮತ್ತು ಪರಮಾನಂದಸ್ವರೂಪವೂ ಆದ ಬ್ರಹ್ಮವಸ್ತುವನ್ನು ಭಜಿಸುವರು.

ಏಷಾ ವಿಮುಕ್ತಿಃ ಪರಮಾ ಮಮ ಸಾಯುಜ್ಯಮುತ್ತಮಮ್ ।
ನಿರ್ವಾಣಂ ಬ್ರಹ್ಮಣಾ ಚೈಕ್ಯಂ ಕೈವಲ್ಯಂ ಕವಯೋ ವಿದುಃ ॥ ೧೧ ॥

ತಸ್ಮಾದನಾದಿಮಧ್ಯಾಂತಂ ವಸ್ತ್ವೇಕಂ ಪರಮಂ ಶಿವಮ್ ।
ಸ ಈಶ್ವರೋ ಮಹಾದೇವಸ್ತಂ ವಿಜ್ಞಾಯ ಪ್ರಮುಚ್ಯತೇ ॥ ೧೨ ॥

ನ ತತ್ರ ಸೂರ್ಯಃ ಪ್ರತಿಭಾತೀಹ ಚಂದ್ರೋ
ನಕ್ಷತ್ರಾಣಾಂ ಗಣೋ ನೋತ ವಿದ್ಯುತ್ ।
ತದ್ಭಾಸಿತಂ ಹ್ಯಖಿಲಂ ಭಾತಿ ವಿಶ್ವ-
ಮತೀವ ಭಾನಮಮಲಂ ತದ್ವಿಭಾತಿ ॥ ೧೩ ॥

ವಿಶ್ವೋದಿತಂ ನಿಷ್ಕಲಂ ನಿರ್ವಿಕಲ್ಪಂ
ಶುದ್ಧಂ ಬೃಹತ್ಪರಮಂ ಯದ್ವಿಭಾತಿ ।

---

೧೧. ಹೀಗೆ ಶ್ರೇಷ್ಠವಾದ ಈ ಭಕ್ತಿಯೋಗವು ಉತ್ತಮವಾದ ನನ್ನ ಸಾಯುಜ್ಯ ಮುಕ್ತಿ-ಎಂದು ಪ್ರಸಿದ್ಧವಾಗಿರುವುದು. ಮತ್ತು ಪರಬ್ರಹ್ಮವಸ್ತುವಿನ ಐಕ್ಯನೆಂಬ ನಿರ್ವಾಣವನ್ನು ಕೈವಲ್ಯ ಮುಕ್ತಿ-ಎಂದು ಪ್ರಾಜ್ಞರು ತಿಳಿಯುವರು.

೧೨. ಆದುದರಿಂದ ಮಹಾದೇವನಾದ ಆ ಈಶ್ವರನು ಆದಿ-ಮಧ್ಯ-ಅಂತ ಗಳಿಂದ ವರ್ಜಿತವೂ, ಅದ್ವಿತೀಯವೂ, ಉತ್ತಮವೂ, ಮಂಗಳಕರವೂ ಆದ ಬ್ರಹ್ಮ ವಸ್ತುವಾಗಿರುವನು. ಆ ಈಶ್ವರನನ್ನು ತಿಳಿದ ಮಾನವನು ಮುಕ್ತನಾಗುವನು.

೧೩. ಆ ಬ್ರಹ್ಮವಸ್ತುವನ್ನು ಸೂರ್ಯ, ಚಂದ್ರ, ನಕ್ಷತ್ರಗಣ ಅಥವಾ ಮಿಂಚು ಎಂಬ ಯಾವ ಜ್ಯೋತಿಯೂ ಪ್ರಕಾಶಪಡಿಸಲಾರದು. ಸಮಸ್ತ ವಿಶ್ವವು ಬ್ರಹ್ಮನಿಂದ ಪ್ರಕಾಶಿತವಾಗಿ ಸ್ಫುರಿಸುತ್ತಿರುವುದು. ಮತ್ತು ಸಮಸ್ತ ವಸ್ತುಗಳು ಆ ಬ್ರಹ್ಮ ಪ್ರಕಾಶವನ್ನು ಅನುಸರಿಸಿ ಪ್ರಕಾಶಿಸುವುವು.

೧೪. ವಿಶ್ವದಲ್ಲಿ ಉದಯವಾಗಿರುವುದೂ, ನಿರವಯವವೂ, ವಿಕಲ್ಪಶೂನ್ಯವೂ, ಶುದ್ಧವೂ, ಮಹತ್ತೂ, ಶ್ರೇಷ್ಠವೂ ಆದ ಯಾವ ತತ್ತ್ವವು ಪ್ರಕಾಶಿಸುವುದೋ,

ಅತ್ರಾಂತರೇ ಬ್ರಹ್ಮವಿದೋಽಥ ನಿತ್ಯಂ
ಪಶ್ಯಂತಿ ತತ್ತ್ವಮಚಲಂ ಯತ್ಸ ಈಶಃ ॥ ೧೪ ॥

ನಿತ್ಯಾನಂದಮಮೃತಂ ಸತ್ಯರೂಪಂ
ಶುದ್ಧಂ ವದಂತಿ ಪುರುಷಂ ಸರ್ವವೇದಾಃ ।
ಪ್ರಾಣಾನಿತಿ ಪ್ರಾಣವಿನೇಶಿತಾರಂ
ಧ್ಯಾಯಂತಿ ವೇದ್ಯೈರಿತಿ ನಿಶ್ಚಿತಾರ್ಥಾಃ ॥ ೧೫ ॥

ನ ಭೂಮಿರಾಪೋ ನ ಮನೋ ನ ವಹ್ನಿಃ
ಪ್ರಾಣೋಽನಿಲೋ ಗಗನಂ ನೋತ ಬುದ್ಧಿಃ ।
ನ ಚೇತನೋಽನ್ಯತ್ ಪರಮಾಕಾಶಮಧ್ಯೇ
ವಿಭಾತಿ ದೇವಃ ಶಿವ ಏವ ಕೇವಲಃ ॥ ೧೬ ॥

---

ಅದರ ಸ್ವರೂಪದಲ್ಲಿ ನಿತ್ಯವೂ, ಸ್ಥಿರವೂ, ಆದ ಈಶ್ವರನನ್ನು ಬ್ರಹ್ಮಜ್ಞಾನಿಗಳು ಯಾವಾಗಲೂ ಸಾಕ್ಷಾತ್ಕರಿಸುತ್ತಾರೆ.

೧೫. ಸಮಸ್ತ ವೇದಗಳು ಪರಮಾತ್ಮನನ್ನು ನಿತ್ಯಾನಂದ, ಅಮೃತ, ಸತ್ಯರೂಪ, ಪವಿತ್ರ, ಪೂರ್ಣ, ಪುರುಷ ಎಂಬುದಾಗಿ ಶ್ಲಾಘಿಸುತ್ತವೆ. ವೇದಗಳಿಂದ ಈರೀತಿಯಾದ ತತ್ತ್ವ ನಿಶ್ಚಯವುಳ್ಳ ಯೋಗಿಗಳು ಈಶ್ವರನನ್ನು ಪ್ರಾಣರೂಪನನ್ನಾಗಿ ಓಂಕಾರದಲ್ಲಿ ಧ್ಯಾನಮಾಡುವರು.

೧೬. ಪರಮಾಕಾಶದ ಮಧ್ಯದಲ್ಲಿ ಪ್ರಕಾಶಿಸುವವನೂ, ಅದ್ವಿತೀಯನೂ, ಮಂಗಳಕರನೂ ಆದ ಪರಮಾತ್ಮನು ಭೂಮಿ ತತ್ತ್ವವಲ್ಲ, ಜಲವಲ್ಲ, ಮನಸ್ಸಲ್ಲ, ಅಗ್ನಿಯು ಅಲ್ಲ, ಪ್ರಾಣರೂಪವಾದ ವಾಯುವು ಅಲ್ಲ, ಬುದ್ಧಿಯು ಅಲ್ಲ, ಅಥವಾ ಮತ್ತೊಂದು ಚೇತನವಸ್ತುವಲ್ಲ.

ಇತ್ಯೇತದುಕ್ತಂ ಪರಮಂ ರಹಸ್ಯಂ
ಜ್ಞಾನಂ ಚೇದಂ ಸರ್ವವೇದೇಷು ಗೀತಮ್ ।
ಜಾನಾತಿ ಯೋಗೀ ವಿಜನೇऽಥ ದೇಶೇ
ಯುಂಜೀತ ಯೋಗಂ ಪ್ರಯತೋ ಹ್ಯಜಸ್ರಮ್ ॥ ೧೭ ॥

ಇತಿ ಶ್ರೀ ಕೂರ್ಮಪುರಾಣೇ ತ್ರಿಷಷ್ಟಿತಮೋऽಧ್ಯಾಯಃ.

---

೧೭. ಹೀಗೆ ಸಮಸ್ತ ವೇದಗಳಲ್ಲಿ ವರ್ಣಿಸಲ್ಪಟ್ಟ, ರಹಸ್ಯವೂ, ಉತ್ತಮವೂ ಆದ ಜ್ಞಾನಯೋಗವು ಉಪದೇಶಿಸಲ್ಪಟ್ಟಿದೆ. ಪವಿತ್ರನಾದ ಯೋಗಿಯು ನಿರ್ಜನ ಸ್ಥಾನದಲ್ಲಿ ಕುಳಿತು ನಿರಂತರವಾಗಿ ಯೋಗಾಭ್ಯಾಸದಲ್ಲಿ ನಿರತನಾಗಿ ಆ ಯೋಗ ಬಲದಿಂದ ಆತ್ಮವನ್ನು ಸಾಕ್ಷಾತ್ಕರಿಸುವನು.

( ಕೂರ್ಮಪುರಾಣದಲ್ಲಿ ಅರವತ್ತ ಮೂರನೆಯ ಅಧ್ಯಾಯವು ಮುಗಿದುದು. )

---

ಶ್ರೀಃ

# ಕೂರ್ಮಪುರಾಣಂ



## ಚತುಃಷಷ್ಟಿತಮೋಽಧ್ಯಾಯಃ

**ಈಶ್ವರ ಉವಾಚ :—**

**ಅತಃ ಪರಂ ಪ್ರವಕ್ಷ್ಯಾಮಿ ಯೋಗಂ ಪರಮದುರ್ಲಭಮ್ ।**
**ಯೇನಾತ್ಮಾನಂ ಪ್ರಪಶ್ಯಂತಿ ಭಾನುಮಂತಮಿವೇಶ್ವರಮ್ ॥ ೧ ॥**

**ಯೋಗಾಗ್ನಿರ್ದಹತೇ ಕ್ಷಿಪ್ರಮಶೇಷಂ ಪಾಪಪಂಜರಮ್ ।**
**ಪ್ರಸನ್ನಂ ಜಾಯತೇ ಜ್ಞಾನಂ ಸಾಕ್ಷಾನ್ನಿರ್ವಾಣಸಿದ್ಧಿದಮ್ ॥ ೨ ॥**

---

## ಅರವತ್ತನಾಲ್ಕನೆಯ ಅಧ್ಯಾಯವು

೧. ಈಶ್ವರನು ಹೀಗೆಂದು ಹೇಳಿದನು :—ಇನ್ನು ಮುಂದೆ ಅತ್ಯಂತ ದುರ್ಲಭವಾದ ಯೋಗಮಾಯೆಯನ್ನು ಉಪದೇಶಿಸುತ್ತೇನೆ. ಯೋಗಿಗಳು ಆ ಮಾರ್ಗದಿಂದ ಸೂರ್ಯನಂತೆ ಪರಮೇಶ್ವರನಾದ ಆತ್ಮವನ್ನು ಸಾಕ್ಷಾತ್ಕರಿಸುವರು.

೨. ಯೋಗಾಭ್ಯಾಸದಿಂದ ಸಂಪೂರ್ಣವಾದ ಪಾಪಗಳ ಪಂಜರವು ಕ್ಷಿಪ್ರದಲ್ಲಿಯೆ ಭಸ್ಮವಾಗುತ್ತದೆ. ಮತ್ತು ಪ್ರತ್ಯಕ್ಷವಾಗಿ ಮೋಕ್ಷಸಿದ್ಧಿಯನ್ನು ಕೊಡುವ ಜ್ಞಾನವು ಪ್ರಸನ್ನವಾಗುತ್ತದೆ.

ಯೋಗಾತ್ ಸಂಜಾಯತೇ ಜ್ಞಾನಂ ಜ್ಞಾನಾದ್ಯೋಗಃ ಪ್ರವರ್ತತೇ ।
ಯೋಗಜ್ಞಾನಾಭಿಯುಕ್ತಸ್ಯ ಪ್ರಸೀದತಿ ಮಹೇಶ್ವರಃ ॥ ೩ ॥

ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ನಿತ್ಯಮೇವ ಚ ।
ಯೇ ಯುಂಜಂತಿ ಮಹಾಯೋಗಂ ತೇ ವಿಜ್ಞೇಯಾ ಮಹೇಶ್ವರಾಃ ॥೪॥

ಯೋಗಸ್ತು ದ್ವಿವಿಧೋ ಜ್ಞೇಯೋ ಹ್ಯಭಾವಃ ಪ್ರಥಮೋ ಮತಃ ।
ಅಪರಸ್ತು ಮಹಾಯೋಗಃ ಸರ್ವಯೋಗೋತ್ತಮೋತ್ತಮಃ ॥ ೫ ॥

ಶೂನ್ಯಂ ಸರ್ವನಿರಾಭಾಸಂ ಸ್ವರೂಪಂ ಯತ್ರ ಚಿಂತ್ಯತೇ ।
ಅಭಾವಯೋಗಃ ಸ ಪ್ರೋಕ್ತೋ ಯೇನಾತ್ಮಾನಂ ಪ್ರಪಶ್ಯತಿ ॥ ೬ ॥

---

೩. ಯೋಗಬಲದಿಂದ ಜ್ಞಾನವು ಹುಟ್ಟುತ್ತದೆ. ಜ್ಞಾನದಿಂದ ಯೋಗಾಭ್ಯಾಸವು ವೃದ್ಧಿಹೊಂದುತ್ತದೆ. ಜ್ಞಾನ ಮತ್ತು ಯೋಗಗಳಿಂದ ಕೂಡಿದ ಪುರುಷನಲ್ಲಿ ಮಹೇಶ್ವರನು ಪ್ರಸನ್ನನಾಗುತ್ತಾನೆ.

೪. ಯಾವ ಮಾನವರು ಒಂದುಸಲ, ಎರಡುಸಲ, ಮೂರುಸಲ ಅಥವ ನಿರಂತರವಾಗಿ ಮಹಾ ಯೋಗಾಭ್ಯಾಸದಲ್ಲಿ ಲೀನರಾಗುವರೋ ; ಅವರು ಮಹೇಶ್ವರ ಸ್ವರೂಪರೆಂದು ತಿಳಿಯಬೇಕು.

೫. ಯೋಗವು ಸಾಮಾನ್ಯವಾಗಿ ಎರಡು ವಿಧವಾದುದೆಂದು ತಿಳಿಯಬೇಕು. ಇವುಗಳಲ್ಲಿ ಅಭಾವಯೋಗವು ಮೊದಲನೆಯದಾಗಿದೆ. ಮಹಾಯೋಗ ಎಂಬ ಮತ್ತೊಂದು ಯೋಗವು ಸಮಸ್ತ ಯೋಗಗಳಲ್ಲಿ ಉತ್ತಮೋತ್ತಮವಾದ ಯೋಗವಾಗಿದೆ.

೬. ಶೂನ್ಯವೂ, ಸರ್ವಾಭಾಸವರ್ಜಿತವೂ ಆದ ಸ್ವರೂಪವು ಯಾವ ಯೋಗದಲ್ಲಿ ಧ್ಯಾನಿಸಲ್ಪಡುವುದೋ ; ಅದು ಅಭಾವಯೋಗವೆಂದು ಕರೆಯಲ್ಪಟ್ಟಿದೆ. ಆ ಅಭಾವಯೋಗವು ಆತ್ಮ ದರ್ಶನಕ್ಕೆ ಸಾಧನವಾದುದು.

ಯತ್ರ ಪಶ್ಯತಿ ಚಾತ್ಮಾನಂ ನಿತ್ಯಾನಂದಂ ನಿರಂಜನಮ್ ।
ಮಯ್ಯೈಕ್ಯಂ ಸ ಮಯಾ ಯೋಗೋ ಭಾಷಿತಃ ಪರಮಃ ಸ್ವಯಮ್॥೭॥

ಯೇ ಚಾನ್ಯೇ ಯೋಗಿನಾಂ ಯೋಗಾಃ ಶ್ರೂಯಂತೇ ಗ್ರಂಥವಿಸ್ತರೇ ।
ಸರ್ವೇ ತೇ ಬ್ರಹ್ಮಯೋಗಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥೮॥

ಯತ್ರ ಸಾಕ್ಷಾತ್ ಪ್ರಪಶ್ಯಂತಿ ವಿಮುಕ್ತಾ ವಿಶ್ವಮೀಶ್ವರಮ್ ।
ಸರ್ವೇಷಾಮೇವ ಯೋಗಾನಾಂ ಸ ಯೋಗಃ ಪರಮೋ ಮತಃ ॥ ೯ ॥

ಸಹಸ್ರಶೋsಥ ಬಹುಶೋ ಯೇ ಚೇಶ್ವರಬಹಿಷ್ಕೃತಾಃ ।
ನ ತೇ ಪಶ್ಯಂತಿ ಮಾಮೇಕಂ ಯೋಗಿನೋ ಯತಮಾನಸಾಃ ॥ ೧೦ ॥

---

೭. ಯಾವ ಯೋಗದಲ್ಲಿ ಜೀವಾತ್ಮನಲ್ಲಿ ನಿತ್ಯ ಆನಂದರೂಪಿಯೂ, ನಿರ್ದುಷ್ಟವೂ ಆದ ಬ್ರಹ್ಮತತ್ವದ ಐಕ್ಯವನ್ನು ನೋಡುವರೋ ; ಆ ಯೋಗವು ನನ್ನಿಂದ ಉತ್ತಮವಾದ ಮಹಾ ಯೋಗವೆಂದು ಸಂಕೇತಿಸಲ್ಪಟ್ಟಿದೆ.

೮. ಯೋಗಿಗಳಿಗೆ ಸಮ್ಮತವಾದ ಯಾವ ಇತರ ಅನೇಕ ಯೋಗಗಳು ವಿಸ್ತಾರವಾದ ಗ್ರಂಥಗಳಲ್ಲಿ ಹೇಳಲ್ಪಟ್ಟಿವೆಯೋ ; ಆ ಸಮಸ್ತ ಯೋಗಗಳು ಬ್ರಹ್ಮ ಯೋಗದ ಹದಿನಾರನೆಯ ಒಂದು ಭಾಗದ ಮಹಿಮೆಯನ್ನು ಕೂಡ ಹೊಂದಿಲ್ಲ.

೯. ಯಾವ ಯೋಗದಲ್ಲಿ ಮುಕ್ತರಾದ ಜನರು ವಿಶ್ವವನ್ನು ಸಾಕ್ಷಾತ್ತಾಗಿ ಈಶ್ವರಸ್ವರೂಪವೆಂದು ಸಂದರ್ಶಿಸುವರೋ ; ಆ ಯೋಗವು ಇತರ ಸಮಸ್ತ ಯೋಗಗಳಲ್ಲಿ ಶ್ರೇಷ್ಠವಾದುದೆಂದು ನನ್ನ ಮತವು.

೧೦. ಈಶ್ವರನ ಭಾವನೆಯಿಂದ ಬಹಿಷ್ಕಾರಹೊಂದಿದ, ಜಿತೇಂದ್ರಿಯರಾದ, ಸಹಸ್ರ-ಲಕ್ಷ ಮುಂತಾದ ಅಧಿಕ ಸಂಖ್ಯೆಯ ಯೋಗಿಗಳು ಅದ್ವಿತೀಯನಾದ ನನ್ನನ್ನು ನೋಡಲು ಅರ್ಹರಾಗಿಲ್ಲ.

ಪ್ರಾಣಾಯಾಮಸ್ತಥಾ ಧ್ಯಾನಂ ಪ್ರತ್ಯಾಹಾರೋಽಥ ಧಾರಣಾ ।
ಸಮಾಧಿಶ್ಚ ಮುನಿಶ್ರೇಷ್ಠಾ ಯಮಶ್ಚ ನಿಯಮಾಸನೇ　　　॥ ೧೧ ॥

ಮಯ್ಯೇಕಚಿತ್ತತಾ ಯೋಗಃ ಪ್ರತ್ಯಂತರನಿರೋಧತಃ ।
ತತ್ಸಾಧನಾನಿ ಚಾನ್ಯಾನಿ ಯುಷ್ಮಾಕಂ ಕಥಿತಾನಿ ತು　　　॥ ೧೨ ॥

ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಾಪರಿಗ್ರಹೌ ।
ಯಮಾಃ ಸಂಕ್ಷೇಪತಃ ಪ್ರೋಕ್ತಾಶ್ಚಿತ್ತಶುದ್ಧಿಪ್ರದಾ ನೃಣಾಮ್　　॥ ೧೩ ॥

ಕರ್ಮಣಾ ಮನಸಾ ವಾಚಾ ಸರ್ವಭೂತೇಷು ಸರ್ವದಾ ।
ಅಕ್ಲೇಶಜನನಂ ಪ್ರೋಕ್ತಾ ತ್ವಹಿಂಸಾ ಪರಮರ್ಷಿಭಿಃ　　　॥ ೧೪ ॥

---

೧೧. ಮುನಿಶ್ರೇಷ್ಠರೇ ! ಯೋಗಾಭ್ಯಾಸದಲ್ಲಿ ಪ್ರಾಣಾಯಾಮ, ಧ್ಯಾನ ಪ್ರತ್ಯಾಹಾರ, ಧಾರಣೆ, ಸಮಾಧಿ, ಯಮ, ನಿಯಮ ಮತ್ತು ಆಸನಗಳೆಂಬ ಅಷ್ಟಾಂಗಗಳು ಸೇರಿಕೊಂಡಿವೆ.

೧೨. ಮುಖ್ಯವಾಗಿ ಬೇರೆವಿಧವಾದ ವೃತ್ತಿಗಳು ಹುಟ್ಟುವುದನ್ನು ತಡೆಗಟ್ಟಿ ನನ್ನಲ್ಲಿಯೇ ಸಂತತವಾಗಿ ಚಿತ್ತವನ್ನಿರಿಸುವುದು ಯೋಗವು. ಮಿಕ್ಕವುಗಳು ಅಂತಹ ಯೋಗಕ್ಕೆ ಸಾಧನವಾದುವುಗಳು. ಅವು ನಿಮಗೆ ಹೇಳಲ್ಪಟ್ಟಿವೆ.

೧೩. ಅಷ್ಟಾಂಗಗಳಲ್ಲಿ ಮೊದಲನೆಯ ಯಮ ಎಂಬುವುಗಳು ಅಹಿಂಸಾ-ಸತ್ಯ-ಅಸ್ತೇಯ-ಬ್ರಹ್ಮಚರ್ಯ ಮತ್ತು ಅಪರಿಗ್ರಹ ಎಂಬ ರೂಪಗಳಿಂದ ಆಚರಿಸಲ್ಪಟ್ಟುವುಗಳಾಗಿ ಚಿತ್ತಶುದ್ಧಿಯನ್ನು ಕೊಡುವುವೆಂದು ಹೇಳಲ್ಪಟ್ಟಿವೆ.

೧೪. ಕರ್ಮ, ಮನಸ್ಸು, ವಾಕ್ ಎಂಬ ತ್ರಿಕರಣಗಳಿಂದ ಸಮಸ್ತ ಪ್ರಾಣಿಗಳಲ್ಲಿ ಹಿಂಸೆಯನ್ನು ಯಾವಾಗಲೂ ಉಂಟುಮಾಡದಿರುವುದು ಅಹಿಂಸೆಯೆಂದು ಪರಮಮಹರ್ಷಿಗಳಿಂದ ಹೇಳಲ್ಪಟ್ಟಿದೆ.

ಅಹಿಂಸಾಯಾಃ ಪರೋ ಧರ್ಮೋ ನಾಸ್ತ್ಯಹಿಂಸಾಪರಂ ಸುಖಮ್ ।
ವಿಧಿನಾ ಯಾ ಭವೇದ್ಧಿಂಸಾ ತ್ವಹಿಂಸೈವ ಪ್ರಕೀರ್ತಿತಾ ॥ ೧೫ ॥

ಸತ್ಯೇನ ಸರ್ವಮಾಪ್ನೋತಿ ಸತ್ಯೇ ಸರ್ವಂ ಪ್ರತಿಷ್ಠಿತಮ್ ।
ಯಥಾರ್ಥಕಥನಾಚಾರಃ ಸತ್ಯಂ ಪ್ರೋಕ್ತಂ ದ್ವಿಜಾತಿಭಿಃ ॥ ೧೬ ॥

ಪರದ್ರವ್ಯಾಪಹರಣಂ ಚೌರ್ಯಾದಥ ಬಲೇನ ವಾ ।
ಸ್ತೇಯಂ ತಸ್ಯಾನಾಚರಣಾದಸ್ತೇಯಂ ಧರ್ಮಸಾಧನಮ್ ॥ ೧೭ ॥

ಕರ್ಮಣಾ ಮನಸಾ ವಾಚಾ ಸರ್ವಾವಸ್ಥಾಸು ಸರ್ವದಾ ।
ಸರ್ವತ್ರ ಮೈಥುನತ್ಯಾಗಂ ಬ್ರಹ್ಮಚರ್ಯಂ ಪ್ರಚಕ್ಷತೇ ॥ ೧೮ ॥

---

೧೫. ಇಂತಹ ಅಹಿಂಸೆಗಿಂತ ಹೆಚ್ಚಾದ ಧರ್ಮವು ಬೇರೊಂದಿಲ್ಲ. ಇಂತಹ ಅಹಿಂಸೆಯನ್ನು ಮೀರಿಸಿದ ಸುಖವು ಮತ್ತೊಂದಿಲ್ಲ. ಆದರೆ ವಿಧಿಸಮ್ಮತವಾಗಿ ಯಾವ ಹಿಂಸೆಯು ಆಚರಿಸಲ್ಪಡುವುದೋ ಅದು ಅಹಿಂಸೆಯೆಂದು ಕೀರ್ತಿಸಲ್ಪಟ್ಟಿದೆ.

೧೬. ಸತ್ಯದಿಂದ ಸಮಸ್ತ ಫಲಗಳನ್ನೂ ಹೊಂದಬಹುದು. ಸತ್ಯದಲ್ಲಿ ಸರ್ವವೂ ನೆಲೆಸಿರುವುದು. ಯಥಾರ್ಥವನ್ನು ನುಡಿಯುವ ಆಚರಣೆಯು ಸತ್ಯವೆಂದು ದ್ವಿಜರಿಂದ ಹೇಳಲ್ಪಟ್ಟಿದೆ.

೧೭. ಪರರ ದ್ರವ್ಯವನ್ನು ಚೌರ್ಯದಿಂದ ಅಥವ ವಿಕ್ರಮದಿಂದ ಅಪಹರಿಸುವುದು ಸ್ತೇಯವೆನಿಸುವುದು, ಅದನ್ನು ಬಿಡುವುದರಿಂದ ಮಾಡಿದ ಅಸ್ತೇಯವು ಉತ್ತಮವಾದ ಧರ್ಮಕ್ಕೆ ಸಾಧನವಾಗುವುದು.

೧೮. ಎಲ್ಲ ಅವಸ್ಥೆಗಳಲ್ಲಿಯೂ, ಎಲ್ಲ ದೇಶ-ಕಾಲಗಳಲ್ಲಿಯೂ, ಕರ್ಮ-ಮನಸ್ಸು-ವಾಕ್ ಎಂಬ ತ್ರಿಕರಣಪೂರ್ವಕವಾಗಿ ಮೈಥುನವನ್ನು ತ್ಯಾಗಮಾಡುವುದು ಬ್ರಹ್ಮಚರ್ಯವೆಂದು ಹೇಳುತ್ತಾರೆ.

ದ್ರವ್ಯಾಣಾಮಪ್ಯನಾದಾನಮಾಪದ್ಯಪಿ ತಥೇಚ್ಛಯಾ ।
ಅಪರಿಗ್ರಹಮಿತ್ಯಾಹುಸ್ತಂ ಪ್ರಯತ್ನೇನ ಪಾಲಯೇತ್ ॥ ೧೯ ॥

ತಪಃ ಸ್ವಾಧ್ಯಾಯಸಂತೋಷೌ ಶೌಚಮೀಶ್ವರಪೂಜನಮ್ ।
ಸಮಾಸಾನ್ನಿಯಮಾಃ ಪ್ರೋಕ್ತಾ ಯೋಗಸಿದ್ಧಿಪ್ರದಾಯಿನಃ ॥ ೨೦ ॥

ಉಪವಾಸಪರಾಕಾದಿಕೃಚ್ಛ್ರಚಾಂದ್ರಾಯಣಾದಿಭಿಃ ।
ಶರೀರಶೋಷಣಂ ಪ್ರಾಹುಸ್ತಾಪಸಾಸ್ತಪ ಉತ್ತಮಮ್ ॥ ೨೧ ॥

ವೇದಾಂತಶತರುದ್ರೀಯಪ್ರಣವಾದಿಜಪಂ ಬುಧಾಃ ।
ಸತ್ತ್ವಸಿದ್ಧಿಕರಂ ಪುಂಸಾಂ ಸ್ವಾಧ್ಯಾಯಂ ಪರಿಚಕ್ಷತೇ ॥ ೨೨ ॥

---

೧೯. ಆಪತ್ಕಾಲದಲ್ಲಿ ಕೂಡ ಸ್ವೇಚ್ಛೆಯಿಂದ ಆಯಾಯ ಉಪಕರಣ ದ್ರವ್ಯಗಳನ್ನು ತೆಗೆದುಕೊಳ್ಳದಿರುವುದು ಅಪರಿಗ್ರಹವೆಂದು ಹೇಳುತ್ತಾರೆ. ಆ ಅಪರಿಗ್ರಹವನ್ನು ಪ್ರಯತ್ನದಿಂದ ಪಾಲಿಸಬೇಕು.

೨೦. ತಪಸ್ಸು-ಸ್ವಾಧ್ಯಾಯ-ಸಂತೋಷ-ಶೌಚ ಮತ್ತು ಈಶ್ವರಪೂಜೆಯೆಂದು ಯೋಗದ ಸಿದ್ಧಿಯನ್ನುಂಟುಮಾಡುವ ಐದುಬಗೆಯಾದ ನಿಯಮಗಳು ಆದಿಯಲ್ಲಿ ಸಂಗ್ರಹವಾಗಿ ಹೇಳಲ್ಪಟ್ಟಿವೆ.

೨೧. ಇವುಗಳಲ್ಲಿ ಉಪವಾಸ, ಪರಾಕ, ಕೃಚ್ಛ್ರ, ಚಾಂದ್ರಾಯಣ ಮುಂತಾದ ಪ್ರಾಯಶ್ಚಿತ್ತಗಳಿಂದ ಮಾಡುವ ಶರೀರ ಶೋಷಣೆಯನ್ನು ತಪಸ್ವಿಗಳು ಉತ್ತಮವಾದ ತಪಸ್ಸೆಂದು ಹೇಳುವರು.

೨೨. ವೇದಾಂತ, ಶತರುದ್ರಿಯಸೂಕ್ತ, ಓಂಕಾರ- ಮುಂತಾದ ಮಹಾಮಂತ್ರಗಳ ಜಪವನ್ನು ಮಾನವರಿಗೆ ಚಿತ್ತಶುದ್ಧಿಯನ್ನುಂಟುಮಾಡುವ ಸ್ವಾಧ್ಯಾಯ ಯೋಗವೆಂದು ಪಂಡಿತರು ಹೇಳುತ್ತಾರೆ

ಸ್ವಾಧ್ಯಾಯಸ್ಯ ತ್ರಯೋ ಭೇದಾ ವಾಚಿಕೋಪಾಂಶುಮಾನಸಾಃ ।
ಉತ್ತರೋತ್ತರವೈಶಿಷ್ಟ್ಯಂ ಪ್ರಾಹುರ್ವೇದಾರ್ಥವೇದಿನಃ ॥ ೨೩ ॥

ಯಃ ಶಬ್ದಬೋಧಜನನಃ ಪರೇಷಾಂ ಶೃಣ್ವತಾಂ ಸ್ಫುಟಮ್ ।
ಸ್ವಾಧ್ಯಾಯೋ ವಾಚಿಕಃ ಪ್ರೋಕ್ತ ಉಪಾಂಶೋರಥ ಲಕ್ಷಣಮ್ ॥೨೪॥

ಓಷ್ಠಯೋಃ ಸ್ಪಂದಮಾತ್ರೇಣ ಪರಸ್ಯಾಶಬ್ದಬೋಧಕಮ್ ।
ಉಪಾಂಶುರೇಷ ನಿರ್ದಿಷ್ಟಃ ಸಾಧ್ವಸೌ ವಾಚಿಕಾಜ್ಜಪಾತ್ ॥ ೨೫ ॥

ಯತ್ಪದಾಕ್ಷರಸಂಗತ್ಯಾ ಪರಿಸ್ಪಂದನವರ್ಜಿತಮ್ ।
ಚಿಂತನಂ ಸರ್ವಶಬ್ದಾನಾಂ ಮಾನಸಂ ತಜ್ಜಪಂ ವಿದುಃ ॥ ೨೬ ॥

---

೨೩. ಈ ಸ್ವಾಧ್ಯಾಯ ಜಪದಲ್ಲಿ ವಾಚಿಕ-ಉಪಾಂಶು ಮತ್ತು ಮಾನಸ ಎಂದು ಮೂರು ಭೇದಗಳಿರುವುವು. ಅವುಗಳಲ್ಲಿ ಮುಂದು ಮುಂದಿನ ಪ್ರಯೋಗವು ಹಿಂದಿನ ವಿಧಾನಕ್ಕಿಂತ ಪ್ರಶಸ್ತವಾದುದೆಂದು ವೇದಾರ್ಥಜ್ಞರು ಹೇಳುತ್ತಾರೆ.

೨೪. ಯಾವ ಪ್ರಯೋಗವು ಶ್ರವಣಮಾಡುವ ಬೇರೊಬ್ಬರಿಗೆ ಶಬ್ದ ಜ್ಞಾನವನ್ನು ಸ್ಫುಟವಾಗಿ ಉಂಟುಮಾಡುವುದೋ, ಅದು ವಾಚಿಕಸ್ವಾಧ್ಯಾಯವೆಂದು ಹೇಳಲ್ಪಟ್ಟಿದೆ. ಮುಂದೆ ಉಪಾಂಶು ಜಪದ ಲಕ್ಷಣವನ್ನು ಹೇಳುತ್ತೇನೆ.

೨೫. ತುಟಿಗಳ ಚಲನಮಾತ್ರದಿಂದ ಮತ್ತೊಬ್ಬನಿಗೆ ಶಬ್ದಸ್ವರೂಪವು ತಿಳಿಯದಂತೆ ಮಂತ್ರವನ್ನು ಉಚ್ಚಾರಿಸುವ ಪ್ರಯೋಗವು ಉಪಾಂಶು ಎಂದು ನಿರ್ದೇಶಿಸಲ್ಪಟ್ಟಿದೆ. ಇದು ವಾಚಿಕ ಜಪಕ್ಕಿಂತ ಉತ್ತಮವಾದುದು.

೨೬. ಪದ-ಅಕ್ಷರಗಳ ಸಂಗತಿಯಿಂದ ತುಟಿಗಳ ಚಲನವು ಇಲ್ಲದೆ ಸಮಸ್ತ ಶಬ್ದಗಳನ್ನೂ ಚಿಂತಿಸುವುದು ಮಾನಸ ಜಪವೆಂದು ಪ್ರಾಜ್ಞರು ತಿಳಿದಿರುವರು.

**ಯದೃಚ್ಛಾಲಾಭತೋ ವಿತ್ತಮಲಂ ಪುಂಸೋ ಭವೇದಿತಿ ।**
**ಪ್ರಾಶಸ್ತ್ಯಮೃಷಯಃ ಪ್ರಾಹುಃ ಸಂತೋಷಂ ಸುಖಲಕ್ಷಣಮ್ ॥ ೨೭ ॥**

**ಬಾಹ್ಯಮಾಭ್ಯಂತರಂ ಶೌಚಂ ದ್ವಿಧಾ ಪ್ರೋಕ್ತಂ ದ್ವಿಜೋತ್ತಮಾಃ ।**
**ಮೃಜ್ಜಲಾಭ್ಯಾಂ ಸ್ಮೃತಂ ಬಾಹ್ಯಂ ಮನಃಶುದ್ಧಿರಥಾಂತರಮ್ ॥ ೨೮ ॥**

**ಸ್ತುತಿಸ್ಮರಣಪೂಜಾಭಿರ್ವಾಙ್ಮನಃಕಾಯಕರ್ಮಭಿಃ ।**
**ಸುನಿಶ್ಚಲಾ ಶಿವೇ ಭಕ್ತಿರೇತದೀಶಸ್ಯ ಪೂಜನಮ್ ॥ ೨೯ ॥**

**ಯಮಾಶ್ಚ ನಿಯಮಾಃ ಪ್ರೋಕ್ತಾಃ ಪ್ರಾಣಾಯಾಮಾನ್ನಿಬೋಧತ ।**
**ಪ್ರಾಣಃ ಸ್ವದೇಹಜೋ ವಾಯುರಾಯಾಮಸ್ತನ್ನಿರೋಧನಮ್ ॥ ೩೦ ॥**

---

೨೭. ಆಕಸ್ಮಿಕವಾದ ಲಾಭದಿಂದ ದೊರೆತ ವಿತ್ತವು ಪುರುಷನಿಗೆ ಸಂಪೂರ್ಣವಾಗಿ ಸಾಕೆಂಬ ಪ್ರಶಸ್ತವೆನಿಸಿದ ತೃಪ್ತಿಯನ್ನು ಋಷಿಗಳು ಸುಖಸಾಧನವಾದ ಸಂತೋಷವೆಂದು ಕರೆಯುವರು.

೨೮. ದ್ವಿಜಶ್ರೇಷ್ಠರೇ ! ಶೌಚವು ಬಾಹ್ಯಶೌಚ, ಆಭ್ಯಂತರಶೌಚವೆಂದು ಎರಡು ವಿಧವಾಗಿದೆ. ಮೃತ್ತಿಕೆ-ಜಲಗಳಿಂದ ಉಂಟಾಗುವ ಶೌಚವು ಬಾಹ್ಯವೆಂದು ಸ್ಮರಿಸಲ್ಪಟ್ಟಿದೆ. ಚಿತ್ತಶುದ್ಧಿಯು ಆಭ್ಯಂತರ ಶೌಚವೆನಿಸುವುದು.

೨೯. ವಾಕ್-ಮನಸ್ಸು ಮತ್ತು ದೇಹಗಳ ವ್ಯಾಪಾರಗಳಿಂದ ನೆರವೇರಿಸುವ ಸ್ತೋತ್ರ, ಧ್ಯಾನ ಮತ್ತು ಪೂಜೆಗಳ ಕ್ರಮದಿಂದ ಈಶ್ವರನಲ್ಲಿ ನಿಶ್ಚಲವಾಗಿ ಭಕ್ತಿಯನ್ನಿಡುವುದು ಈಶ್ವರ ಪೂಜಾಯೋಗವೆಂದು ತಿಳಿಯಬೇಕು.

೩೦. ಹೀಗೆ ಯಮ ನಿಯಮಗಳು ಹಿಂದೆ ಹೇಳಲ್ಪಟ್ಟಿವೆ. ಈಗ ಪ್ರಾಣಾಯಾಮವನ್ನು ಕೇಳಿರಿ. ತನ್ನ ದೇಹದಲ್ಲಿ ಸಂಚರಿಸುವ ವಾಯುವೇ ಪ್ರಾಣವು. ಅದನ್ನು ನಿರೋಧಿಸುವುದೇ ಪ್ರಾಣಗಳ ಆಯಾಮವು.

ಉತ್ತಮಾಧಮಮಧ್ಯತ್ವಾತ್ತ್ರಿಧಾಯಂ ಪ್ರತಿಪಾದಿತಃ ।
ಯ ಏವ ದ್ವಿವಿಧಃ ಪ್ರೋಕ್ತಃ ಸಗರ್ಭೋಽಗರ್ಭ ಏವ ಚ ॥ ೩೧ ॥

ಮಾತ್ರಾದ್ವಾದಶಕೋ ಮಂದಶ್ಚತುರ್ವಿಂಶತಿಮಾತ್ರಕಃ ।
ಮಧ್ಯಮಃ ಪ್ರಾಣಸಂರೋಧಃ ಷಟ್ತ್ರಿಂಶನ್ಮಾತ್ರಿಕೋಽಂತಕಃ ॥ ೩೨ ॥

ಯಃ ಸ್ವೇದಕಂಪನೋಚ್ಛ್ವಾಸಜನಕಸ್ತು ಯಥಾಕ್ರಮಮ್ ।
ಸಂಯೋಗಶ್ಚ ಮನುಷ್ಯಾಣಾಮಾನಂದಾಚ್ಚೋತ್ತಮೋತ್ತಮಃ ॥ ೩೩ ॥

ಸುನಘಾಖ್ಯಂ ಹಿ ತಂ ಯೋಗಂ ಸಗರ್ಭವಿಜಯಂ ಬುಧಾಃ ।
ಏತದ್ವೈ ಯೋಗಿನಾಂ ಪ್ರಾಹುಃ ಪ್ರಾಣಾಯಾಮಸ್ಯ ಲಕ್ಷಣಮ್ ॥೩೪॥

---

೩೧. ಈ ಪ್ರಾಣಾಯಾಮವು ಉತ್ತಮ, ಅಧಮ ಮತ್ತು ಮಧ್ಯಮವೆಂದು ಮೂರುವಿಧವಾಗಿ ನಿರೂಪಿಸಲ್ಪಟ್ಟಿದೆ. ಮತ್ತು ಸಗರ್ಭ-ಅಗರ್ಭವೆಂದು ಮತ್ತೊಂದು ರೀತಿಯಿಂದ ಪ್ರಾಣಾಯಾಮವು ಎರಡಾಗಿ ವಿಭಾಗಿಸಲ್ಪಟ್ಟಿದೆ.

೩೨. ಹನ್ನೆರಡು ಮಾತ್ರಾ ಕಾಲದ ಪ್ರಾಣಾಯಾಮವು ಮಂದವೆಂದೂ, ಇಪ್ಪತ್ತನಾಲ್ಕು ಮಾತ್ರಾ ಕಾಲದ ಪ್ರಾಣನಿರೋಧವು ಮಧ್ಯಮವೆಂದೂ, ಹಾಗು ಮೂವತ್ತಾರು ಮಾತ್ರಾ ಕಾಲದ ಪ್ರಾಣನಿರೋಧವು ಉತ್ತಮವೆಂದೂ ಹೇಳಲ್ಪಟ್ಟಿದೆ.

೩೩. ಈ ಪ್ರಾಣಾಯಾಮವು ಕ್ರಮವಾಗಿ ಅಧಮ, ಮಧ್ಯಮ, ಉತ್ತಮ ಭಾವಗಳಿಂದ ಬೆವರು, ಕಂಪ ಮತ್ತು ಉಚ್ಛ್ವಾಸಗಳನ್ನು ಉಂಟುಮಾಡುವುದು. ಮನುಷ್ಯನಿಗೆ ಪ್ರಾಣಾಯಾಮ ಯೋಗವು ಆನಂದ ಪ್ರಾಪ್ತಿಗೆ ಸರ್ವೋತ್ತಮವಾದ ಸಾಧನವು.

೩೪. ಸಗರ್ಭಪ್ರಾಣಾಯಾಮವನ್ನು ಜಯಿಸಿ ಹೊಂದುವ ಉತ್ತಮ ಪ್ರಾಣಾಯಾಮವನ್ನು ಸುನಘ ಎಂದು ಪಂಡಿತರು ಹೇಳುತ್ತಾರೆ. ಹೀಗೆ ಯೋಗಿಗಳು ಆಚರಿಸುವ ಪ್ರಾಣಾಯಾಮದ ಲಕ್ಷಣವನ್ನು ಪ್ರಾಜ್ಞರು ಹೇಳುತ್ತಾರೆ.

ಸವ್ಯಾಹೃತಿಂ ಸಪ್ರಣವಾಂ ಗಾಯತ್ರೀಂ ಶಿರಸಾ ಸಹ ।
ತ್ರಿರ್ಜಪೇದಾಯತಪ್ರಾಣಃ ಪ್ರಾಣಾಯಾಮೋಽಥ ನಾಮತಃ ॥ ೩೫ ॥

ರೇಚಕಃ ಪೂರಕಶ್ಚೈವ ಪ್ರಾಣಾಯಾಮೋಽಥ ಕುಂಭಕಃ ।
ಪ್ರೋಚ್ಯತೇ ಸರ್ವಶಾಸ್ತ್ರೇಷು ಯೋಗಿಭಿರ್ಯತಮಾನಸೈಃ ॥ ೩೬ ॥

ರೇಚಕೋ ಬಾಹ್ಯನಿಶ್ವಾಸಃ ಪೂರಕಸ್ತನ್ನಿರೋಧನಃ ।
ಸಾಮ್ಯೇನ ಸಂಸ್ಥಿತಿರ್ಯಾ ಸಾ ಕುಂಭಕಃ ಪರಿಗೀಯತೇ ॥ ೩೭ ॥

ಇಂದ್ರಿಯಾಣಾಂ ವಿಚರತಾಂ ವಿಷಯೇಷು ಸ್ವಭಾವತಃ ।
ನಿಗ್ರಹಃ ಪ್ರೋಚ್ಯತೇ ಸದ್ಭಿಃ ಪ್ರತ್ಯಾಹಾರಸ್ತು ಸತ್ತಮಾಃ ॥ ೩೮ ॥

---

೩೫. ವ್ಯಾಹೃತಿಮಂತ್ರ, ಓಂಕಾರ, ಶಿರೋಮಂತ್ರಗಳಿಂದ ಕೂಡಿ ಗಾಯತ್ರೀ ಮಂತ್ರವನ್ನು ಪ್ರಾಣನಿರೋಧಪೂರ್ವಕವಾಗಿ ಮೂರು ಸಲ ಜಪ ಮಾಡುವುದು ಪ್ರಾಣಾಯಾಮವೆಂಬ ಸಂಜ್ಞೆಯಿಂದ ಕರೆಯಲ್ಪಟ್ಟಿದೆ.

೩೬. ನಿಗ್ರಹಿಸಲ್ಪಟ್ಟ ಮಾನಸವುಳ್ಳ ಯೋಗಿಗಳಿಂದ ಸರ್ವಶಾಸ್ತ್ರಗಳಲ್ಲಿಯೂ ಪ್ರಾಣಾಯಾಮವು ರೇಚಕ, ಪೂರಕ ಮತ್ತು ಕುಂಭಕವೆಂದು ಮೂರುವಿಧವಾಗಿ ವರ್ಣಿಸಲ್ಪಟ್ಟಿದೆ.

೩೭. ಹೊರಗೆ ವಾಯುವನ್ನು ನಿಶ್ವಾಸರೂಪವಾಗಿ ಬಿಡುವುದು ರೇಚಕವು. ಅದನ್ನು ತಡೆದು ವಾಯುವನ್ನು ಒಳಗೆ ಎಳೆಯುವುದು ಪೂರಕವು. ಸಾಮ್ಯ ಸ್ಥಿತಿಯಿಂದ ಶ್ವಾಸನಿಶ್ವಾಸಗಳಿಲ್ಲದೆ ಪ್ರಾಣವನ್ನು ನಿರೋಧಿಸುವುದು ಕುಂಭಕ ಪ್ರಾಣಾಯಾಮವೆಂದು ಹೇಳಲ್ಪಡುತ್ತದೆ.

೩೮. ಸಾಧುಶ್ರೇಷ್ಠರೇ! ಸ್ವಾಭಾವಿಕವಾಗಿ ವಿಷಯಗಳಲ್ಲಿ ಸಂಚರಿಸುವ ಶೀಲವುಳ್ಳ ಇಂದ್ರಿಯಗಳನ್ನು ನಿಗ್ರಹಿಸುವುದು ಪ್ರತ್ಯಾಹಾರವೆಂದು ಸಾಧುಗಳಿಂದ ಕರೆಯಲ್ಪಟ್ಟಿದೆ.

ಹೃತ್ಪುಂಡರೀಕೇ ನಾಭ್ಯಾಂ ವಾ ಮೂರ್ಧ್ನಿ ಪರ್ವಸು ಮಸ್ತಕೇ ।
ಏವಮಾದಿಷು ದೇಶೇಷು ಧಾರಣಾ ಚಿತ್ತಬಂಧನಮ್ ॥ ೩೯ ॥

ದೇಶಾವಸ್ಥಿತಿಮಾಲಂಬ್ಯ ಊರ್ಧ್ವಗಂ ಯಾ ವೃತ್ತಿಸಂತತಿಃ ।
ಪ್ರತ್ಯಂತರೈರಸೃಷ್ಟಾ ಯಾ ತದ್ಧ್ಯಾನಂ ಸೂರಯೋ ವಿದುಃ ॥ ೪೦ ॥

ಏಕಾಕಾರಃ ಸಮಾಧಿಃ ಸ್ಯಾದ್ದೇಶಾಲಂಬನವರ್ಜಿತಃ ।
ಪ್ರತ್ಯಯೋ ಹ್ಯರ್ಥಮಾತ್ರೇಣ ಯೋಗಶಾಸನಮುತ್ತಮಮ್ ॥ ೪೧ ॥

ಧಾರಣಾ ದ್ವಾದಶಾಯಾಮಾ ಧ್ಯಾನಂ ದ್ವಾದಶ ಧಾರಣಾಃ ।
ಧ್ಯಾನಂ ದ್ವಾದಶಕಂ ಯಾವತ್ ಸಮಾಧಿರಭಿಧೀಯತೇ ॥ ೪೨ ॥

---

೩೯. ಹೃದಯಪುಂಡರೀಕ-ನಾಭಿ-ಶಿರಸ್ಸು-ಪರ್ವ ಅಥವಾ ಬ್ರಹ್ಮರಂಧ್ರ ಮುಂತಾದ ಉತ್ತಮಾವಯವಗಳಲ್ಲಿ ಚಿತ್ತವನ್ನು ಸ್ಥಿರವಾಗಿ ಇರಿಸುವುದು ಧಾರಣಾ ಯೋಗವೆಂದು ಪ್ರಸಿದ್ಧವಾಗಿದೆ.

೪೦. ಒಂದು ವಿಷಯದಲ್ಲಿ ಚಿತ್ತದ ಸ್ಥಿತಿಯನ್ನು ಅವಲಂಬಿಸಿ ಬೇರೊಂದು ವೃತ್ತಿಗಳ ಸಂಪರ್ಕವಿಲ್ಲದೆ ಪ್ರವಾಹವಾಗಿ ಹುಟ್ಟುವ ಒಂದೇ ವಿಷಯದ ವೃತ್ತಿ ಸಂತತಿಯನ್ನು ಧ್ಯಾನವೆಂದು ವಿದ್ವಾಂಸರು ತಿಳಿದಿರುವರು.

೪೧. ಒಂದು ವಿಷಯದ ಆಲಂಬನವಿಲ್ಲದೆ ಅರ್ಥಮಾತ್ರರೂಪವಾಗಿ ಏಕಾಕಾರ ವಾದ ಚಿತ್ತವೃತ್ತಿ ಪ್ರವಾಹವು ಸಮಾಧಿಯು-ಎಂಬುದು ಉತ್ತಮವಾದ ಯೋಗಶಾಸ್ತ್ರ ಶಾಸನವಾಗಿದೆ.

೪೨. ಹನ್ನೆರಡು ಪ್ರಾಣಾಯಾಮಗಳಿಗಿಂತ ಅಷ್ಟುಕಾಲದ ಧಾರಣೆಯೂ, ಅಂತಹ ಹನ್ನೆರಡು ಧಾರಣೆಗಳನ್ನು ವ್ಯಾಪಿಸುವ ಧ್ಯಾನವೂ ಮತ್ತು ಹನ್ನೆರಡು ಧ್ಯಾನಗಳನ್ನು ವ್ಯಾಪಿಸಿರುವ ಸಮಾಧಿಯೂ ಶ್ರೇಷ್ಠವೆಂದು ಹೇಳಲ್ಪಡುತ್ತವೆ.

ಆಸನಂ ಸ್ವಸ್ತಿಕಂ ಪ್ರೋಕ್ತಂ ಪದ್ಮಮರ್ಧಾಸನಂ ತಥಾ ।
ಸಾಧನಾನಾಂ ಚ ಸರ್ವೇಷಾಮೇತತ್ ಸಾಧನಮುತ್ತಮಮ್ ॥ ೪೩ ॥

ಊರ್ವೋರುಪರಿ ವಿಪ್ರೇಂದ್ರಾಃ ಕೃತ್ವಾ ಪಾದತಲೇ ಉಭೇ ।
ಸಮಾಸೀನಾತ್ಮನಃ ಪದ್ಮಮೇತದಾಸನಮುತ್ತಮಮ್ ॥ ೪೪ ॥

ಉಭೇ ಕೃತ್ವಾ ಪಾದತಲೇ ಜಾನೂರ್ವೋರಂತರೇಣ ಹಿ ।
ಸಮಾಸೀನಾತ್ಮನಃ ಪ್ರೋಕ್ತಮಾಸನಂ ಸ್ವಸ್ತಿಕಂ ಪರಮ್ ॥ ೪೫ ॥

ಏಕಂ ಪಾದಮಥೈಕಸ್ಮಿನ್ ವಿಷ್ಟಭ್ಯೋರಸಿ ಸತ್ತಮಾಃ ।
ಆಸೀನಾರ್ಧಾಸನಮಿದಂ ಯೋಗಸಾಧನಮುತ್ತಮಮ್ ॥ ೪೬ ॥

---

೪೩. ಆಸನವು ಸ್ವಸ್ತಿಕಾಸನ, ಪದ್ಮಾಸನ ಮತ್ತು ಅರ್ಧಾಸನವೆಂದು ವಿವಿಧವಾಗಿ ಹೇಳಲ್ಪಟ್ಟಿದೆ. ಈ ಆಸನವು ಎಲ್ಲ ಸಾಧನಗಳಿಗಿಂತ ಉತ್ತಮವಾದ ಸಾಧನವು.

೪೪. ವಿಪ್ರೇಂದ್ರರೆ! ತೊಡೆಗಳ ಮೇಲೆ ಎರಡು ಪಾದಗಳನ್ನು ಇಟ್ಟು ಕುಳಿತಿರುವ ಮನುಷ್ಯನ ಆಸನವು ಉತ್ತಮವಾದ ಪದ್ಮಾಸನವೆಂದು ಹೇಳಲ್ಪಟ್ಟಿದೆ.

೪೫. ಎರಡು ಪಾದತಲಗಳನ್ನು ಮಂಡಿ ಮತ್ತು ತೊಡೆಗಳ ಮಧ್ಯದಲ್ಲಿಟ್ಟು ಕೊಂಡು ಕುಳಿತುಕೊಂಡಿರುವ ಮಾನವನ ಆಸನವು ಸರ್ವೋತ್ತಮವಾದ ಸ್ವಸ್ತಿಕಾಸನವೆಂದು ಕರೆಯಲ್ಪಟ್ಟಿದೆ.

೪೬. ಸಾಧುಶ್ರೇಷ್ಠರೇ! ಒಂದು ಪಾದವನ್ನು ಒಂದು ಭಾಗದ ಎದೆಯಲ್ಲಿ ಒತ್ತಿಕೊಂಡು ಕುಳಿತಿರುವ ಮಾನವನ ಆ ಆಸನವು ಉತ್ತಮವೂ, ಯೋಗಕ್ಕೆ ಸಾಧನವೂ ಆದ ಅರ್ಧಾಸನವೆಂದು ಕರೆಯಲ್ಪಟ್ಟಿದೆ.

ಅದೇಶಕಾಲೇ ಯೋಗಸ್ಯ ದರ್ಶನಂ ನ ಹಿ ವಿದ್ಯತೇ ।
ಅಗ್ನ್ಯಭ್ಯಾಶೇ ಜಲೇ ವಾಪಿ ಶುಷ್ಕಪರ್ಣಚಯೇ ತಥಾ ॥ ೪೭ ॥

ಜಂತುವ್ಯಾಪ್ತೇ ಶ್ಮಶಾನೇ ಚ ಜೀರ್ಣಗೋಷ್ಠೇ ಚತುಷ್ಪಥೇ ।
ಸಶಬ್ದೇ ಸಂಚಯೇ ವಾಪಿ ಚೈತ್ಯವಲ್ಮೀಕಸಂಚಯೇ ॥ ೪೮ ॥

ಅಶುಭೇ ದುರ್ಜನಾಕ್ರಾಂತೇ ಮಶಕಾದಿಸಮನ್ವಿತೇ ।
ನಾಚರೇದ್ದೇಹಬಾಧೇ ವಾ ದೌರ್ಮನಸ್ಯಾದಿಸಂಭವೇ ॥ ೪೯ ॥

ಸುಗುಪ್ತೇ ಸುಶುಭೇ ದೇಶೇ ಗುಹಾಯಾಂ ಪರ್ವತಸ್ಯ ಚ ।
ನದ್ಯಾಸ್ತೀರೇ ಪುಣ್ಯದೇಶೇ ದೇವತಾಯತನೇ ತಥಾ ॥ ೫೦ ॥

---

೪೭. ಅನುಚಿತವಾದ ದೇಶ-ಕಾಲಗಳಲ್ಲಿ ಯೋಗಾಭ್ಯಾಸದ ಸಿದ್ಧಿದರ್ಶನವು ಉಂಟಾಗುವುದಿಲ್ಲ. ಆದ್ದರಿಂದ ಅಗ್ನಿಯ ಸಮೀಪದಲ್ಲಿಯೂ, ನೀರಿನಲ್ಲಿಯೂ ಒಣಗಿದ ಎಲೆಗಳ ರಾಶಿಯಲ್ಲಿಯೂ ಯೋಗಾಭ್ಯಾಸವನ್ನು ಮಾಡಬಾರದು.

೪೮. ಹಾಗೂ ಪ್ರಾಣಿಗಳಿಂದ ನಿಬಿಡವಾದ ಸ್ಥಳದಲ್ಲಿಯೂ, ಶ್ಮಶಾನ ಸ್ಥಳದಲ್ಲಿಯೂ, ಪಾಳುಬಿದ್ದ ಗೋಶಾಲೆಯಲ್ಲಿಯೂ, ಮಾರ್ಗದ ಚೌಕದಲ್ಲಿಯೂ, ಅತಿ ಶಬ್ದಗಳಿಂದ ಕೂಡಿದ ಸ್ಥಳದಲ್ಲಿಯೂ, ಭೀತಿಪ್ರದೇಶದಲ್ಲಿಯೂ, ಶೂನ್ಯಾಲಯದಲ್ಲಿಯೂ ಮತ್ತು ಹುತ್ತಗಳ ಪ್ರದೇಶದಲ್ಲಿಯೂ ಯೋಗಾಭ್ಯಾಸಮಾಡಬಾರದು.

೪೯. ಮತ್ತು ಅಶುಭಸ್ಥಳದಲ್ಲಿಯೂ, ದುರ್ಜನರಿಂದ ಕೂಡಿದ ದೇಶದಲ್ಲಿಯೂ, ನೊಣ ಮುಂತಾದ ಪ್ರಾಣಿಗಳುಳ್ಳ ಸ್ಥಳದಲ್ಲಿಯೂ ಅಥವಾ ದೌರ್ಮನಸ್ಯ-ದೇಹಪೀಡೆಗಳುಂಟಾಗುವ ಸ್ಥಳದಲ್ಲಿಯೂ ಯೋಗಾಭ್ಯಾಸವನ್ನು ಬಿಡಬೇಕು.

೫೦. ಆದ್ದರಿಂದ ಸುರಕ್ಷಿತವೂ, ಸುಮಂಗಳವೂ ಆದ ಪರ್ವತ-ಗುಹೆ-ನದೀತೀರ-ಪವಿತ್ರಸ್ಥಳ ಅಥವಾ ದೇವಾಲಯ ಮುಂತಾದ ಯೋಗ್ಯವಾದ ಪ್ರದೇಶಗಳಲ್ಲಿ ಯೋಗಾಭ್ಯಾಸವನ್ನು ಆಚರಿಸಬೇಕು.

ಗೃಹೇ ವಾ ಸುಶುಭೇ ದೇಶೇ ನಿರ್ಜನೇ ಜಂತುವರ್ಜಿತೇ ।
ಯುಂಜೀತ ಯೋಗಂ ಸತತಮಾತ್ಮಾನಂ ತತ್ಪರಾಯಣಃ ॥ ೫೧ ॥

ನಮಸ್ಕೃತ್ಯಾಥ ಯೋಗೀಂದ್ರಾಞ್ಛಿಷ್ಯಾಂಶ್ಚೈವ ವಿನಾಯಕಮ್ ।
ಗುರುಂ ಚೈವ ಚ ಮಾಂ ಯೋಗೀ ಯುಂಜೀತ ಸುಸಮಾಹಿತಃ ॥ ೫೨ ॥

ಆಸನಂ ಸ್ವಸ್ತಿಕಂ ಬದ್ಧ್ವಾ ಪದ್ಮಮರ್ಧಮಥಾಪಿ ವಾ ।
ನಾಸಿಕಾಗ್ರೇ ಸಮಾಂ ದೃಷ್ಟಿಮೀಷದುನ್ಮೀಲಿತೇಕ್ಷಣಃ ॥ ೫೩ ॥

ಕೃತ್ವಾಥ ನಿರ್ಭಯಃ ಶಾಂತಸ್ತ್ಯಕ್ತ್ವಾ ಮಾಯಾಮಯಂ ಜಗತ್ ।
ಸ್ವಾತ್ಮನ್ಯವಸ್ಥಿತಂ ದೇವಂ ಚಿಂತಯೇತ್ ಪರಮೇಶ್ವರಮ್ ॥ ೫೪ ॥

---

೫೧. ಹಾಗು ಪ್ರಾಣಿಗಳಿಂದ ವರ್ಜಿತವೂ, ನಿರ್ಜನವೂ, ಮಂಗಳಮಯವೂ ಆದ ಗೃಹದ ಒಂದು ಭಾಗದಲ್ಲಿ ಆತ್ಮಪರಾಯಣನಾಗಿ ಆತ್ಮನಲ್ಲಿ ಸಂತತವಾಗಿ ಚಿತ್ತವನ್ನು ಇರಿಸುವ ರೀತಿಯಿಂದ ಯೋಗವನ್ನು ಆಚರಿಸಬೇಕು.

೫೨. ಯೋಗೀಂದ್ರರೇ ! ಮೊದಲು ಯೋಗೀಂದ್ರರನ್ನೂ, ಶಿಷ್ಯರನ್ನೂ, ವಿನಾಯಕನನ್ನೂ, ಗುರುವನ್ನೂ ಮತ್ತು ಯೋಗೇಶ್ವರನಾದ ನನ್ನನ್ನೂ ನಮಸ್ಕಾರ ಮಾಡಿ ಸಮಾಧಾನಚಿತ್ತದಿಂದ ಯೋಗಿಯು ಯೋಗಾಭ್ಯಾಸವನ್ನು ಕೈಗೊಳ್ಳಬೇಕು.

೫೩. ಮತ್ತು ಸ್ವಸ್ತಿಕ, ಪದ್ಮ ಅಥವಾ ಅರ್ಧಾಸನಗಳಲ್ಲಿ ಯಾವುದಾದರೊಂದು ಆಸನವನ್ನು ಹಾಕಿಕೊಂಡು ನಾಸಾಗ್ರದಲ್ಲಿ ಸಮವಾದ ದೃಷ್ಟಿಯನ್ನಿಟ್ಟು ಸ್ವಲ್ಪಮಾತ್ರ ತೆರೆದ ಕಣ್ಣುಗಳುಳ್ಳವನಾಗಿ ಯೋಗಾಭ್ಯಾಸಮಾಡಬೇಕು.

೫೪. ತರುವಾಯ ನಿರ್ಭಯನೂ, ಶಾಂತನೂ ಆಗಿ ಮಾಯಾಮಯವಾದ ಜಗತ್ತಿನ ಸಂಗವನ್ನು ಬಿಟ್ಟು ಸ್ವಾತ್ಮರೂಪದಲ್ಲಿರುವ ಪರಮೇಶ್ವರದೇವನನ್ನು ಸಂತತವಾಗಿ ಚಿಂತಿಸಬೇಕು.

ಶಿಖಾಗ್ರೇ ದ್ವಾದಶಾಂಗುಲ್ಯೇ ಕಲ್ಪಯಿತ್ವಾಥ ಪಂಕಜಮ್ ।
ಧರ್ಮಕಂದಸಮುದ್ಭೂತಂ ಜ್ಞಾನನಾಲಂ ಸುಶೋಭನಮ್ ॥ ೫೫ ॥

ಐಶ್ವರ್ಯಾಷ್ಟದಲಂ ಶ್ವೇತಂ ಪರಂ ವೈರಾಗ್ಯಕರ್ಣಿಕಮ್ ।
ಚಿಂತಯೇತ್ಪರಮಂ ಕೋಶಂ ಕರ್ಣಿಕಾಯಾಂ ಹಿರಣ್ಮಯಮ್ ॥೫೬॥

ಸರ್ವಶಕ್ತಿಮಯಂ ಸಾಕ್ಷಾದ್ಯಂ ಪ್ರಾಹುರ್ದಿವ್ಯಮವ್ಯಯಮ್ ।
ಓಂಕಾರವಾಚ್ಯಮವ್ಯಕ್ತಂ ರಶ್ಮಿಜ್ವಾಲಾಸಮಾಕುಲಮ್ ॥ ೫೭ ॥

ಚಿಂತಯೇತ್ತತ್ರ ವಿಮಲಂ ಪರಂ ಜ್ಯೋತಿರ್ಯದಕ್ಷರಮ್ ।
ತಸ್ಮಿನ್ ಜ್ಯೋತಿಷಿ ವಿನ್ಯಸ್ಯ ಸ್ವಾನಂದಂ ಮಮ ಭೇದತಃ ॥ ೫೮ ॥

---

೫೫. ಹನ್ನೆರಡು ಅಂಗುಲಗಳ ಪರಿಮಾಣವುಳ್ಳ ಶಿಖೆಯ ಅಗ್ರದಲ್ಲಿ ಧರ್ಮವೆಂಬ ಗಡ್ಡೆಯಿಂದ ಹುಟ್ಟಿದ ಜ್ಞಾನವೆಂಬ ನಾಳವುಳ್ಳ ಮತ್ತು ಮಂಗಳಕರವಾದ ಕಮಲವನ್ನು ಕಲ್ಪಿಸಬೇಕು.

೫೬. ಮತ್ತು ಅಣಿಮಾದಿ ಅಷ್ಟೈಶ್ವರ್ಯಗಳೆಂಬ ದಳಗಳುಳ್ಳ, ಶ್ವೇತವರ್ಣದ, ಉತ್ತಮವಾದ ವೈರಾಗ್ಯವೆಂಬ ಕರ್ಣಿಕೆಯಿಂದ ಕೂಡಿದ, ಕಮಲವನ್ನು ಧ್ಯಾನಿಸಿ ಅದರ ಕರ್ಣಿಕೆಯಲ್ಲಿ ಸುವರ್ಣಮಯವೂ, ಶ್ರೇಷ್ಠವೂ ಆದ ಕೋಶವನ್ನು ಧ್ಯಾನಿಸಬೇಕು.

೫೭. ಸಮಸ್ತ ಶಕ್ತಿಗಳಿಂದ ಪೂರ್ಣವೂ, ಅವ್ಯಯವೂ, ದಿವ್ಯವೂ, ಕಿರಣಮಾಲೆಗಳಿಂದ ಶೋಭಿತವೂ ಮತ್ತು ಅವ್ಯಕ್ತವೂ ಆದ ಕರ್ಣಿಕಾ ಮಧ್ಯದಲ್ಲಿರುವ ಕೋಶವನ್ನು ಪ್ರಾಜ್ಞರು ವರ್ಣಿಸುತ್ತಾರೆ.

೫೮. ಆ ಕೋಶದಲ್ಲಿ ನಿರ್ಮಲವೂ, ಪರಂಜ್ಯೋತಿರೂಪವೂ, ಅಕ್ಷರವೂ ಆದ ಪರಬ್ರಹ್ಮವಸ್ತುವನ್ನು ಧ್ಯಾನಿಸಬೇಕು. ಮತ್ತು ಆ ಜ್ಯೋತಿಯಲ್ಲಿ ಸ್ವಾತ್ಮಾನಂದವನ್ನು ನನ್ನ ಅಭೇದದಿಂದ ಧ್ಯಾನಿಸಬೆಕು.

ಧ್ಯಾಯೀತ ಕೋಶಮಧ್ಯಸ್ಥಮೀಶಂ ಪರಮಕಾರಣಮ್ ।
ತದಾತ್ಮಾ ಸರ್ವಗೋ ಭೂತ್ವಾ ನ ಕಿಂಚಿದಪಿ ಚಿಂತಯೇತ್ ॥ ೫೯ ॥

ಏತದ್ಗುಹ್ಯತಮಂ ಜ್ಞಾನಂ ಧ್ಯಾನಾಂತರಮಥೋಚ್ಯತೇ ।
ಚಿಂತಯಿತ್ವಾ ತು ಪೂರ್ವೋಕ್ತಂ ಹೃದಯೇ ಪದ್ಮಮುತ್ತಮಮ್ ॥೬೦॥

ಆತ್ಮಾನಮಥ ಕಾಂತಾರಂ ತತ್ರಾನಲಸಮತ್ವಿಷಮ್ ।
ಮಧ್ಯೇ ವಹ್ನಿಶಿಖಾಕಾರಂ ಪುರುಷಂ ಪಂಚವಿಂಶಕಮ್ ॥ ೬೧ ॥

ಚಿಂತಯೇತ್ಪರಮಾತ್ಮಾನಂ ತನ್ಮಧ್ಯೇ ಗಗನಂ ಪರಮ್ ।
ಓಂಕಾರಬೋಧಿತಂ ತತ್ತ್ವಂ ಶಾಶ್ವತಂ ಶಿವಮುಚ್ಯತೇ ॥ ೬೨ ॥

---

೫೯. ಹೀಗೆ ಕೋಶ ಮಧ್ಯದಲ್ಲಿ ಇರುವ, ಪರಮಕಾರಣನಾದ ಮಹೇಶ್ವರನನ್ನು ಧ್ಯಾನಿಸಬೇಕು. ತರುವಾಯ ಪರಬ್ರಹ್ಮಾತ್ಮಕನೂ, ಸರ್ವವ್ಯಾಪಿಯೂ ಆಗಿ ಬೇರೆ ಯಾವುದೊಂದನ್ನೂ ಚಿಂತಿಸಬಾರದು.

೬೦. ಇದೊಂದು ಅತಿರಹಸ್ಯವಾದ ಯೋಗಜ್ಞಾನವು. ಇನ್ನು ಮುಂದೆ ಇನ್ನೊಂದುಬಗೆಯ ಧ್ಯಾನವು ಹೇಳಲ್ಪಡುತ್ತದೆ. ಆದರಲ್ಲಿಯೂ ಹೃದಯದಲ್ಲಿ ಹಿಂದೆ ಹೇಳಿದ ಉತ್ತಮವಾದ ಕಮಲವನ್ನು ಮೊದಲು ಚಿಂತಿಸಬೇಕು.

೬೧. ಮತ್ತು ಆತ್ಮನನ್ನು ಅರಣ್ಯವೆಂದು ಧ್ಯಾನಿಸಿ ಅದರ ಮಧ್ಯದಲ್ಲಿ ಅಗ್ನಿಗೆ ಸಮಾನವಾದ ತೇಜಸ್ಸುಳ್ಳವನೂ, ಅಗ್ನಿಜ್ವಾಲಾಮಯನೂ ಆದ ಇಪ್ಪತ್ತೈದನೆಯ ಪುರುಷತತ್ತ್ವವನ್ನು ಧ್ಯಾನಿಸಬೇಕು.

೬೨. ತರುವಾಯ ಆ ಪುರುಷಮಧ್ಯದಲ್ಲಿ ಉತ್ತಮ ಆಕಾರರೂಪನೂ, ಓಂಕಾರದಿಂದ ವೇದ್ಯವಾದ ತತ್ವಸ್ವರೂಪನೂ, ಶಾಶ್ವತನೂ, ಶಿವಂಕರನೂ ಆದ ಪರಮಾತ್ಮನನ್ನು ಚಿಂತಿಸಬೇಕು. ಆ ತತ್ವವು ಓಂಕಾರದಿಂದ ವೇದ್ಯವೆಂದು ಹೇಳಲ್ಪಟ್ಟಿದೆ.

ಅವ್ಯಕ್ತಂ ಪ್ರಕೃತೌ ಲೀನಂ ಪರಂ ಜ್ಯೋತಿರನುತ್ತಮಮ್ ।
ತದಂತಃ ಪರಮಂ ತತ್ತ್ವಮಾತ್ಮಾಧಾರಂ ನಿರಂಜನಮ್ ॥ ೬೩ ॥

ಧ್ಯಾಯೀತ ತನ್ಮಯೋ ನಿತ್ಯಮೇಕರೂಪಂ ಮಹೇಶ್ವರಮ್ ।
ವಿಶೋಧ್ಯ ಸರ್ವತತ್ತ್ವಾನಿ ಪ್ರಣವೇನಾಥವಾ ಪುನಃ ॥ ೬೪ ॥

ಸಂಸ್ಥಾಪ್ಯ ಮಯಿ ಚಾತ್ಮಾನಂ ನಿರ್ಮಲೇ ಪರಮೇ ಪದೇ ।
ಪ್ಲಾವಯಿತ್ವಾತ್ಮನೋ ದೇಹಂ ತೇನೈವ ಜ್ಞಾನವಾರಿಣಾ ॥ ೬೫ ॥

ಮದಾತ್ಮಾ ಮನ್ಮನಾ ಭಸ್ಮ ಗೃಹೀತ್ವಾ ತ್ವಗ್ನಿಹೋತ್ರಿಕಮ್ ।
ತೇನೋದ್ಧೂಲಿತಸರ್ವಾಂಗಮಗ್ನಿರಾದಿತ್ಯ ಮಂತ್ರತಃ ॥ ೬೬ ॥

---

೬೩. ಅತೀಂದ್ರಿಯವೂ, ನಿರುಪಮವೂ, ಪರಂಜ್ಯೋತಿರೂಪವೂ ಆದ ಶಿವ ತತ್ತ್ವವು ಪ್ರಕೃತಿಯಲ್ಲಿ ಲೀನವಾಗಿದೆ. ಅದರ ಮಧ್ಯದಲ್ಲಿ ಆತ್ಮವೆಂಬ ಆಧಾರದಲ್ಲಿರುವ ನಿರ್ದುಷ್ಟವಾದ ಪರಮತತ್ತ್ವವು ಪ್ರಕಾಶಿಸುವುದು.

೬೪. ಯೋಗಿಯು ಆ ತತ್ತ್ವಮಯನಾಗಿ ಬಾಹ್ಯ ಸಮಸ್ತ ತತ್ತ್ವಗಳನ್ನೂ ಓಂಕಾರಧ್ಯಾನದಿಂದ ಶೋಧಿಸಿ ಶಾಶ್ವತನೂ, ಏಕರೂಪನೂ ಆದ ಮಹೇಶ್ವರನನ್ನು ಸಂತತವಾಗಿ ಧ್ಯಾನಮಾಡಬೇಕು.

೬೫. ಮತ್ತು ನಿರ್ಮಲವಾದ ಪರಮಪದವಿಯಲ್ಲಿ ಆತ್ಮನನ್ನು ಸ್ಥಾಪಿಸ ಬೇಕೆಂದು ಚಿಂತಿಸಿ ಅಂತಹ ಪರಮಾತ್ಮಜ್ಞಾನರೂಪವಾದ ಜಲಾಭಿಷೇಕದಿಂದ ತನ್ನ ದೇಹವನ್ನು ಪವಿತ್ರವನ್ನಾಗಿ ಮಾಡಬೇಕು.

೬೬. ಹಾಗು ನನ್ನಲ್ಲಿ ಮಾನಸವನ್ನು ಇಟ್ಟವನೂ, ನನ್ನ ಸ್ವರೂಪನೂ ಆಗಿ ಅಗ್ನಿಹೋತ್ರದ ಹೋಮಭಸ್ಮವನ್ನು ತೆಗೆದುಕೊಂಡು ಅಗ್ನಿರಿತಿಭಸ್ಮ ಮುಂತಾದ ಮಂತ್ರದಿಂದ ಅಭಿಮಂತ್ರಿಸಿದ ಭಸ್ಮದಿಂದ ಸರ್ವಾಂಗವನ್ನೂ ಉದ್ಧೂಲನ ಮಾಡಬೇಕು.

ಚಿಂತಯೇತ್ ಸ್ವಾತ್ಮನೀಶಾನಂ ಪರಂ ಜ್ಯೋತಿಃಸ್ವರೂಪಿಣಮ್ ।
ಏಷ ಪಾಶುಪತೋ ಯೋಗಃ ಪಶುಪಾಶವಿಮುಕ್ತಯೇ ॥ ೬೭ ॥

ಸರ್ವವೇದಾಂತಮಾರ್ಗೋಽಯಮತ್ಯಾಶ್ರಮಮಿತಿ ಶ್ರುತಿಃ ।
ಏತತ್ಪರತರಂ ಗುಹ್ಯಂ ಮತ್ಸಾಯುಜ್ಯಪ್ರದಾಯಕಮ್ ॥ ೬೮ ॥

ದ್ವಿಜಾತೀನಾಂ ತು ಕಥಿತಂ ಭಕ್ತಾನಾಂ ಬ್ರಹ್ಮಚಾರಿಣಾಮ್ ।
ಬ್ರಹ್ಮಚರ್ಯಮಹಿಂಸಾ ಚ ಕ್ಷಮಾ ಶೌಚಂ ತಪೋ ದಮಃ ॥ ೬೯ ॥

ಸಂತೋಷಃ ಸತ್ಯಮಾಸ್ತಿಕ್ಯಂ ವ್ರತಾಂಗಾನಿ ವಿಶೇಷತಃ ।
ಏಕೇನಾಪ್ಯಥ ಹೀನೇನ ವ್ರತಮಸ್ಯ ನ ಲುಪ್ಯತೇ ॥ ೭೦ ॥

---

೬೭. ತರುವಾಯ ಸ್ವಾತ್ಮನಲ್ಲಿ ಪರಂಜ್ಯೋತಿರೂಪನಾದ ಈಶ್ವರನನ್ನು ಅಭೇದ ಭಾವನೆಯಿಂದ ಧ್ಯಾನಿಸಬೇಕು. ಇದು ಪಶುಗಳ ಪಾಶಮೋಚನೆಗೆ ಸಾಧನವಾದ ಪಾಶುಪತವೆಂಬ ಮಹಾಯೋಗವೆಂದು ಪ್ರಸಿದ್ಧವಾಗಿದೆ.

೬೮. ಇದು ಸಮಸ್ತ ವೇದಾಂತಗಳಲ್ಲಿ ಹೇಳಿರುವ ಉತ್ತಮವಾದ ಸಾಧನ ಮಾರ್ಗವು. ಇದನ್ನು ಅತ್ಯಾಶ್ರಮವೆಂದು ಶ್ರುತಿಯು ಹೇಳುತ್ತಿದೆ. ಇದು ನನ್ನ ಸಾಯುಜ್ಯವನ್ನು ದೊರಕಿಸುವ ಉತ್ತಮೋತ್ತಮವಾದ ರಹಸ್ಯ ಸಾಧನವಾಗಿದೆ.

೬೯. ಭಕ್ತರೂ, ಬ್ರಹ್ಮಚರ್ಯ ನಿಯಮವಂತರೂ ಆದ ದ್ವಿಜಾತಿಗಳಿಗೆ ಇದೊಂದು ಸಾಯುಜ್ಯ ಸಾಧನವು ಉಪದೇಶಿಸಲ್ಪಟ್ಟಿದೆ. ಈ ಪಾಶುಪತ ವ್ರತಕ್ಕೆ ಬ್ರಹ್ಮಚರ್ಯ, ಅಹಿಂಸೆ, ಕ್ಷಮೆ, ಶೌಚ, ತಪಸ್ಸು ಮತ್ತು ದಮಗಳು ಆವಶ್ಯಕವಾದ ಅಂಗಗಳಾಗಿವೆ.

೭೦. ಹಾಗು ಸಂತೋಷ, ಸತ್ಯ, ಆಸ್ತಿಕ್ಯವೆಂಬ ಗುಣಗಳು ವಿಶೇಷವಾಗಿ ವ್ರತಕ್ಕೆ ಉಪಕಾರಕಗಳಾಗಿವೆ. ಇವುಗಳಲ್ಲಿ ಯಾವುದಾದರೊಂದು ಗುಣದ ಹೀನತೆಯಿಂದ ವ್ರತವು ಲುಪ್ತವಾಗುವುದಿಲ್ಲ.

ತಸ್ಮಾದಾತ್ಮಗುಣೋಪೇತೋ ಮದ್ವ್ರತಂ ವೋಢುಮರ್ಹತಿ ।
ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ॥ ೭೧ ॥

ಬಹವೋಽನೇನ ಯೋಗೇನ ಪೂತಾ ಮದ್ಭಾವಯೋಗತಃ ।
ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್ ॥೭೨॥

ಜ್ಞಾನಯೋಗೇನ ಮಾಂ ತಸ್ಮಾದ್ಯಜೇತ ಪರಮೇಶ್ವರಮ್ ।
ಅಥವಾ ಭಕ್ತಿಯೋಗೇನ ವೈರಾಗ್ಯೇಣ ಪರೇಣ ತು ॥ ೭೩ ॥

ಚೇತಸಾ ಬೋಧಯುಕ್ತೇನ ಪೂಜಯೇನ್ಮಾಂ ಸದಾ ಶುಚಿಃ ।
ಸರ್ವಕರ್ಮಾಣಿ ಸನ್ನ್ಯಸ್ಯ ಭಿಕ್ಷಾಶೀ ನಿಷ್ಪರಿಗ್ರಹಃ ॥ ೭೪ ॥

---

೭೧. ಆದುದರಿಂದ ಹಿಂದೆ ಹೇಳಿದ ಆತ್ಮಗುಣಗಳಿಂದ ಕೂಡಿ ನನ್ನ ವ್ರತವನ್ನು ಆಚರಿಸಲು ಅರ್ಹನಾಗಿದ್ದಾನೆ. ಉಪಾಸಕರು ರಾಗ-ಭೀತಿ-ಕ್ರೋಧಗಳಿಂದ ರಹಿತರೂ ನನ್ನ ಸ್ವರೂಪರೂ ಮತ್ತು ನನ್ನನ್ನೇ ಆಶ್ರಯಿಸಿದವರೂ ಆಗುವರು.

೭೨. ಮತ್ತು ಇಂತಹ ಆತ್ಮಗುಣಗಳಿಂದ ಕೂಡಿ ವಿರುದ್ಧ, ದ್ವೇಷಾದಿಗಳನ್ನು ದೂರಮಾಡಿ ಆಚರಿಸಿದ ಈ ಯೋಗಮಾರ್ಗದಿಂದ ಅನೇಕಮಂದಿ ಯೋಗಿಗಳು ನನ್ನ ಐಕ್ಯವನ್ನು ಹೊಂದಿ ಪವಿತ್ರರಾಗಿರುವರು. ಯಾರು ನನ್ನನ್ನು ಯಾವ ಭಾವನೆಯಿಂದ ಸೇವಿಸುವರೊ; ನಾನು ಅವರನ್ನು ಆ ದೃಷ್ಟಿಯಿಂದಲೇ ರಕ್ಷಿಸುತ್ತೇನೆ.

೭೩. ಆದುದರಿಂದ ಪರಮೇಶ್ವರನಾದ ನನ್ನನ್ನು ಜ್ಞಾನಯೋಗದಿಂದ ಪೂಜಿಸಬೇಕು. ಅದು ಶಕ್ಯವಾಗದಿರುವಲ್ಲಿ ಭಕ್ತಿಯೋಗದಿಂದಲೂ, ತೀವ್ರವಾದ ವೈರಾಗ್ಯದಿಂದಲೂ ನನನ್ನು ಸತ್ಕರಿಸಬೇಕು.

೭೪. ಮತ್ತು ಯಾವಾಗಲೂ ಪವಿತ್ರನಾಗಿ ಜ್ಞಾನದಿಂದ ಪವಿತ್ರವಾದ ಮಾನಸದಿಂದ ಉಪಕರಣರಹಿತನೂ, ಭಿಕ್ಷಾನ್ನಭೋಜಿಯೂ ಆಗಿ ಮಿಕ್ಕ ಸಮಸ್ತ ಕರ್ಮಗಳನ್ನು ಸನ್ಯಾಸಮಾಡಿ ನನ್ನನ್ನು ಸತ್ಕರಿಸಬೇಕು.

ಪ್ರಾಪ್ನೋತಿ ಮಮ ಸಾಯುಜ್ಯಂ ಗುಹ್ಯಮೇತನ್ಮಯೋದಿತಮ್ ।
ಅದ್ವೇಷ್ಟಾ ಸರ್ವಭೂತಾನಾಂ ಮೈತ್ರೀಕರಣ ಏವ ಚ ॥ ೭೫ ॥

ನಿರ್ಮಮೋ ನಿರಹಂಕಾರೋ ಯೋ ಮದ್ಭಕ್ತಃ ಸ ಮೇ ಪ್ರಿಯಃ ।
ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ॥ ೭೬ ॥

ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಃ ಸ ಮೇ ಪ್ರಿಯಃ ।
ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ ॥

ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಹಿ ಮೇ ಪ್ರಿಯಃ ।
ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ ॥ ೭೮ ॥

---

೭೫. ಈ ಮಾರ್ಗದಿಂದ ನನ್ನ ಸಾಯುಜ್ಯವನ್ನು ಭಕ್ತನು ಹೊಂದುತ್ತಾನೆ. ಹೀಗೆ ಇದೊಂದು ರಹಸ್ಯವು ನನ್ನಿಂದ ಪ್ರಕಾಶಿಸಲ್ಪಟ್ಟಿದೆ. ನನ್ನ ಪರಮಭಕ್ತನಾದ ಮಾನವನಲ್ಲಿ ದ್ವೇಷಿಸದಿರುವುದು, ಸರ್ವಭೂತಗಳಲ್ಲಿ ದಯೆ ತೋರುವುದು ಮುಂತಾದ ಗುಣಗಳು ಜ್ಞಾನಸಾಧನವಾಗಿ ಇರುವುವು.

೭೬. ಹಾಗೂ ಮಮತ್ವರಹಿತನೂ, ನಿರಹಂಕಾರನೂ ಆದ ಭಕ್ತನು ನನಗೆ ಬಹಳ ಪ್ರಿಯನಾಗಿರುವನು. ಅವನು ಬಹಳ ಸಂತೋಷಿಯೂ, ಸಂತತವಾಗಿ ಯೋಗಪರನೂ, ಜಿತವಾದ ಅಂತಃಕರಣವುಳ್ಳವನೂ ಮತ್ತು ದೃಢವಾದ ನಿಶ್ಚಯವುಳ್ಳವನೂ ಆಗಿರುವನು.

೭೭. ಮತ್ತು ಯಾವ ಮಾನವನಿಂದ ಲೋಕವು ಭೀತಿಗೊಳ್ಳುವುದಿಲ್ಲವೋ ; ಯಾವ ಮಾನವನು ಲೋಕದಿಂದ ಭಯಪಡುವುದಿಲ್ಲವೋ ; ಸಮಸ್ತ ಮನೋಬುದ್ಧಿಗಳ ವೃತ್ತಿಗಳನ್ನು ನನ್ನಲ್ಲಿ ಅರ್ಪಿಸಿದ ಆ ಮಾನವನು ನನಗೆ ಬಹಳ ಪ್ರಿಯನು

೭೮. ಹರ್ಷ, ಕೋಪ, ಭಯ, ಉದ್ವೇಗ-ಇವುಗಳಿಂದ ರಹಿತನೂ, ನಿರಪೇಕ್ಷನೂ, ಶುಚಿಯೂ, ದಕ್ಷನೂ, ಉದಾಸೀನನೂ ಮತ್ತು ನಾನಾವಿಧ ವ್ಯಥೆಗಳನ್ನು ತೊರೆದವನೂ ಆದ ಭಕ್ತ ಮಾನವನು ನನಗೆ ಪ್ರಿಯನಾಗುವನು.

ಸರ್ವಾರಂಭಪರಿತ್ಯಾಗೀ ಭಕ್ತಿಮಾನ್ ಯಃ ಸ ಮೇ ಪ್ರಿಯಃ ।
ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನ ಚಿತ್ ॥ ೭೯ ॥

ಅನಿಕೇತಃ ಸ್ಥಿರಮತಿರ್ಮದ್ಭಕ್ತೋ ಮಾಮುಪೈಷ್ಯತಿ ।
ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮತ್ಪರಾಯಣಃ ॥ ೮೦ ॥

ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪರಮಂ ಪದಮ್ ।
ಚೇತಸಾ ಸರ್ವಕರ್ಮಾಣಿ ಮಯಿ ಸನ್ನ್ಯಸ್ಯ ಮತ್ಪರಃ ॥ ೮೧ ॥

ನಿರಾಶೀರ್ನಿರ್ಮಮೋ ಭೂತ್ವಾ ಮಾಮೇಕಂ ಶರಣಂ ವ್ರಜೇತ್ ।
ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ ॥ ೮೨ ॥

---

೭೯. ನಿಂದಾ-ಸ್ತುತಿಗಳಲ್ಲಿ ತುಲ್ಯನಾಗಿರುವವನೂ, ಮೌನಿಯೂ, ಯಾವುದಾದರೊಂದು ಅಲ್ಪಲಾಭದಿಂದ ಸಂತೋಷಿಸುವವನೂ, ಸಮಸ್ತ ಉದ್ಯಮಗಳನ್ನು ತ್ಯಜಿಸಿದವನೂ ಆದ ಭಕ್ತನು ನನಗೆ ಪ್ರಿಯನಾಗಿರುವನು.

೮೦. ವಸತಿಭೂಮಿಯಲ್ಲಿ ಮಮತ್ವವಿಲ್ಲದವನೂ, ಸ್ಥಿರವಾದ ವಿವೇಕವುಳ್ಳವನೂ ಆದ ಭಕ್ತನು ನನ್ನನ್ನು ಹೊಂದುವನು. ಮತ್ತು ಯಾವಾಗಲೂ ವಿಹಿತ ನಿಷಿದ್ಧಗಳಾದ ಸಮಸ್ತ ಕಾರ್ಯಗಳನ್ನು ಮಾಡುವವನೂ ನನ್ನಲ್ಲಿ ಆಸಕ್ತಿಯನ್ನಿಡಬೇಕು.

೮೧. ಅದರಿಂದ ನನ್ನ ಅನುಗ್ರಹಕ್ಕೆ ಪಾತ್ರನಾಗಿ ಶಾಶ್ವತವೂ, ಉತ್ತಮವೂ ಆದ ಪದವಿಯನ್ನು ಹೊಂದುತ್ತಾನೆ. ಮಾಡುವ ಸಮಸ್ತ ಕರ್ಮಗಳನ್ನು ಮನಸ್ಸಿನಿಂದ ನನ್ನಲ್ಲಿ ಸನ್ಯಾಸಮಾಡಿ ನನ್ನಲ್ಲಿ ಪರಮ ತತ್ಪರತೆಯನ್ನು ಇರಿಸಬೇಕು.

೮೨. ನಿಷ್ಕಾಮನೂ, ಮಮತಾಶೂನ್ಯನೂ ಆಗಿ ನನ್ನನ್ನು ಒಬ್ಬನನ್ನೇ ಶರಣುಹೊಂದಬೇಕು. ಕರ್ಮಲಭ್ಯವಾದ ಫಲಗಳಲ್ಲಿ ಆಶೆಯನ್ನು ಬಿಟ್ಟು ನಿತ್ಯತೃಪ್ತಿಯುಳ್ಳವನೂ ಮತ್ತು ಇತರ ಆಶ್ರಯಶೂನ್ಯನೂ ಆಗಬೇಕು.

ಕರ್ಮಣ್ಯಪಿ ಪ್ರವೃತ್ತೋಽಪಿ ಕರ್ಮಣಾ ತೇನ ಬುಧ್ಯತೇ ।
ನಿರಾಶೀಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ ॥ ೭೩ ॥

ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ತತ್ಪದಮ್ ।
ಯದೃಚ್ಛಾಲಾಭತೃಪ್ತಸ್ಯ ದ್ವಂದ್ವಾತೀತಸ್ಯ ಚೈವ ಹಿ ॥ ೭೪ ॥

ಕುರ್ವತೋ ಮತ್ಪ್ರಸಾದಾರ್ಥಂ ಕರ್ಮ ಸಂಸಾರನಾಶನಮ್ ।
ಮನ್ಮನಾ ಮನ್ನಮಸ್ಕಾರೋ ಮದ್ಯಾಜೀ ಮತ್ಪರಾಯಣಃ ॥ ೭೫ ॥

ಮಾಮುಪಾಸ್ಯತಿ ಯೋಗೀಶೋ ಜ್ಞಾತ್ವಾ ಮಾಂ ಪರಮೇಶ್ವರಮ್ ।
ಮಾಮೇವಾಹುಃ ಪರಂ ಜ್ಯೋತಿರ್ಬೋಧಯಂತಃ ಪರಸ್ಪರಮ್ ॥ ೭೬ ॥

---

೭೩. ಅಂತಹವನು ಕರ್ಮಮಾರ್ಗದಲ್ಲಿ ಪ್ರವೃತ್ತನಾದರೂ ಆ ಕರ್ಮದಿಂದ ಬದ್ಧನಾಗುವುದಿಲ್ಲ. ಆಕಾಂಕ್ಷಾಶೂನ್ಯನಾಗಿ ನಿಗ್ರಹಿಸಲ್ಪಟ್ಟ ಅಂತಃಕರಣವುಳ್ಳವನೂ ಮತ್ತು ಸಮಸ್ತ ಉಪಕರಣಗಳನ್ನು ತ್ಯಜಿಸಿದವನೂ ಆಗಬೇಕು.

೭೪. ಮಾನಸವನ್ನು ನನ್ನಲ್ಲಿ ಇರಿಸಿ ಕೇವಲವಾಗಿ ಶರೀರದಿಂದಾಗುವ ಕರ್ಮಗಳನ್ನು ಮಾಡುವವನೂ ಪರಮಪದವನ್ನು ಹೊಂದುತ್ತಾನೆ. ಯದೃಚ್ಛಾ ಲಾಭದಿಂದ ತೃಪ್ತಿಯುಳ್ಳವನೂ, ದ್ವಂದ್ವ ದೋಷಗಳನ್ನು ಮೀರಿದವನೂ ಆದ ಭಕ್ತನು ಶ್ರೇಯಸ್ಸಿಗೆ ಪಾತ್ರನಾಗುವನು.

೭೫. ಮತ್ತು ನನ್ನ ಅನುಗ್ರಹಲಾಭಕ್ಕೆ ಕರ್ಮಾನುಷ್ಠಾನ ಮಾಡುವ ಮಾನವನ ಕರ್ಮವು ಸಂಸಾರವನ್ನು ನಾಶಮಾಡುವುದು. ನನ್ನ ಭಕ್ತನು ನನ್ನಲ್ಲಿ ಮಾನಸವುಳ್ಳವನೂ, ನನ್ನನ್ನು ನಮಸ್ಕರಿಸುವವನೂ, ನನ್ನನ್ನು ಅರ್ಚಿಸುವವನೂ, ನನ್ನಲ್ಲಿ ಪರಮಗತಿ ಭಾವನೆಯನ್ನಿಟ್ಟವನೂ ಆಗಬೇಕು.

೭೬. ಅಂತಹ ಯೋಗೀಶ್ವರನು ಪರಮೇಶ್ವರನಾದ ನನ್ನನ್ನು ತಾತ್ವಿಕವಾಗಿ ಅರಿತು ನನ್ನನ್ನು ಸೇವಿಸುತ್ತಾನೆ. ನನ್ನನ್ನು ಪರಜ್ಯೋತಿರೂಪವೆಂದು ಪರಸ್ಪರವಾಗಿ ಬೋಧಿಸುವ ಜ್ಞಾನಿಗಳು ಹೇಳುತ್ತಾರೆ.

ಕಥಯಂತಶ್ಚ ಮಾಂ ನಿತ್ಯಂ ಮಮ ಸಾಯುಜ್ಯಮಾಪ್ನುಯುಃ ।
ಏವಂ ನಿತ್ಯಾಭಿಯುಕ್ತಾನಾಂ ಮಾಯೇಯಂ ಕರ್ಮ ಸಾತ್ವಗಮ್॥೮೭॥

ನಾಶಯಾಮಿ ತಮಃ ಕೃತ್ಸ್ನಂ ಜ್ಞಾನದೀಪೇನ ಭಾಸ್ವತಾ ।
ಮದ್ಬುದ್ಧಯೋ ಮಾಂ ಸತತಂ ಪೂಜಯಂತೀಹ ಯೇ ಜನಾಃ ॥೮೮॥

ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ।
ಯೇ ಚಾನ್ಯೇ ಭೋಗಕರ್ಮಾರ್ಥಾ ಯಜಂತೇ ಹ್ಯನ್ಯದೇವತಾಃ ॥೮೯॥

ತೇಷಾಂ ತದಂತಂ ವಿಜ್ಞೇಯಂ ದೇವತಾನುಗತಂ ಫಲಮ್ ।
ಯೇ ಚಾನ್ಯದೇವತಾಭಕ್ತಾಃ ಪೂಜಯಂತೀಹ ದೇವತಾಃ ॥ ೯೦ ॥

---

೮೭. ಮತ್ತು ಪರಂಜ್ಯೋತಿರೂಪನಾದ ನನ್ನನ್ನು ಯಾವಾಗಲೂ ಕೀರ್ತಿಸುತ್ತಿದ್ದ ಭಕ್ತರು ನನ್ನ ಸಾಯುಜ್ಯವನ್ನು ಹೊಂದುವರು. ಈ ರೀತಿಯಾಗಿ ನಿತ್ಯದಲ್ಲಿಯೂ ನನ್ನಲ್ಲಿ ವಿಶೇಷವಾದ ಯೋಗವನ್ನಿಟ್ಟ ಮಾನವರ ಮಾಯಾನಿರ್ಮಿತವಾದ ಸಮೂಲ ಕರ್ಮವನ್ನು ನಾನು ನಾಶಮಾಡುವೆನು.

೮೮. ನಾನು ಪ್ರಕಾಶಿಸುತ್ತಿರುವ ಜ್ಞಾನವೆಂಬ ದೀಪದಿಂದ ಸಂಪೂರ್ಣವಾದ ಅಜ್ಞಾನಾಂಧಕಾರವನ್ನು ನಾಶಮಾಡುತ್ತೇನೆ. ಕೆಲವು ಮಾನವರು ನನ್ನಲ್ಲಿಯೇ ಬುದ್ಧಿಯನ್ನಿಟ್ಟು ಸಂತತವಾಗಿ ನನ್ನನ್ನು ಪೂಜಿಸುತ್ತಾರೆ.

೮೯. ಹಾಗೆ ನನ್ನಲ್ಲಿ ನಿತ್ಯಪ್ರೇಮವನ್ನಿಟ್ಟಿರುವ ಭಕ್ತರ ಯೋಗ-ಕ್ಷೇಮಗಳನ್ನು ನಾನು ವಹಿಸುತ್ತೇನೆ. ಕೆಲವರು ಭೋಗಕಾಮಿಗಳಾಗಿ ಅದಕ್ಕೋಸ್ಕರ ಅನ್ಯದೇವತೆಗಳ ತೃಪ್ತಿಗೆ ಕರ್ಮಗಳನ್ನಾಚರಿಸುತ್ತಾರೆ.

೯೦. ಅವರಿಗೆ ಆ ದೇವತಾಪ್ರಸಾದದಿಂದ ಲಭ್ಯವಾದ ಫಲವು ಅಶಾಶ್ವತವಾದ್ದರಿಂದ ನಾಶವಾಗುವುದೆಂದು ತಿಳಿಯಬೇಕು. ಹಾಗೆ ಇತರ ದೇವತೆಗಳಲ್ಲಿ ಭಕ್ತರಾದವರು ಆಯಾಯ ದೇವತೆಗಳನ್ನು ಪೂಜಿಸಬಹುದು.

ಮದ್ಭಾವೇನಾಸಮಾಯುಕ್ತಾ ಮುಚ್ಯಂತೇ ತೇಽಪಿ ಮಾನವಾಃ ।
ತಸ್ಮಾದ್ವಿನಶ್ವರಾನನ್ಯಾಂಸ್ತ್ಯಕ್ತ್ವಾ ದೇವಾನಶೇಷತಃ ॥ ೯೧ ॥

ಮಾಮೇವ ಸಂಶ್ರಯೇದೀಶಂ ಸ ಯಾತಿ ಪರಮಂ ಪದಮ್ ।
ತ್ಯಕ್ತ್ವಾ ಪುತ್ರಾದಿಷು ಸ್ನೇಹಂ ನಿಃಶೋಕೋ ನಿಷ್ಪರಿಗ್ರಹಃ ॥ ೯೨ ॥

ಯಜೇಚ್ಚಾಮರಣಾಲ್ಲಿಂಗಂ ವಿರಕ್ತಃ ಪರಮೇಶ್ವರಮ್ ।
ಯೇಽರ್ಚಯಂತಿ ಸದಾ ಲಿಂಗಂ ತ್ಯಕ್ತ್ವಾ ಭೋಗಾನಶೇಷತಃ ॥ ೯೩ ॥

ಏಕೇನ ಜನ್ಮನಾ ತೇಷಾಂ ದದಾಮಿ ಪರಮಂ ಪದಮ್ ।
ಪರಾತ್ಮನಃ ಸದಾ ಲಿಂಗಂ ಕೇವಲಂ ರಜತಪ್ರಭಮ್ ॥ ೯೪ ॥

---

೯೧. ಇತರ ದೇವತೆಗಳಲ್ಲಿ ನನ್ನ ಭಾವನೆಯಿಂದ ಕೂಡಿದ ಆ ಮಾನವರು ಮುಕ್ತಿಯನ್ನು ಹೊಂದುತ್ತಾರೆ. ಆದುದರಿಂದ ನಾಶಕ್ಕೆ ಭಾಗಿಗಳಾದ ಇತರ ದೇವತೆಗಳನ್ನು ಸಂಪೂರ್ಣವಾಗಿ ಬಿಡಬೇಕು.

೯೨. ಮತ್ತು ಶಾಶ್ವತನೂ, ಮಹೇಶ್ವರನೂ ಆದ ನನ್ನನ್ನು ಆಶ್ರಯಿಸಿ ಪರಮಪದವಿಯನ್ನು ಹೊಂದುತ್ತಾನೆ. ಪುತ್ರ ಮುಂತಾದ ಪರಿಜನರಲ್ಲಿ ಸ್ನೇಹವನ್ನು ಹೊಂದುತ್ತಾನೆ.

೯೩. ಮತ್ತು ಬಾಹ್ಯ ವಸ್ತುಗಳಲ್ಲಿ ವಿರಕ್ತನಾಗಿ ಮರಣಕಾಲದವರೆಗೂ ಪರಮೇಶ್ವರನ ಲಿಂಗವನ್ನು ಅರ್ಚಿಸಬೇಕು. ಮತ್ತು ಕೆಲವು ಮಾನವರು ಭೋಗಗಳನ್ನು ಸಂಪೂರ್ಣವಾಗಿ ವರ್ಜಿಸಿ ಯಾವಾಗಲೂ ಲಿಂಗವನ್ನು ಅರ್ಚಿಸುತ್ತಾರೆ.

೯೪. ಪರಮಾತ್ಮನ, ರಜತದಂತೆ ಪ್ರಕಾಶಿಸುವ ಲಿಂಗ ಮಾತ್ರವನ್ನು ಯಾವಾಗಲೂ ಅರ್ಚಿಸುವ ಮಾನವರಿಗೆ ಒಂದೇ ಜನ್ಮದಲ್ಲಿ ಶಾಶ್ವತವಾದ ಪರಮಪದವನ್ನು ಅನುಗ್ರಹಿಸುತ್ತೇನೆ.

ಜ್ಞಾನಾತ್ಮಕಂ ಸರ್ವಗತಂ ಯೋಗಿನಾಂ ಹೃದಿ ಸಂಸ್ಥಿತಮ್ ।
ಯೇ ಚಾನ್ಯೇ ನಿಯತಾ ಭಕ್ತಾ ಭಾವಯಿತ್ವಾ ವಿಧಾನತಃ ॥ ೯೫ ॥

ಯತ್ರ ಕ್ವಚನ ತಲ್ಲಿಂಗಮರ್ಚಯಂತಿ ಮಹೇಶ್ವರಮ್ ।
ಜಲೇ ವಾ ವಹ್ನಿಮಧ್ಯೇ ವಾ ವ್ಯೋಮ್ನಿ ಸೂರ್ಯೇಽಪ್ಯಥಾನ್ಯತಃ ॥೯೬॥

ರತ್ನಾದೌ ಭಾವಯಿತ್ವೇಶಮರ್ಚಯೇಲ್ಲಿಂಗಮೈಶ್ವರಮ್ ।
ಸರ್ವಲಿಂಗಮಯಂ ಹ್ಯೇತತ್ ಸರ್ವಂ ಲಿಂಗೇ ಪ್ರತಿಷ್ಠಿತಮ್ ॥ ೯೭ ॥

ತಸ್ಮಾಲ್ಲಿಂಗೇಽರ್ಚಯೇದೀಶಂ ಯತ್ರ ಕ್ವಚನ ಶಾಶ್ವತಮ್ ।
ಅಗ್ನೌ ಕ್ರಿಯಾವತಾಮಪ್ಸು ವ್ಯೋಮ್ನಿ ಸೂರ್ಯೇ ಮನೀಷಿಣಾಮ್ ॥

---

೯೫. ಮತ್ತು ಜ್ಞಾನರೂಪವೂ, ಸರ್ವವ್ಯಾಪಕವೂ ಆದ ಲಿಂಗವು ಯೋಗಿಗಳ ಹೃದಯದಲ್ಲಿ ವಾಸಮಾಡಿರುವುದು. ಮತ್ತೆ ಕೆಲವರು ಭಕ್ತಿಮಾರ್ಗದಲ್ಲಿ ನಿಯಮವಂತರಾಗಿ ಭಾವನಾಪೂರ್ವಕವಾಗಿ ವಿಧಾನವನ್ನರಿತು ಪೂಜಿಸುತ್ತಾರೆ.

೯೬. ಜಲದಲ್ಲಿ, ಅಗ್ನಿಯಲ್ಲಿ, ಆಕಾಶದಲ್ಲಿ, ಸೂರ್ಯನಲ್ಲಿ ಅಥವಾ ಮತ್ತಾವದೊಂದರಲ್ಲಿ ಮಹೇಶ್ವರನ ಲಿಂಗವನ್ನು ಭಾವಿಸಿ ಯಾವುದಾದರೊಂದು ಕಡೆಯಲ್ಲಿ ಲಿಂಗಾರ್ಚನೆಯನ್ನು ಮಾಡುತ್ತಾರೆ.

೯೭. ಅಥವಾ ರತ್ನ ಮುಂತಾದ ವಸ್ತುವಿನಲ್ಲಿ ಈಶ್ವರನ ಲಿಂಗವನ್ನು ಭಾವಿಸಿ ಪೂಜೆಮಾಡಬೇಕು. ಪ್ರಾಪಂಚಿಕ ಸಮಸ್ತ ವಸ್ತುಗಳು ಲಿಂಗರೂಪವಾಗಿರುವುವು. ಎಲ್ಲವೂ ಲಿಂಗದಲ್ಲಿ ನೆಲೆಸಿರುವುದು.

೯೮. ಆದ್ದರಿಂದ ಯಾವುದಾದರೊಂದು ಆಧಾರದಲ್ಲಿ ಭಾವಿಸಿದ ಲಿಂಗದಲ್ಲಿ ಶಾಶ್ವತನಾದ ಈಶ್ವರನನ್ನು ಅರ್ಚಿಸಬೇಕು. ಕರ್ಮಾನುಷ್ಠಾನಪರರಿಗೆ ಅಗ್ನಿಯಲ್ಲಿಯೂ, ಉಪಾಸಕರಿಗೆ ಜಲ-ಆಕಾಶ ಮತ್ತು ಸೂರ್ಯಬಿಂಬಗಳಲ್ಲಿಯೂ ಲಿಂಗವು ಇರುವುದು.

ಕಾಷ್ಠಾದಿಷ್ವೇವ ಮೂರ್ಖಾಣಾಂ ಹೃದಿ ಲಿಂಗಂ ತು ಯೋಗಿನಾಮ್ ।
ಯದ್ಯನುತ್ಪನ್ನವಿಜ್ಞಾನೋ ವಿರಕ್ತಃ ಪ್ರೀತಿಸಂಯುತಃ ॥ ೯೯ ॥

ಯಾವಜ್ಜೀವಂ ಜಪೇದ್ಯುಕ್ತಃ ಪ್ರಣವಂ ಬ್ರಹ್ಮಣೋ ವಪುಃ ।
ಅಥವಾ ಶತರುದ್ರೀಯಂ ಜಪೇದಾಮರಣಾದ್ದ್ವಿಜಃ ॥ ೧೦೦ ॥

ಏಕಾಕೀ ಯತಚಿತ್ತಾತ್ಮಾ ಸ ಯಾತಿ ಪರಮಂ ಪದಮ್ ।
ವಸೇಚ್ಚಾಮರಣಾದ್ವಿಪ್ರಾ ವಾರಾಣಸ್ಯಾಂ ಸಮಾಹಿತಃ ॥ ೧೦೧ ॥

ಸೋಽಪೀಶ್ವರಪ್ರಸಾದೇನ ಯಾತಿ ತತ್ಪರಮಂ ಪದಮ್ ।
ತತ್ರೋತ್ಕ್ರಮಣಕಾಲೇ ಹಿ ಸರ್ವೇಷಾಮೇವ ದೇಹಿನಾಮ್ ॥ ೧೦೨ ॥

---

೯೯. ಮೂರ್ಖರಿಗೆ ಕಾಷ್ಠಾದಿಗಳಲ್ಲಿಯೇ ಲಿಂಗವು ಭಾಸಿಸುವುದು. ಯೋಗಿಗಳಿಗೆ ಮಾತ್ರ ಲಿಂಗವು ಹೃದಯದಲ್ಲಿರುವುದು, ಒಂದು ವೇಳೆ ವಿವೇಕ ವಿಜ್ಞಾನವು ಹುಟ್ಟದಿದ್ದರೆ ವಿರಕ್ತನೂ, ಪ್ರೀತಿಪೂರ್ಣನೂ ಆಗಿ ಈಶ್ವರೋಪಾಸನೆಯನ್ನು ಮಾಡಬಹುದು.

೧೦೦. ಅಂತಹ ದ್ವಿಜನು ಬ್ರಹ್ಮನ ದೇಹದಂತಿರುವ ಪ್ರಣವ ಮಂತ್ರವನ್ನು ಯೋಗಿಯಾಗಿ ಜೀವಂತನಾಗಿರುವವರೆಗೂ ಜಪಿಸಬೇಕು. ಅಥವಾ ಮರಣಪರ್ಯಂತವಾಗಿ ಶತರುದ್ರೀಯ ಸೂಕ್ತವನ್ನು ಜಪಿಸಬೇಕು.

೧೦೧. ವಿಪ್ರರೇ ! ಹಾಗೆ ಏಕಾಕಿಯೂ, ನಿಗ್ರಹಿಸಿದ ಮನಸ್ಸು ದೇಹಗಳುಳ್ಳವನೂ ಆಗಿ ಜಪಮಾಡಿದವನು. ಪರಮಪದವನ್ನು ಹೊಂದುತ್ತಾನೆ. ಅಥವಾ ಸಮಾಧಾನಚಿತ್ತನಾಗಿ ಮರಣಪರ್ಯಂತವಾಗಿ ಕಾಶೀಕ್ಷೇತ್ರದಲ್ಲಿ ವಾಸಮಾಡಬೇಕು.

೧೦೨. ಅಂತಹವನು ಈಶ್ವರಪ್ರಸಾದದಿಂದ ಗಮ್ಯವಾದ ಉತ್ತಮಪದವನ್ನು ಹೊಂದುತ್ತಾನೆ. ಕಾಶೀಕ್ಷೇತ್ರದಲ್ಲಿ ಸಮಸ್ತ ಪ್ರಾಣಿಗಳಿಗೂ ಪ್ರಾಣೋತ್ಕ್ರಮಣ ಸಮಯದಲ್ಲಿ ಜ್ಞಾನೋದಯವಾಗುವುದು.

ದದಾತಿ ಪರಮಂ ಜ್ಞಾನಂ ಯೇನ ಮುಚ್ಯೇತ ಬಂಧನಾತ್ ।
ವರ್ಣಾಶ್ರಮವಿಧಿಂ ಕೃತ್ಸ್ನಂ ಕುರ್ವಾಣೋ ಮತ್ಪರಾಯಣಃ ॥ ೧೦೩ ॥

ತೇನೈವ ಜನ್ಮನಾ ಜ್ಞಾನಂ ಲಬ್ಧ್ವಾ ಯಾತಿ ಶಿವಂ ಪದಮ್ ।
ಯೇಽಪಿ ತತ್ರ ವಸಂತೀಹ ನೀಚಾ ವೈ ಪಾಪಯೋನಯಃ ॥ ೧೦೪ ॥

ಸರ್ವೇ ತರಂತಿ ಸಂಸಾರಮೀಶ್ವರಾನುಗ್ರಹಾದ್ದ್ವಿಜಾಃ ।
ಕಿಂ ತು ವಿಘ್ನಾ ಭವಿಷ್ಯಂತಿ ಪಾಪೋಪಹತಚೇತಸಾಮ್ ॥ ೧೦೫ ॥

ಧರ್ಮಾನ್ ಸಮಾಶ್ರಯೇತ್ತಸ್ಮಾನ್ಮುಕ್ತಯೇ ಸತತಂ ದ್ವಿಜಾಃ ।
ಏತದ್ರಹಸ್ಯಂ ವೇದಾನಾಂ ನ ದೇಯಂ ಯಸ್ಯ ಚಿತ್ ॥ ೧೦೬ ॥

---

೧೦೩. ಈಶ್ವರನು ಶ್ರೇಷ್ಠವಾದ ತತ್ತ್ವಜ್ಞಾನವನ್ನು ಉಪದೇಶಿಸುವುದರಿಂದ ಪ್ರಾಣಿಯು ಬಂಧನದಿಂದ ಮುಕ್ತವಾಗುವನು. ಅಥವಾ ನನ್ನಲ್ಲಿ ಪರಮಗತಿಭಾವನೆಯುಳ್ಳವನಾಗಿ ಆಯಾಯ ವರ್ಣ-ಆಶ್ರಮಗಳಿಗೆ ವಿಹಿತವಾದ ಸಮಸ್ತ ಕರ್ಮಗಳನ್ನು ಆಚರಿಸಬೇಕು.

೧೦೪. ಆ ಕರ್ಮಾನುಷ್ಠಾನದಿಂದ ಒಂದೇ ಜನ್ಮದಲ್ಲಿ ಜ್ಞಾನವನ್ನು ಹೊಂದಿ ಪರಮಶಿವನ ಪದವನ್ನು ಹೊಂದುತ್ತಾನೆ. ಆ ಕ್ಷೇತ್ರದಲ್ಲಿ ಪಾಪಯೋನಿಯಲ್ಲಿ ಜನಿಸಿದ ಅನೇಕ ವಿಧ ಪ್ರಾಣಿಗಳು ವಾಸಮಾಡುವುವು.

೧೦೫. ದ್ವಿಜರೇ! ಈಶ್ವರಾನುಗ್ರಹದಿಂದ ಎಲ್ಲರೂ ಸಂಸಾರ ಬಂಧನವನ್ನು ದಾಟುತ್ತಾರೆ. ಆದರೆ ಪಾಪದಿಂದ ಮಲಿನವಾದ ಮಾನಸವುಳ್ಳ ಮನುಷ್ಯರಿಗೆ ಕಾಶೀಕ್ಷೇತ್ರವಾಸದಲ್ಲಿ ಅನೇಕ ವಿಘ್ನಗಳು ಒದಗುವುದುಂಟು.

೧೦೬. ದ್ವಿಜರೇ! ಆದ್ದರಿಂದ ಮುಕ್ತಿಗೋಸ್ಕರ ಸಂತತವಾಗಿ ಸದ್ಧರ್ಮಗಳನ್ನು ಆಚರಿಸಬೇಕು. ನಾನು ಉಪದೇಶಿಸಿದ ವೇದಸಾರವಾದ ಈ ರಹಸ್ಯವನ್ನು ಯಾರಾದರೊಬ್ಬ ಅಪಾತ್ರನಿಗೆ ಕೊಡಬಾರದು.

ಧಾರ್ಮಿಕಾಯೈವ ದಾತವ್ಯಂ ಭಕ್ತಾಯ ಬ್ರಹ್ಮಚಾರಿಣೇ ।

ವ್ಯಾಸ ಉವಾಚ :—

ಇತ್ಯೇತದುಕ್ತ್ವಾ ಭಗವಾನ್ ಶಾಶ್ವತೋ ಯೋಗಮುತ್ತಮಮ್॥೧೦೭॥

ವ್ಯಾಜಹಾರ ಸಮಾಸೀನಂ ನಾರಾಯಣಮನಾಮಯಮ್ ।
ಮಯೈತದ್ಭಾಷಿತಂ ಜ್ಞಾನಂ ಹಿತಾರ್ಥಂ ಬ್ರಹ್ಮವಾದಿನಾಮ್ ॥ ೧೦೮ ॥

ದಾತವ್ಯಂ ಶಾಂತಚಿತ್ತೇಭ್ಯಃ ಶಿಷ್ಯೇಭ್ಯೋ ಭವತಾ ಶಿವಮ್ ।
ಉಕ್ತ್ವೈವಮರ್ಥಂ ಯೋಗೀಂದ್ರಾನಬ್ರವೀದ್ಭಗವಾನಜಃ ॥ ೧೦೯ ॥

ಹಿತಾಯ ಸರ್ವಭಕ್ತಾನಾಂ ದ್ವಿಜಾತೀನಾಂ ದ್ವಿಜೋತ್ತಮಾಃ ।
ಭವಂತೋಽಪಿ ಹಿ ಮಜ್ಜ್ಞಾನಂ ಶಿಷ್ಯಾಣಾಂ ವಿಧಿಪೂರ್ವಕಮ್॥೧೧೦ ॥

---

೧೦೭. ಧಾರ್ಮಿಕನೂ, ಬ್ರಹ್ಮಚರ್ಯನಿಯಮವಂತನೂ ಮತ್ತು ನನ್ನ ಭಕ್ತನೂ ಆದ ಶಿಷ್ಯನಿಗೆ ಇದನ್ನು ಉಪದೇಶಿಸಬೇಕು. ವ್ಯಾಸಮುನಿಯು ಹೀಗೆಂದು ಹೇಳಿದನು:—ಭಗವಂತನೂ, ಶಾಶ್ವತನೂ ಆದ ಸರ್ವೇಶ್ವರನು ಈ ರೀತಿಯಾಗಿ ಉತ್ತಮವಾದ ಯೋಗವಿಧಿಯನ್ನು ಉಪದೇಶಿಸಿದನು.

೧೦೮. ಮತ್ತು ಸಮೀಪದಲ್ಲಿ ಕುಳಿತಿರುವ ಪೀಡಾರಹಿತನಾದ ಮಹಾ ವಿಷ್ಣುವನ್ನು ಕುರಿತು ಹೀಗೆಂದು ಹೇಳಿದನು:—ಬ್ರಹ್ಮವಾದಿಗಳಾದ ಮಹರ್ಷಿಗಳ ಹಿತಕ್ಕೋಸ್ಕರ ಈ ಜ್ಞಾನಯೋಗವು ನನ್ನಿಂದ ಉಪದೇಶಿಸಲ್ಪಟ್ಟಿತು.

೧೦೯. ಈ ಮಂಗಳಕರವಾದ ಜ್ಞಾನವು ನಿರ್ವಿಕಾರವಾದ ಚಿತ್ತವುಳ್ಳ ಶಿಷ್ಯರಿಗೆ ನಿನ್ನಿಂದ ಕೊಡಲ್ಪಡಬೇಕು. ಹೀಗೆಂದು ಹೇಳಿ ರಹಸ್ಯ ರಕ್ಷಣೆಗೋಸ್ಕರ ಪೂಜ್ಯನಾದ ಮಹೇಶ್ವರನು ಯೋಗಿಶ್ರೇಷ್ಠರನ್ನು ಕುರಿತು ಹೇಳಿದನು.

೧೧೦. ದ್ವಿಜಶ್ರೇಷ್ಠರೇ! ಸಮಸ್ತ ಭಕ್ತರಾದ ತ್ರೈವರ್ಣಿಕರ ಹಿತಕ್ಕೋಸ್ಕರ ನೀವು ಕೂಡ ಯೋಗ್ಯರಾದ ಸಚ್ಛಿಷ್ಯರಿಗೆ ಯಥಾವಿಧಿಯಾಗಿ ಈ ಜ್ಞಾನವನ್ನು ಉಪದೇಶಮಾಡಿರಿ.

ಉಪದೇಕ್ಷ್ಯಂತಿ ಭಕ್ತಾನಾಂ ಸರ್ವೇಷಾಂ ವಚನಾನ್ಮಮ ।
ಅಯಂ ನಾರಾಯಣೋ ಯೋಽಸಾವೀಶ್ವರೋ ನಾತ್ರ ಸಂಶಯಃ ॥

ನಾಂತರಂ ಯೇ ಪ್ರಪಶ್ಯಂತಿ ತೇಷಾಂ ದೇಯಮಿದಂ ಪರಮ್ ।
ಮಮೈಷಾ ಪರಮಾ ಮೂರ್ತಿರ್ನಾರಾಯಣಸಮಾಹ್ವಯಾ ॥ ೧೧೨ ॥

ಸರ್ವಭೂತಾತ್ಮಭೂತಸ್ಥಾ ಶಾಂತಾ ಚಾಕ್ಷರಸಂಸ್ಥಿತಿಃ ।
ಯೇಽನ್ಯಥಾ ಮಾಂ ಪ್ರಪಶ್ಯಂತಿ ಲೋಕೇ ಭೇದದೃಶೋ ಜನಾಃ ॥

ನ ತೇ ಮುಕ್ತಿಂ ಪ್ರಪಶ್ಯಂತಿ ಜಾಯಂತೇ ಚ ಪುನಃ ಪುನಃ ।
ಯೇ ತ್ವೇನಂ ವಿಷ್ಣುಮವ್ಯಕ್ತಂ ಮಾಂ ಚ ದೇವಂ ಮಹೇಶ್ವರಮ್ ॥

---

೧೧೧. ಭಕ್ತರಾದ ನಿಮ್ಮೆಲ್ಲರಿಗೂ ನಾನು ಆಜ್ಞಾಪಿಸಿದಂತೆ ನೀವು ಸತ್ಪಾತ್ರರಲ್ಲಿ ಈ ಜ್ಞಾನವನ್ನು ಉಪದೇಶಮಾಡಿರಿ, ನನ್ನ ಪಾರ್ಶ್ವದಲ್ಲಿರುವ ನಾರಾಯಣನೆಂಬುವನು ಸಾಕ್ಷಾತ್ತಾಗಿ ಪರಮೇಶ್ವರನೇ ಆಗಿರುವನು. ಇದರಲ್ಲಿ ಸಂಶಯವಿಲ್ಲ.

೧೧೨. ನಾರಾಯಣನೆಂಬ ನಾಮಾಂಕನವುಳ್ಳ ಈ ಮೂರ್ತಿಯು ನನ್ನದೇ ಉತ್ತಮವಾದ ರೂಪವಾಗಿರುವುದು. ನನಗೂ ನಾರಾಯಣನಿಗೂ ಭೇದವನ್ನು ಯಾರು ಭಾವಿಸುವುದಿಲ್ಲವೊ. ಅವರಿಗೆ ಮಾತ್ರ ಈ ಜ್ಞಾನವನ್ನು ಉಪದೇಶಿಸಬೇಕು.

೧೧೩. ಈ ನಾರಾಯಣಮೂರ್ತಿಯು ಸಮಸ್ತ ಭೂತಗಳಿಗೆ ಆತ್ಮಭೂತವಾಗಿರುವುದೂ, ಶಾಂತಾಕಾರವೂ ಮತ್ತು ಅಕ್ಷರಸ್ವರೂಪದಲ್ಲಿರುವುದೂ ಆಗಿದೆ. ಕೆಲವು ಅಜ್ಞರಾದ ಮನುಷ್ಯರು ನಾರಾಯಣನಿಗಿಂತ ಭಿನ್ನನನ್ನಾಗಿ ನನ್ನನ್ನು ತಿಳಿಯುತ್ತಾರೆ.

೧೧೪. ಆದರೆ ಅಂತಹ ಅಜ್ಞಾನಿಗಳು ಮುಕ್ತಿಯನ್ನು ನೋಡುವಂತಿಲ್ಲ. ಹಾಗೂ ಮತ್ತೆ ಮತ್ತೆ ಜನ್ಮಪ್ರವಾಹವನ್ನು ಹೊಂದುತ್ತಾರೆ. ಅತೀಂದ್ರಿಯನಾದ ಮಹಾವಿಷ್ಣುವನ್ನೂ ಮಹೇಶ್ವರನಾದ ನನ್ನನ್ನೂ ಐಕ್ಯಭಾವನೆಯಿಂದ ನೋಡಬೇಕು.

ಏಕೀಭಾವೇನ ಪಶ್ಯಂತಿ ನ ತೇಷಾಂ ಪುನರುದ್ಭವಃ ।
ತಸ್ಮಾದನಾದಿನಿಧನಂ ವಿಷ್ಣುಮಾತ್ಮಾನಮವ್ಯಯಮ್ ॥ ೧೧೫ ॥

ಮಾಮೇವ ಸಂಪ್ರಪಶ್ಯಧ್ವಂ ಪೂಜಯಧ್ವಂ ತಥೈವ ಚ ।
ಯೇಽನ್ಯಥಾ ಸಂಪ್ರಪಶ್ಯಂತಿ ಮತ್ವೈವಂ ದೇವತಾಂತರಮ್ ॥ ೧೧೬ ॥

ತೇ ಯಾಂತಿ ನರಕಾನ್ ಘೋರಾನ್ನಾಹಂ ತೇಷು ವ್ಯವಸ್ಥಿತಃ ।
ಮೂರ್ಖಂ ವಾ ಪಂಡಿತಂ ವಾಪಿ ಬ್ರಾಹ್ಮಣಂ ವಾ ಮದಾಶ್ರಯಮ್ ॥

ಮೋಚಯಾಮಿ ಶ್ವಪಾಕಂ ವಾ ನ ನಾರಾಯಣನಿಂದಕಮ್ ।
ತಸ್ಮಾದೇಷ ಮಹಾಯೋಗೀ ಮದ್ಭಕ್ತೈಃ ಪುರುಷೋತ್ತಮಃ ॥ ೧೧೮ ॥

---

೧೧೫. ಹಾಗೆ ಐಕ್ಯಭಾವನೆಯಿಂದ ನಮ್ಮನ್ನು ಸಾಕ್ಷಾತ್ಕರಿಸಿದ ಭಕ್ತರಿಗೆ ಪುನರುತ್ಪತ್ತಿಯು ಇರುವುದಿಲ್ಲ. ಆದುದರಿಂದ ಆದಿ-ಅಂತಗಳಿಂದ ವರ್ಜಿತನೂ, ವ್ಯಯಶೂನ್ಯನೂ ಆದ ವಿಷ್ಣುವನ್ನು ನನ್ನ ಐಕ್ಯರೂಪದಿಂದ ತಿಳಿಯಿರಿ.

೧೧೬. ಮತ್ತು ವಿಷ್ಣುವಿನ ಅಭೇದ ಭಾವನೆಯಿಂದ ನನ್ನನ್ನು ತಿಳಿದು ಹಾಗೆಯೇ ನನ್ನನ್ನು ಪೂಜಿಸಿರಿ. ಅದನ್ನು ಬಿಟ್ಟು ಬೇರೆ ವಿಧವಾಗಿ ನನ್ನನ್ನು ತಿಳಿಯಬಾರದು. ಹಾಗೆ ದೇವತಾಂತರವೆಂದು ತಿಳಿಯುವುದು ಅನರ್ಥಕ್ಕೆ ನಿಮಿತ್ತವಾಗುವುದು.

೧೧೭. ಅಂತಹವರು ಅತ್ಯುಗ್ರವಾದ ನರಕವನ್ನು ಸೇರುವರು. ನಾನು ಆ ಅಜ್ಞಾನಿಗಳಲ್ಲಿ ವಾಸಮಾಡುವುದಿಲ್ಲ. ಮೂರ್ಖ ಅಥವಾ ಪಂಡಿತನನ್ನಾಗಲೀ ಬ್ರಾಹ್ಮಣನನ್ನಾಗಲೀ ನನ್ನನ್ನು ಆಶ್ರಯಿಸಿದ ಮಾನವನನ್ನು ನಾನು ಮುಕ್ತನನ್ನಾಗಿ ಮಾಡುವೆನು.

೧೧೮. ಅಥವಾ ಚಂಡಾಲನಿಗಾದರೂ ಮುಕ್ತಿಯನ್ನು ಕೊಡುತ್ತೇನೆ. ಆದರೆ ವಿಷ್ಣುವನ್ನು ನಿಂದಿಸುವವನಿಗೆ ಮುಕ್ತಿಯನ್ನು ಕೊಡುವುದಿಲ್ಲ. ಆದ್ದರಿಂದ ಮಹಾ ಯೋಗಿಯಾದ ಪುರುಷೋತ್ತಮನು ಭಕ್ತರಿಂದ ಪೂಜಿಸಲ್ಪಡಬೇಕು.

ಅರ್ಚನೀಯೋ ನಮಸ್ಕಾರ್ಯೋ ಮತ್ಪ್ರೀತಿಜನನಾಯ ವೈ ।
ಏವಮುಕ್ತ್ವಾ ವಾಸುದೇವಮಾಲಿಂಗ್ಯ ಸ ಪಿನಾಕಧೃಕ್ ॥ ೧೧೯ ॥

ಅಂತರ್ಹಿತೋಽಭವತ್ತೇಷಾಂ ಸರ್ವೇಷಾಮೇವ ಪಶ್ಯತಾಮ್ ।
ನಾರಾಯಣೋಽಪಿ ಭಗವಾಂಸ್ತಾಪಸಂ ವೇಷಮುತ್ತಮಮ್ ॥ ೧೨೦ ॥

ಜಗ್ರಾಹ ಯೋಗಿನಃ ಸರ್ವಾಂಸ್ತ್ಯಕ್ತ್ವಾ ವೈ ಪರಮಂ ವಪುಃ ।
ಜ್ಞಾನಂ ಭವದ್ಭಿರಮಲಂ ಪ್ರಸಾದಾತ್ಪರಮೇಷ್ಠಿನಃ ॥ ೧೨೧ ॥

ಸಾಕ್ಷಾದೇವ ಮಹೇಶಸ್ಯ ಜ್ಞಾನಂ ಸಂಸಾರನಾಶನಮ್ ।
ಗಚ್ಛಧ್ವಂ ವಿಜ್ವರಾಃ ಸರ್ವೇ ವಿಜ್ಞಾನಂ ಪರಮೇಷ್ಠಿನಃ ॥ ೧೨೨ ॥

---

೧೧೯. ಮತ್ತು ಅರ್ಚನೆ-ನಮಸ್ಕಾರಗಳಿಂದ ಮಹಾವಿಷ್ಣುವನ್ನು ನನ್ನ ಪ್ರೀತಿಗೋಸ್ಕರ ಸೇವಿಸಬೇಕು. ಪಿನಾಕಾಯುಧ ಧಾರಿಯಾದ ಪರಮೇಶ್ವರನು ವಾಸುದೇವನನ್ನು ಆಲಿಂಗಿಸಿಕೊಂಡು ಹೀಗೆ ಹೇಳಿದನು.

೧೨೦. ಮತ್ತು ಅವರೆಲ್ಲರೂ ನೋಡುತ್ತಿರುವಷ್ಟರಲ್ಲಿ ಮಹೇಶ್ವರನು ಅಂತರ್ಧಾನಹೊಂದಿದನು. ಆಗ ಷಡ್ಗುಣೈಶ್ವರ್ಯ ಸಂಪನ್ನನಾದ ನಾರಾಯಣನು ಉತ್ತಮವಾದ ತಪಸ್ವಿ ವೇಷವನ್ನು ಧರಿಸಿದನು.

೧೨೧. ಹಾಗು ತನ್ನ ದಿವ್ಯವಾದ ದೇಹವನ್ನು ತ್ಯಜಿಸಿ ತಾಪಸವೇಷವನ್ನು ಪರಿಗ್ರಹಿಸಿ ಎಲ್ಲ ಯೋಗಿಗಳಿಗೆ ಹೀಗೆಂದು ಹೇಳಿದನು. ಪೂಜ್ಯಸ್ಥಾನದಲ್ಲಿರುವ ಮಹೇಶ್ವರನ ಅನುಗ್ರಹದಲ್ಲಿರುವ ನಿಮ್ಮಿಂದ ನಿರ್ಮಲವಾದ ಜ್ಞಾನಯೋಗವು ಶ್ರವಣಮಾಡಲ್ಪಟ್ಟಿತು.

೧೨೨. ತಾಪರಹಿತರಾದ ನೀವೆಲ್ಲರೂ ಪೂಜ್ಯಸ್ಥಾನದಲ್ಲಿರುವವನೂ, ದೇವೋತ್ತಮನೂ ಆದ ಮಹೇಶ್ವರನ ಸಂಸಾರ ರೋಗವನ್ನು ಶಾಂತಿಮಾಡುವ ವಿಜ್ಞಾನವನ್ನು ಹೊಂದಿರುವಿರಿ. ಮುಂದೆ ನಿಮ್ಮ ಸ್ಥಳಕ್ಕೆ ಹೊರಡಿರಿ.

ಪ್ರವರ್ತಯಧ್ವಂ ಶಿಷ್ಯೇಭ್ಯೋ ಧಾರ್ಮಿಕೇಭ್ಯೋ ಮುನೀಶ್ವರಾಃ ।
ಇದಂ ಭಕ್ತಾಯ ಶಾಂತಾಯ ಧಾರ್ಮಿಕಾಯಾಹಿತಾಗ್ನಯೇ ॥ ೧೨೩ ॥

ವಿಜ್ಞಾನಮೈಶ್ವರಂ ದೇಯಂ ಬ್ರಾಹ್ಮಣಾಯ ವಿಶೇಷತಃ ।
ಏವಮುಕ್ತ್ವಾ ಸ ವಿಶ್ವಾತ್ಮಾ ಯೋಗಿನಾಂ ಯೋಗವಿತ್ತಮಃ ॥ ೧೨೪ ॥

ನಾರಾಯಣೋ ಮಹಾಯೋಗೀ ಜಗಾಮಾದರ್ಶನಂ ಸ್ವಯಮ್ ।
ಋಷಯಸ್ತೇಽಪಿ ದೇವೇಶಂ ನಮಸ್ಕೃತ್ಯ ಮಹೇಶ್ವರಮ್ ॥ ೧೨೫ ॥

ನಾರಾಯಣಂ ಚ ಭೂತಾದಿಂ ಸ್ವಾನಿ ಸ್ಥಾನಾನಿ ಲೇಭಿರೇ ।
ಸನತ್ಕುಮಾರೋ ಭಗವಾನ್ ಸಂವರ್ತಾಯ ಮಹಾಮುನಿಃ ॥ ೧೨೬ ॥

---

೧೨೩. ಮುನೀಶ್ವರರೇ! ಧರ್ಮಮಾರ್ಗಸರರಾದ ಶಿಷ್ಯರಲಿ ಇದನ್ನು ಪ್ರಚಾರಮಾಡಿರಿ. ಇದನ್ನು ಭಕ್ತನೂ ಮನಶ್ಶಾಂತಿಯುಳ್ಳವನೂ, ದರ್ಮತತ್ಪರನೂ ಮತ್ತು ಅಗ್ನ್ಯಾಧಾನಮಾಡಿದವನೂ ಆದ ಶಿಷ್ಯನಿಗೆ ಉಪದೇಶಮಾಡಬೇಕು.

೧೨೪. ಈ ಈಶ್ವರವಿಜ್ಞಾನವನ್ನು ವಿಶೇಷವಾಗಿ ಬ್ರಾಹ್ಮಣ ಶಿಷ್ಯನಿಗೆ ಉಪದೇಶಿಸಬೇಕು. ಯೋಗಜ್ಞಾನಿಗಳಲ್ಲಿ ಶ್ರೇಷ್ಠನೂ, ವಿಶ್ವರೂಪನೂ ಆದ ಮಹಾವಿಷ್ಣುವು ಯೋಗಿಗಳಿಗೆ ಹೀಗೆಂದು ಹೇಳಿದನು.

೧೨೫. ಮಹಾಯೋಗಿಯಾದ ಶ್ರೀಮನ್ನಾರಾಯಣನು ಹೀಗೆಂದು ಹೇಳಿ ತಾನು ಅಂತರ್ಧಾನವನ್ನು ಹೊಂದಿದನು. ಆಗ ಆ ಮುನಿಗಳೆಲ್ಲರೂ ದೇವತೆಗಳ ನಿಯಾಮಕನಾದ ಮಹೇಶ್ವರನನ್ನು ನಮಸ್ಕರಿಸಿದರು.

೧೨೬. ಮತ್ತು ಸಮಸ್ತ ಭೂತಗಳಿಗೆ ಆದಿಯಾದ ನಾರಾಯಣನನ್ನು ನಮಸ್ಕರಿಸಿ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ತರುವಾಯ ಪೂಜ್ಯನಾದ ಸನತ್ಕುಮಾರ ಮಹಾಮುನಿಯು ಸಂವರ್ತನೆಂಬ ಶಿಷ್ಯನಿಗೆ ಉಪದೇಶಿಸಿದನು.

ದತ್ತವಾನೈಶ್ವರಂ ಜ್ಞಾನಂ ಸೋಽಪಿ ಸತ್ಯವ್ರತಾಯ ತು ।
ಸನಂದನೋಽಪಿ ಯೋಗೀಂದ್ರಃ ಪುಲಹಾಯ ಮಹರ್ಷಯೇ ॥ ೧೨೭ ॥

ಪ್ರದದೌ ಗೌತಮಾಯಾಥ ಪುಲಹೋಽಪಿ ಪ್ರಜಾಪತಿಃ ।
ಅಂಗಿರಾ ವೇದವಿದುಷೇ ಭಾರದ್ವಾಜಾಯ ದತ್ತವಾನ್ ॥ ೧೨೮ ॥

ಜೈಗೀಷವ್ಯಾಯ ಕಪಿಲಸ್ತಥಾ ಪಂಚಶಿಖಾಯ ಚ ।
ಪರಾಶರೋಽಪಿ ಸನಕಾತ್ ಪಿತಾ ಮೇ ಸರ್ವತತ್ತ್ವದೃಕ್ ॥ ೧೨೯ ॥

ಲೇಭೇ ತತ್ಪರಮಂ ಜ್ಞಾನಂ ತಸ್ಮಾದ್ವಾಲ್ಮೀಕಿರಾಪ್ತವಾನ್ ।
ಮಮೋವಾಚ ಪುರಾ ದೇವಃ ಸತೀದೇಹಭವಾಂಗಜಃ ॥ ೧೩೦ ॥

---

೧೨೭. ಮುಂದೆ ಆ ಸಂವರ್ತನು ಈಶ್ವರನ ಜ್ಞಾನಯೋಗವನ್ನು ಸತ್ಯವ್ರತ ಎಂಬ ಶಿಷ್ಯನಿಗೆ ಉಪದೇಶಿಸಿದನು. ಸನಂದನ ಎಂಬ ಯೋಗೀಂದ್ರನು ಪುಲಹ ಎಂಬ ಮಹರ್ಷಿಗೆ ಇದನ್ನು ಉಪದೇಶಿಸಿದನು.

೧೨೮. ಅನಂತರದಲ್ಲಿ ಪುಲಹಪ್ರಜಾಪತಿಯು ತನ್ನ ಶಿಷ್ಯನಾದ ಗೌತಮ ಮುನಿಗೆ ಜ್ಞಾನಯೋಗವನ್ನು ಕೊಟ್ಟನು. ಅಂಗಿರಮುನಿಯು ವೇದಾರ್ಥಗಳನ್ನು ಬಲ್ಲ ಭಾರದ್ವಾಜಮುನಿಗೆ ಉಪದೇಶಿಸಿದನು.

೧೨೯. ಹಾಗೂ ಕಪಿಲ ಮಹಾಮುನಿಯು ಜೈಗೀಷವ್ಯ ಮತ್ತು ಪಂಚಶಿಖ ಎಂಬ ಇಬ್ಬರು ಶಿಷ್ಯರಿಗೆ ಉಪದೇಶಿಸಿದನು. ಸಮಸ್ತ ತತ್ತ್ವಾರ್ಥಗಳನ್ನು ತಿಳಿದಿರುವ ನನ್ನ ಜನಕನಾದ ಪರಾಶರಮುನಿಯು ಸನಕ ಮುನಿಯಿಂದ ಜ್ಞಾನಯೋಗವನ್ನು ಗ್ರಹಿಸಿದನು.

೧೩೦. ಆ ಪರಾಶರ ಮುನಿಯಿಂದ ವಾಲ್ಮೀಕಿ ಮುನಿಯು ಉತ್ತಮವಾದ ಆ ಈಶ್ವರಜ್ಞಾನವನ್ನು ಹೊಂದಿದನು. ಪೂರ್ವದಲ್ಲಿ ಸತೀದೇವಿಯಲ್ಲಿ ಶಿವನ ಪುತ್ರನಾಗಿ ಹುಟ್ಟಿದ ಕುಮಾರಸ್ವಾಮಿಯು ನನಗೆ ಉಪದೇಶಿಸಿದನು.

ವಾಮದೇವೋ ಮಹಾಯೋಗೀ ರುದ್ರಃ ಕಾಲಪಿನಾಕಧೃಕ್ ।
ನಾರಾಯಣೋಽಪಿ ಭಗವಾನ್ ದೇವಕೀತನಯೋ ಹರಿಃ　　॥ ೧೩೧ ॥

ಅರ್ಜುನಾಯ ಸ್ವಯಂ ಸಾಕ್ಷಾದ್ದತ್ತವಾನಿದಮುತ್ತಮಮ್ ।
ಯದಾಹಂ ಲಬ್ಧವಾನ್ ರುದ್ರಾದ್ವಾಮದೇವಾದನುತ್ತಮಮ್ ॥ ೧೩೨ ॥

ವಿಶೇಷಾದ್ಗಿರಿಶೇ ಭಕ್ತಿಸ್ತಸ್ಮಾದಾರಭ್ಯ ಮೇಽಭವತ್ ।
ಶರಣ್ಯಂ ಗಿರಿಶಂ ರುದ್ರಂ ಪ್ರಪನ್ನೋಽಹಂ ವಿಶೇಷತಃ　　॥ ೧೩೩ ॥

ಭೂತೇಶಂ ಗಿರಿಶಂ ಸ್ಥಾಣುಂ ದೇವದೇವಂ ತ್ರಿಶೂಲಿನಮ್ ।
ಭವಂತೋಽಪಿ ಹಿ ತಂ ದೇವಂ ಶಂಭುಂ ಗೋವೃಷವಾಹನಮ್ ॥೧೩೪॥

---

೧೩೧. ನನಗೆ ಜ್ಞಾನಯೋಗವನ್ನು ಉಪದೇಶಿಸಿದ ಗುರುವು ಮೃತ್ಯುವಿನಂತಿರುವ ಪಿನಾಕಾಯುಧವನ್ನು ಧರಿಸಿರುವ ಮಹಾಯೋಗಿಯಾದ ಮತ್ತು ರುದ್ರರೂಪಿಯಾದ ವಾಮದೇವನಾಗಿರುವನು. ದೇವಕಿಯ ಪುತ್ರನೂ, ಪೂಜ್ಯನೂ, ಸಮುದ್ರ ಮಧ್ಯವಾಸಿಯೂ ಆದ ಹರಿಯು ಜ್ಞಾನಮಾರ್ಗವನ್ನು ಪ್ರಚಾರಮಾಡಿದನು.

೧೩೨. ಅವನು ಅರ್ಜುನನಿಗೆ ಉತ್ತಮವಾದ ಜ್ಞಾನಯೋಗವನ್ನು ತಾನೇ ಸಾಕ್ಷಾತ್ತಾಗಿ ಉಪದೇಶಕೊಟ್ಟನು. ಹಿಂದೆ ನಾನು ವಾಮದೇವನೆಂಬ ರುದ್ರಮೂರ್ತಿಯಿಂದ ಉತ್ತಮವಾದ ಜ್ಞಾನಯೋಗವನ್ನು ಹೊಂದಿರುವೆನಷ್ಟೆ.

೧೩೩. ಆ ಮೊದಲುಗೊಂಡು ನನಗೆ ವಿಶೇಷವಾಗಿ ಕೈಲಾಸಾದ್ರಿವಾಸಿಯಾದ ಈಶ್ವರನಲ್ಲಿ ಭಕ್ತಿಯುಂಟಾಯಿತು. ಆದ್ದರಿಂದ ಸರ್ವರಕ್ಷಕನೂ, ಕೈಲಾಸಾದ್ರಿವಿಹಾರಿಯೂ ಆದ ರುದ್ರನನ್ನು ವಿಶೇಷವಾಗಿ ಭಜಿಸುವೆನು.

೧೩೪. ನೀವೂ ಕೂಡ ಭೂತಾಧಿಪತಿಯೂ, ಕೈಲಾಸಶಾಯಿಯೂ, ಶಾಶ್ವತನೂ, ದೇವೋತ್ತಮನೂ, ತ್ರಿಶೂಲಧಾರಿಯೂ ಮತ್ತು ವೃಷಭವಾಹನವುಳ್ಳವನೂ ಆದ ಆ ಮಹೇಶ್ವರಸ್ವಾಮಿಯನ್ನು ಭಜಿಸಿರಿ.

ಪ್ರಪದ್ಯಂತಾಂ ಸಪತ್ನೀಕಾಃ ಸಪುತ್ರಾಃ ಶರಣಂ ಶಿವಮ್ ।
ವರ್ತಧ್ವಂ ತತ್ಪ್ರಸಾದೇನ ಕರ್ಮಯೋಗೇನ ಶಂಕರಮ್ ॥ ೧೩೫ ॥

ಪೂಜಯಧ್ವಂ ಮಹಾದೇವಂ ಗೋಪತಿಂ ವ್ಯಾಲಭೂಷಣಮ್ ।
ಏವಮುಕ್ತೇ ಪುನಸ್ತೇ ತು ಶೌನಕಾದ್ಯಾ ಮಹೇಶ್ವರಮ್ ॥ ೧೩೬ ॥

ಪ್ರಣೇಮುಃ ಶಾಶ್ವತಂ ಸ್ಥಾಣುಂ ವ್ಯಾಸಂ ಸತ್ಯವತೀಸುತಮ್ ।
ಅಬ್ರುವನ್ ಹೃಷ್ಟಮನಸಃ ಕೃಷ್ಣದ್ವೈಪಾಯನಂ ಪ್ರಭುಮ್ ॥ ೧೩೭ ॥

ಸಾಕ್ಷಾದ್ದೇವಂ ಹೃಷೀಕೇಶಂ ಶಿವಂ ಲೋಕಮಹೇಶ್ವರಮ್ ।
ಭವತ್ಪ್ರಸಾದಾದಚಲಾ ಶರಣ್ಯೇ ಗೋವೃಷಧ್ವಜೇ ॥ ೧೩೮ ॥

---

೧೩೫. ನೀವು ಪತ್ನಿ-ಪುತ್ರರಿಂದ ಕೂಡಿ ಮಹೇಶ್ವರನನ್ನು ಶರಣುಹೊಂದಿರಿ. ಆ ಮಹೇಶ್ವರನ ಅನುಗ್ರಹದಿಂದ ಸ್ಥಿತಿಯನ್ನು ನಿರ್ವಹಿಸಿರಿ. ಮತ್ತು ಶಂಕರನ ತೃಪ್ತಿಗೋಸ್ಕರ ಕರ್ಮಯೋಗವನ್ನು ಆಚರಿಸಿರಿ.

೧೩೬. ನಾಗೇಂದ್ರಭೂಷಣನೂ, ನಂದಿವಾಹನಾಧೀಶ್ವರನೂ ಆದ ಮಹಾ ದೇವನನ್ನು ನೀವು ಪೂಜಿಸಿರಿ. ಹೀಗೆಂದು ವ್ಯಾಸಮುನಿಯಿಂದ ಹೇಳಲ್ಪಡಲಾಗಿ ಶೌನಕ ಮುಂತಾದ ಸಮಸ್ತ ಮಹರ್ಷಿಗಳು ಮಹೇಶ್ವರನನ್ನು ನಮಸ್ಕರಿಸಿದರು

೧೩೭. ಮತ್ತು ಸಂತುಷ್ಟವಾದ ಮಾನಸವುಳ್ಳವರಾಗಿ ಸ್ಥಿರನೂ, ಶಾಶ್ವತನೂ, ಆದ ಈಶ್ವರನನ್ನು ನಮಸ್ಕರಿಸಿ ಸತ್ಯವತೀ ಪುತ್ರನೂ, ಪ್ರಭುವೂ ಮತ್ತು ಕೃಷ್ಣ ದ್ವೈಪಾಯನ ನಾಮಾಂಕಿತನೂ ಆದ ವ್ಯಾಸಮುನಿಯನ್ನು ಕುರಿತು ಹೇಳಿದರು.

೧೩೮. ಲೋಕಗಳಿಗೆ ಅಧಿಪತಿಯೂ, ಮಂಗಳಕರನೂ, ಸರ್ವೇಂದ್ರಿಯ ಪ್ರೇರಕನೂ ಆದ ಶ್ರೀಮನ್ನಾರಾಯಣನ ಅವತಾರವಾದ ವ್ಯಾಸಮುನಿಗೆ ಹೀಗೆ ಹೇಳಿದರು. ಮುನಿಯೇ ! ಸರ್ವರಕ್ಷಕನೂ, ವೃಷಭಚಿಹ್ನೆಯಿಂದ ಅಂಕಿತವಾದ ಧ್ವಜವುಳ್ಳವನೂ ಆದ ಶಿವನಲ್ಲಿ ನಿನ್ನ ಅನುಗ್ರಹದಿಂದ ಶಾಶ್ವತವಾದ ಮನೋವೃತ್ತಿಯು ಜನಿಸಿರುವುದು.

ಇದಾನೀಂ ಜಾಯತೇ ಭಕ್ತಿರ್ಯಾ ದೇವೈರಪಿ ದುರ್ಲಭಾ ।
ಕಥಯಸ್ವ ಮುನಿಶ್ರೇಷ್ಠ ಕರ್ಮಯೋಗಮನುತ್ತಮಮ್ ॥ ೧೪೯ ॥

ಯೇನಾಸೌ ಭಗವಾನೀಶಃ ಸಮಾರಾಧ್ಯೋ ಮುಮುಕ್ಷುಭಿಃ ।
ತ್ವತ್ಸನ್ನಿಧಾವೇವ ಸೂತಃ ಶೃಣೋತು ಭಗವದ್ವಚಃ ॥ ೧೫೦ ॥

ತದ್ವಚ್ಚಾಖಿಲಲೋಕಾನಾಂ ರಕ್ಷಣಂ ಧರ್ಮಸಂಗ್ರಹಮ್ ।
ಯದುಕ್ತಂ ದೇವದೇವೇನ ವಿಷ್ಣುನಾ ಕೂರ್ಮರೂಪಿಣಾ ॥ ೧೫೧ ॥

ಪೃಷ್ಟೇನ ಮುನಿಭಿಃ ಸರ್ವಂ ಶಕ್ರೇಣಾಮೃತಮಂಥನೇ ।
ಶ್ರುತ್ವಾ ಸತ್ಯವತೀಸೂನುಃ ಕರ್ಮಯೋಗಂ ಸನಾತನಮ್ ॥ ೧೫೨ ॥

---

೧೪೯. ಮುನಿಶ್ರೇಷ್ಠನೇ! ದೇವತೆಗಳಿಗೂ ಅಲಭ್ಯವಾದ ತೀವ್ರಭಕ್ತಿಯು ಈಗ ನಮಗೆ ಉಂಟಾಗಿದೆ. ಇನ್ನು ಮುಂದೆ ಸರ್ವೋತ್ತಮವಾದ ಕರ್ಮಯೋಗವನ್ನು ವಿಸ್ತಾರವಾಗಿ ಉಪದೇಶಮಾಡು.

೧೫೦. ಆ ಕರ್ಮಯೋಗದಿಂದ ಷಡ್ಗುಣೈಶ್ವರ್ಯಸಂಪನ್ನನಾದ ಮಹೇಶ್ವರನು ಮುಮುಕ್ಷುಜನಗಳಿಂದ ಆರಾಧಿಸಲ್ಪಡುವನು. ಈ ಸೂತಮಹಾಮುನಿಯು ನಿನ್ನ ಸನ್ನಿಧಿಯಲ್ಲಿಯೇ ಭಗವಂತನ ಉಪದೇಶವಚನವನ್ನು ಕೇಳಲಿ.

೧೫೧. ಅದರಂತೆ ಸಮಸ್ತ ಲೋಕಗಳನ್ನು ರಕ್ಷಿಸುವ, ಧರ್ಮಸಂಗ್ರಹದಿಂದ ಕೂಡಿದ ಕರ್ಮಯೋಗವನ್ನು ಹೇಳು. ಈ ಕರ್ಮಯೋಗವು ಕೂರ್ಮರೂಪವನ್ನು ಧರಿಸಿದವನೂ, ದೇವೋತ್ತಮನೂ ಆದ ವಿಷ್ಣುವಿನಿಂದ ನಿನಗೆ ಹೇಳಲ್ಪಟ್ಟಿತು.

೧೫೨. ಪೂರ್ವದಲ್ಲಿ ಇಂದ್ರನು ಅಮೃತಮಥನವನ್ನು ಮಾಡುವ ಸಮಯದಲ್ಲಿ ಸಮಸ್ತ ಕರ್ಮಯೋಗವನ್ನು ಮುನಿಗಳು ಕೂರ್ಮಮೂರ್ತಿಯನ್ನು ಕುರಿತು ಪ್ರಶ್ನೆ ಮಾಡಿದ್ದರು. ಆಗ ಸತ್ಯವತೀ ಪುತ್ರನಾದ ವ್ಯಾಸಮುನಿಯು ಸನಾತನವಾದ ಕರ್ಮ ಯೋಗವನ್ನು ಶ್ರವಣಮಾಡಿರುವನು.

ಮುನೀನಾಂ ಭಾಷಿತಂ ಕೃತ್ಸ್ನಂ ಪ್ರೋವಾಚ ಸುಸಮಾಹಿತಃ ।
ಯ ಇಮಂ ಪಠತೇ ನಿತ್ಯಂ ಸಂವಾದಂ ಕೃತ್ತಿವಾಸಸಃ ॥ ೧೪೩ ॥

ಸನತ್ಕುಮಾರಪ್ರಮುಖೈಃ ಸರ್ವಪಾಪೈಃ ಪ್ರಮುಚ್ಯತೇ ।
ಶ್ರಾವಯೇದ್ವಾ ದ್ವಿಜಾನ್ ಶುದ್ಧಾನ್ ಬ್ರಹ್ಮಚರ್ಯಪರಾಯಣಾನ್ ॥

ಯೋ ವಾ ವಿಚಾರಯೇದರ್ಥಂ ಸ ಯಾತಿ ಪರಮಾಂ ಗತಿಮ್ ।
ಯಶ್ಚೈತಚ್ಛೃಣುಯಾನ್ನಿತ್ಯಂ ಭಕ್ತಿಯುಕ್ತೋ ದೃಢವ್ರತಃ ॥ ೧೪೫ ॥

ಸರ್ವಪಾಪವಿನಿರ್ಮುಕ್ತೋ ಬ್ರಹ್ಮಲೋಕೇ ಮಹೀಯತೇ ॥ ೧೪೬ ॥

---

೧೪೩. ಅಂತಹ ವ್ಯಾಸಮುನಿಯು ಸಮಾಧಾನದಿಂದ ಕೂಡಿದ ಚಿತ್ತವುಳ್ಳವನಾಗಿ ಮುನಿಗಳ ಸಂಪೂರ್ಣ ವಚನವನ್ನು ಕೇಳಿ ಪ್ರತ್ಯುತ್ತರ ಹೇಳಿದನು. ಹೀಗೆ ಈಶ್ವರನಿಗೆ ಸನತ್ಕುಮಾರಾದಿ ಮಹರ್ಷಿಗಳ ಸಂಗಡ ನಡೆದ ಸಂವಾದವನ್ನು ಮಾನವನು ಪಠನಮಾಡಬೇಕು.

೧೪೪. ಶಿವ-ಸನತ್ಕುಮಾರ ಸಂವಾದವನ್ನು ಶ್ರವಣಮಾಡುವುದರಿಂದಲೂ ಅಥವಾ ಶುದ್ಧರೂ, ಬ್ರಹ್ಮಚರ್ಯ ನಿಯಮವಂತರೂ ಆದ ದ್ವಿಜರ ಮೂಲಕ ಶ್ರವಣ ಮಾಡಿಸುವುದರಿಂದಲೂ ಸಮಸ್ತ ಪಾಪಗಳಿಂದ ಬಿಡುಗಡೆಹೊಂದುತ್ತಾನೆ.

೧೪೫. ಅಥವಾ ಈ ಸಂವಾದಭಾಗದ ಅರ್ಥವನ್ನು ವಿಚಾರಮಾಡಿದ ಮಾನವನು ಪರಮಗತಿಯನ್ನು ಹೊಂದುತ್ತಾನೆ. ಮತ್ತು ಭಕ್ತಿಯಿಂದ ಕೂಡಿದವನೂ, ದೃಢವಾದ ವ್ರತವುಳ್ಳವನೂ ಆದ ಮಾನವನು ಇದನ್ನು ನಿತ್ಯದಲ್ಲಿಯೂ ಶ್ರವಣಮಾಡಬೇಕು.

೧೪೬. ಹೀಗೆ ಶಿವಸನತ್ಕುಮಾರ ಸಂವಾದವನ್ನು ಶ್ರವಣಾದಿಗಳ ಮೂಲಕ ಭಕ್ತಿಯಿಂದ ಸೇವಿಸಿದ ಮಾನವನು ಸಮಸ್ತ ಪಾಪಗಳಿಂದ ಬಿಡುಗಡೆ ಹೊಂದಿ ಕಡೆಯಲ್ಲಿ ಬ್ರಹ್ಮಲೋಕವನ್ನು ಹೊಂದಿ ಅಲ್ಲಿ ಪೂಜ್ಯನಾಗುತ್ತಾನೆ.

ತಸ್ಮಾತ್ ಸರ್ವಪ್ರಯತ್ನೇನ ಪಠಿತವ್ಯೋ ಮನೀಷಿಭಿಃ ।
ಶ್ರೋತವ್ಯಶ್ಚಾನುಮಂತವ್ಯೋ ವಿಶೇಷಾದ್ಬ್ರಾಹ್ಮಣೈಃ ಸದಾ ॥ ೧೪೭ ॥

ಇತಿ ಶ್ರೀ ಕೂರ್ಮಪುರಾಣೇ ಚತುಷ್ಷಷ್ಟಿತಮೋಽಧ್ಯಾಯಃ.

---

೧೪೭. ಆದ್ದರಿಂದ ಈ ಸಂವಾದ ಸಂದರ್ಭವು ಜ್ಞಾನಿಗಳಿಂದ ಸಮಸ್ತ ಪ್ರಯತ್ನಪೂರ್ವಕವಾಗಿ ಪಠಿಸಲ್ಪಡಬೇಕು ಅಥವಾ ಶ್ರವಣಮಾಡಲ್ಪಡಬೇಕು ಅಥವಾ ಆ ಸಂವಾದದ ಅರ್ಥವು ವಿಮರ್ಶಿಸಲ್ಪಡಬೇಕು. ಬ್ರಾಹ್ಮಣರಿಂದ ವಿಶೇಷವಾಗಿ ಈ ಸಂವಾದವು ಭಕ್ತಿಯಿಂದ ಸೇವಿಸಲ್ಪಡಬೇಕು.

(ಕೂರ್ಮ ಪುರಾಣದಲ್ಲಿ ಅರವತ್ತನಾಲ್ಕನೆಯ ಅಧ್ಯಾಯವು ಮುಗಿದುದು.)

---

ಶ್ರೀಃ

# ಕೂರ್ಮಪುರಾಣಂ

## ಪಂಚಷಷ್ಟಿತಮೋಽಧ್ಯಾಯಃ.

ವ್ಯಾಸ ಉವಾಚ :—

ಶೃಣುಧ್ವಮೃಷಯಃ ಸರ್ವೇ ವಕ್ಷ್ಯಮಾಣಂ ಸನಾತನಮ್ ।
ಕರ್ಮಯೋಗಂ ಬ್ರಾಹ್ಮಣಾನಾಮಾತ್ಯಂತಿಕಫಲಪ್ರದಮ್ ॥ ೧ ॥

ಅಮ್ನಾಯಸಿದ್ಧಮಖಿಲಂ ಬ್ರಾಹ್ಮಣಾನಾಂ ಪ್ರದರ್ಶಿತಮ್ ।
ಋಷೀಣಾಂ ಶೃಣ್ವತಾಂ ಪೂರ್ವಂ ಮನುರಾಹ ಪ್ರಜಾಪತಿಃ ॥ ೨ ॥

---

## ಅರವತ್ತೈದನೆಯ ಅಧ್ಯಾಯವು.

೧. ವ್ಯಾಸಮುನಿಯು ಹೀಗೆಂದು ಹೇಳಿದನು :—ಸನಾತನವೂ, ಬ್ರಾಹ್ಮಣರಿಗೆ ನಿಯಮವಾಗಿ ಫಲಗಳನ್ನು ಕೊಡುವುದೂ ಆದ ಮುಂದೆ ಹೇಳುವ ಕರ್ಮಯೋಗ ವನ್ನು ಮಹರ್ಷಿಗಳಾದ ನೀವೆಲ್ಲರೂ ಶ್ರವಣಮಾಡಿರಿ.

೨. ಬ್ರಾಹ್ಮಣರಿಗೋಸ್ಕರ ವೇದಮಾರ್ಗದಿಂದ ಸಿದ್ಧವಾದ, ಸಂಪೂರ್ಣವಾದ ಕರ್ಮಯೋಗವು ತೋರಿಸಲ್ಪಟ್ಟಿದೆ. ಪೂರ್ವದಲ್ಲಿ ಮನುಪ್ರಜಾಪತಿಯು ಶ್ರವಣ ಮಾಡುತ್ತಿದ್ದ ಮಹರ್ಷಿಗಳಿಗೆ ಉಪದೇಶಮಾಡಿದನು.

ಸರ್ವಪಾಪಹರಂ ಪುಣ್ಯಮೃಷಿಸಂಘೈರ್ನಿಷೇವಿತಮ್ ।
ಸಮಾಹಿತಧಿಯೋ ಯೂಯಂ ಶೃಣುಧ್ವಂ ಗದತೋ ಮಮ　　॥ ೩ ॥

ಕೃತೋಪನಯನೋ ವೇದಾನಧೀಯೀತ ದ್ವಿಜೋತ್ತಮಾಃ ।
ಗರ್ಭಾಷ್ಟಮೇಽಷ್ಟಮೇ ವಾಬ್ದೇ ಸ್ವಸೂತ್ರೋಕ್ತವಿಧಾನತಃ　　॥ ೪ ॥

ದಂಡೀ ಚ ಮೇಖಲೀ ಸೂತ್ರೀ ಕೃಷ್ಣಾಜಿನಧರೋ ಮುನಿಃ ।
ಭಿಕ್ಷಾಚಾರೀ ಬ್ರಹ್ಮಚಾರೀ ಸ್ವಾಶ್ರಮೇ ನಿವಸನ್ ಸುಖಮ್　　॥ ೫ ॥

ಕಾರ್ಪಾಸಮುಪವೀತಾರ್ಥಂ ನಿರ್ಮಿತಂ ಬ್ರಹ್ಮಣಾ ಪುರಾ ।
ಬ್ರಾಹ್ಮಣಾನಾಂ ತ್ರಿವೃತ್ ಸೂತ್ರಂ ಕೌಶಂ ವಾ ವಸ್ತ್ರಮೇವ ವಾ ॥ ೬ ॥

---

೩. ಶ್ರವಣಮಾತ್ರದಿಂದ ಸಮಸ್ತ ಪಾಪಗಳನ್ನು ದೂರಮಾಡುವ ಮತ್ತು ಮಹರ್ಷಿಗಳ ಸಂಘದಿಂದ ಸೇವಿಸಲ್ಪಟ್ಟಿರುವ ಈ ಕರ್ಮಯೋಗವನ್ನು ವ್ಯಾಖ್ಯಾನ ಮಾಡುತ್ತಿರುವ ನನ್ನಿಂದ ಸಮಾಧಾನಮಾನಸವುಳ್ಳವರಾಗಿ ನೀವು ಶ್ರವಣಮಾಡಿರಿ.

೪. ದ್ವಿಜಶ್ರೇಷ್ಠರೇ! ಪ್ರತಿಯೊಬ್ಬ ಅಧಿಕಾರಿಯು ಆದಿಯಲ್ಲಿ ಗರ್ಭಾಷ್ಟಮ ಅಥವಾ ಜನ್ಮಾಷ್ಟಮ ಸಂವತ್ಸರದಲ್ಲಿ ಸ್ವಶಾಖೆಯ ಗೃಹ್ಯಸೂತ್ರದಲ್ಲಿ ಹೇಳಿದ ವಿಧಾನವನ್ನು ಅನುಸರಿಸಿ ಉಪನಯನ ಮಾಡಲ್ಪಟ್ಟವನಾಗಿ ವೇದಗಳನ್ನು ಅಧ್ಯಯನ ಮಾಡಬೇಕು.

೫. ಉಪನಯನಾನಂತರದಲ್ಲಿ ಬ್ರಹ್ಮಚಾರಿಯು ಪಾಲಾಶಾದಿ ದಂಡ, ಮೇಖಲಾ, ಸೂತ್ರ, ಕೃಷ್ಣಾಜಿನಗಳನ್ನು ಧರಿಸಿ ಭಿಕ್ಷಾನ್ನವನ್ನು ಭುಂಜಿಸುತ್ತ ತನ್ನ ಆಶ್ರಮದಲ್ಲಿ ವಾಸಿಸುತ್ತ ವೇದಗಳನ್ನು ಅಭ್ಯಾಸಮಾಡಬೇಕು.

೬. ಪೂರ್ವದಲ್ಲಿ ಬ್ರಾಹ್ಮಣರಿಗೆ ಉಪವೀತಧಾರಣಕ್ಕೋಸ್ಕರ ಬ್ರಹ್ಮನಿಂದ ಹತ್ತಿಯು ನಿರ್ಮಾಣಮಾಡಲ್ಪಟ್ಟಿದೆ. ತ್ರಿಗುಣಿತವಾದ ಸೂತ್ರ, ಕುಶರಜ್ಜು, ಅಥವಾ ವಸ್ತ್ರವನ್ನು ಉಪವೀತವಾಗಿ ಧರಿಸಬೇಕು.

ಸದೋಪವೀತೀ ಚೈವ ಸ್ಯಾತ್ ಸದಾ ಬದ್ಧಶಿಖೋ ದ್ವಿಜಃ ।
ಅನ್ಯಥಾ ಯತ್ ಕೃತಂ ಕರ್ಮ ತದ್ಭವತ್ಯನ್ಯಥಾ ಕೃತಮ್ ॥ ೭ ॥

ವಸೇದವಿಕೃತಂ ವಾಸಃ ಕಾರ್ಪಾಸಂ ವಾ ಕಷಾಯಕಮ್ ।
ತದೇವ ಪರಿಧಾನೀಯಂ ಶುಕ್ಲಮಚ್ಛಿದ್ರಮುತ್ತಮಮ್ ॥ ೮ ॥

ಉತ್ತರಂ ತು ಸಮಾಖ್ಯಾತಂ ವಾಸಃ ಕೃಷ್ಣಾಜಿನಂ ಶುಭಮ್ ।
ಅಭಾವೇ ದಿವ್ಯಮಜಿನಂ ರೌರವಂ ವಾ ವಿಧೀಯತೇ ॥ ೯ ॥

ಉದ್ಧೃತ್ಯ ದಕ್ಷಿಣಂ ಬಾಹುಂ ಸವ್ಯೇ ಬಾಹೌ ಸಮರ್ಪಿತಮ್ ।
ಉಪವೀತಂ ಭವೇನ್ನಿತ್ಯಂ ನಿವೀತಂ ಕಂಠಸಜ್ಜನೇ ॥ ೧೦ ॥

---

೭. ದ್ವಿಜನು ಯಾವಾಗಲೂ ಉಪವೀತವನ್ನು ಧರಿಸಿದವನೂ ಮತ್ತು ಕಟ್ಟಲ್ಪಟ್ಟ ಶಿಖೆಯುಳ್ಳವನೂ ಆಗಿರಬೇಕು. ಉಪವೀತ-ಶಿಖಾಬಂಧನಗಳಿಲ್ಲದೆ ಮಾಡಲ್ಪಟ್ಟ ಕರ್ಮವು ವಿಧಿಯನ್ನು ಮೀರಿ ಬೇರೆ ವಿಧವಾಗಿ ಮಾಡಿದಂತಾಗುವುದು.

೮. ಯಾವ ವರ್ಣಾಂತರದಿಂದಲೂ ವಿಕಾರಮಾಡದಿರುವ ಶುದ್ಧವಾದ ಕಾರ್ಪಾಸ ವಸ್ತ್ರವನ್ನಾಗಲಿ, ವರ್ಣರಂಜಿತ ವಸ್ತ್ರವನ್ನಾಗಲಿ ಉಟ್ಟುಕೊಳ್ಳಬೇಕು. ರಂಧ್ರವಿಲ್ಲದ ಉತ್ತಮವಾದ ಕಾರ್ಪಾಸವಸ್ತ್ರವನ್ನು ಮೇಲೆ ಹೊದೆಯಲು ಉಪಯೋಗಿಸಬೇಕು.

೯. ಮೇಲಿನ ಪ್ರಾವರಣ ವಸ್ತ್ರಸ್ಥಾನದಲ್ಲಿ ಶುಭಕರವಾದ ಕೃಷ್ಣಮೃಗದ ಅಜಿನವಸ್ತ್ರವು ವಿಧಿಸಲ್ಪಟ್ಟಿದೆ. ಕೃಷ್ಣಾಜಿನವು ದೊರೆಯದಿರುವ ಪಕ್ಷದಲ್ಲಿ ಸಾಮಾನ್ಯ ಹರಿಣಮೃಗದ ದಿವ್ಯವಾದ ಚರ್ಮವು ವಿಧಿಸಲ್ಪಟ್ಟಿರುವುದು.

೧೦. ಬಲಭಾಗದ ಬಾಹುವನ್ನು ಎತ್ತಿ ಅದರ ಅಧೋಭಾಗದಲ್ಲಿಯೂ ವಾಮ ಬಾಹುವಿನ ಮೇಲುಭಾಗದಲ್ಲಿಯೂ ಇರಿಸಲ್ಪಟ್ಟ ಸೂತ್ರವು ಸರ್ವಕಾಲಗಳಲ್ಲಿರಬೇಕಾದ ಉಪವೀತವಾಗುವುದು. ಕಂಠದಲ್ಲಿ ದೀರ್ಘವಾಗಿ ಲಂಬಿಸುವುದು ನಿವೀತವೆನಿಸುವುದು.

ಸವ್ಯಂ ಬಾಹುಂ ಸಮುದ್ಧೃತ್ಯ ದಕ್ಷಿಣೇ ತು ಧೃತಂ ದ್ವಿಜಾಃ ।
ಪ್ರಾಚೀನಾವೀತಮಿತ್ಯುಕ್ತಂ ಪೈತ್ರೇ ಕರ್ಮಣಿ ಯೋಜಯೇತ್ ॥೧೧ ॥

ಅಗ್ನ್ಯಗಾರೇ ಗವಾಂ ಗೋಷ್ಠೇ ಹೋಮೇ ಜಪ್ಯೇ ತಥೈವ ಚ ।
ಸ್ವಾಧ್ಯಾಯೇ ಭೋಜನೇ ನಿತ್ಯಂ ಬ್ರಾಹ್ಮಣಾನಾಂ ಚ ಸನ್ನಿಧೌ ॥ ೧೨ ॥

ಉಪಾಸನೇ ಗುರೂಣಾಂ ಚ ಸಂಧ್ಯಯೋಃ ಸಾಧುಸಂಗಮೇ ।
ಉಪವೀತೀ ಭವೇನ್ನಿತ್ಯಂ ವಿಧಿರೇಷ ಸನಾತನಃ ॥ ೧೩ ॥

ಮೌಂಜೀ ತ್ರಿವೃತ್ ಸಮಾ ಶ್ಲಕ್ಷ್ಣಾ ಕಾರ್ಯಾ ವಿಪ್ರಸ್ಯ ಮೇಖಲಾ ।
ಕುಶೇನ ನಿರ್ಮಿತಾ ವಿಪ್ರಾ ಗ್ರಂಥಿನೈಕೇನ ವಾ ತ್ರಿಭಿಃ ॥ ೧೪ ॥

---

೧೧. ದ್ವಿಜರೆ! ಎಡಬಾಹುವನ್ನು ಮೇಲಕ್ಕೆ ಎತ್ತಿ ಅದರ ಅಧೋಭಾಗದಲ್ಲಿಯೂ ದಕ್ಷಿಣಬಾಹುವಿನ ಮೇಲುಭಾಗದಲ್ಲಿಯೂ ಬರುವಂತೆ ಧರಿಸಿರುವ ಸೂತ್ರವು ಪ್ರಾಚೀನಾವೀತವೆಂದು ಕರೆಯಲ್ಪಡುವುದು. ಇದನ್ನು ಪಿತೃಕಾರ್ಯಗಳಲ್ಲಿ ಉಪಯೋಗಿಸಬೇಕು.

೧೨. ಅಗ್ನಿಶಾಲೆಯಲ್ಲಿಯೂ, ಗೋಶಾಲೆಯಲ್ಲಿಯೂ, ಹೋಮದಲ್ಲಿಯೂ, ಜಪಕರ್ಮದಲ್ಲಿಯೂ, ಸ್ವಾಧ್ಯಾಯಪಠನದಲ್ಲಿಯೂ, ಭೋಜನದಲ್ಲಿಯೂ, ಮತ್ತು ಬ್ರಾಹ್ಮಣ ಸನ್ನಿಧಿಯಲ್ಲಿಯೂ ಯಾವಾಗಲೂ ಉಪವೀತವನ್ನು ಧರಿಸಬೇಕು.

೧೩. ಗುರುಜನರ ಸೇವಾಕರ್ಮದಲ್ಲಿಯೂ, ಸಂಧ್ಯಾನುಷ್ಠಾನಗಳಲ್ಲಿಯೂ, ಸಾಧುಜನರ ಸಂಗಮದಲ್ಲಿಯೂ ಕೂಡ ಯಾವಾಗಲೂ ಉಪವೀತವನ್ನು ಧರಿಸಿರಬೇಕು. ಇದು ಸನಾತನ ಕ್ರಮದಿಂದ ಬಂದಿರುವ ಧರ್ಮವಾಗಿರುವುದು.

೧೪. ವಿಪ್ರರೆ! ತ್ರಿಗುಣಿತವೂ, ಸಮವೂ, ಮೃದುವೂ ಆದ ಮುಂಜತೃಣ ಅಥವಾ ದರ್ಭೆಗಳಿಂದ ಮಾಡಿದ ಮೇಖಲೆಯು ಬ್ರಾಹ್ಮಣನಿಗೆ ವಿಧಿಸಲ್ಪಟ್ಟಿದೆ. ಆ ಮೇಖಲೆಯು ಒಂದು ಅಥವಾ ಮೂರು ಗ್ರಂಥಿಗಳಿಂದ ಕೂಡಿರಬೇಕು.

ಧಾರಯೇದ್ಬೈಲ್ವಪಾಲಾಶೌ ದಂಡೌ ಕೇಶಾಂತಕೌ ದ್ವಿಜಃ ।
ಯಜ್ಞಾರ್ಹವೃಕ್ಷಜಂ ವಾಥ ಸೌಮ್ಯಮವ್ರಣಮೇವ ಚ ॥ ೧೫ ॥

ಸಾಯಂ ಪ್ರಾತರ್ದ್ವಿಜಃ ಸಂಧ್ಯಾಮುಪಾಸೀತ ಸಮಾಹಿತಃ ।
ಕಾಮಾಲ್ಲೋಭಾದ್ಭಯಾನ್ಮೋಹಾತ್ತ್ಯಕ್ತ್ವೈನಾಂ ಪತಿತೋ ಭವೇತ್॥

ಅಗ್ನಿಕಾರ್ಯಂ ತತಃ ಕುರ್ಯಾತ್ ಸಾಯಂ ಪ್ರಾತರ್ಯಥಾವಿಧಿ ।
ಸ್ನಾತ್ವಾ ಸಂತರ್ಪಯೇದ್ದೇವಾನೃಷೀನ್ ಪಿತೃಗಣಾಂಸ್ತಥಾ ॥ ೧೭ ॥

ದೇವತಾಭ್ಯರ್ಚನಂ ಕುರ್ಯಾತ್ ಪುಷ್ಪೈಃ ಪತ್ರೇಣ ಚಾಂಬುನಾ ।
ಅಭಿವಾದನಶೀಲಃ ಸ್ಯಾನ್ನಿತ್ಯಂ ವೃದ್ಧೇಷು ಧರ್ಮತಃ ॥ ೧೮ ॥

---

೧೫. ಬ್ರಾಹ್ಮಣನು ಬಿಲ್ವ ಅಥವಾ ಪಲಾಶ ವೃಕ್ಷಗಳಿಂದ ಮಾಡಿರುವ ಶಿರಸ್ಸಿನ ಪರ್ಯಂತವಾಗಿ ಬರುವ ದಂಡವನ್ನು ಧರಿಸಬೇಕು. ಅಥವಾ ಸಾಧುಜಾತಿಯ, ವ್ರಣಗಳಿಂದ ರಹಿತವಾದ, ಯಜ್ಞಾರ್ಹವಾದ ಯಾವುದಾದರೊಂದು ಜಾತಿಯ ವೃಕ್ಷದ ದಂಡವನ್ನು ಧರಿಸಬಹುದು.

೧೬. ದ್ವಿಜನು ಪ್ರತಿನಿತ್ಯದಲ್ಲಿಯೂ ಸಾಯಂಕಾಲ ಪ್ರಾತಃಕಾಲಗಳಲ್ಲಿ ಸಮಾಧಾನವುಳ್ಳ ಚಿತ್ತವುಳ್ಳವನಾಗಿ ಸಂಧ್ಯಾದೇವಿಯನ್ನು ಉಪಾಸನಮಾಡಬೇಕು. ಕಾಮ, ಲೋಭ, ಭಯ ಅಥವಾ ಮೋಹಗಳಿಂದ ಸಂಧ್ಯಾವಂದನವನ್ನು ಬಿಟ್ಟ ಮಾನವನು ಪತಿತನಾಗುವನು.

೧೭. ತರುವಾಯ ಸಾಯಂಕಾಲ-ಪ್ರಾತಃಕಾಲಗಳಲ್ಲಿ ಯಥಾವಿಧಿಯಾಗಿ ಅಗ್ನಿಕಾರ್ಯವನ್ನು ಆಚರಿಸಬೇಕು.- ಮತ್ತು ಸ್ನಾನಮಾಡಿ ದೇವ-ಋಷಿ-ಪಿತೃದೇವತೆಗಳನ್ನು ಉದ್ದೇಶಿಸಿ ತರ್ಪಣಾಂಜಲಿಯನ್ನು ಬಿಡಬೇಕು.

೧೮. ಪತ್ರ-ಪುಷ್ಪ-ಜಲಾದಿ ಉಪಕರಣಗಳನ್ನು ಅರ್ಪಿಸಿ ದೇವತಾರ್ಚನೆಯನ್ನು ಮಾಡಬೇಕು. ಮತ್ತು ವೃದ್ಧಗುರುಗಳಲ್ಲಿ ಯಾವಾಗಲೂ ಧರ್ಮಾನುಗುಣವಾಗಿ ಅಭಿವಾದನಮಾಡುವ ಶೀಲವುಳ್ಳವನಾಗಿರಬೇಕು.

ಅಸಾವಹಂ ಭೋಃ ನಾಮೇತಿ ಸಮ್ಯಕ್ ಪ್ರಣತಿಪೂರ್ವಕಮ್ ।
ಆಯುರಾರೋಗ್ಯಸಾನ್ನಿಧ್ಯಂ ದ್ರವ್ಯಾದಿಪರಿವರ್ಜಿತಮ್ ॥ ೧೯ ॥

ಆಯುಷ್ಮಾನ್ ಭವ ಸೌಮ್ಯೇತಿ ವಾಚ್ಯೋ ವಿಪ್ರೋಽಭಿವಾದನೇ ।
ಅಕಾರಶ್ಚಾಸ್ಯ ನಾಮ್ನೋಽಂತೇ ವಾಚ್ಯಃ ಪೂರ್ವಾಕ್ಷರಪ್ಲುತಃ ॥ ೨೦ ॥

ನ ಕುರ್ಯಾದ್ಯೋಽಭಿವಾದಸ್ಯ ದ್ವಿಜಃ ಪ್ರತ್ಯಭಿವಾದನಮ್ ।
ನಾಭಿವಾದ್ಯಃ ಸ ವಿದುಷಾ ಯಥಾ ಶೂದ್ರಸ್ತಥೈವ ಸಃ ॥ ೨೧ ॥

ವ್ಯತ್ಯಸ್ತಪಾಣಿನಾ ಕಾರ್ಯಮುಪಸಂಗ್ರಹಣಂ ಗುರೋಃ ।
ಸವ್ಯೇನ ಸವ್ಯಃ ಸ್ಪ್ರಷ್ಟವ್ಯೋ ದಕ್ಷಿಣೇನ ತು ದಕ್ಷಿಣಃ ॥ ೨೨ ॥

---

೧೯. ದ್ರವ್ಯಾದಿಲಾಭದ ಉದ್ದೇಶವನ್ನು ತ್ಯಜಿಸಿ ಆಯುಷ್ಯ-ಆರೋಗ್ಯಗಳ ಸಿದ್ಧಿಗೋಸ್ಕರ ಅಭಿವಾದನವನ್ನ ಮಾಡಬೇಕು ಗುರುವೆ! ನಾನು ಇಂತಹ ನಾಮಾಂಕಿತನಾಗಿರುವೆನು ಎಂಬ ಅರ್ಥವನ್ನು ಸೂಚಿಸುತ್ತ "ಶರ್ಮಾಹಂ ಭೋಃ ಅಭಾವಾದಯೇ" ಎಂದು ಹೇಳಿ ಅಭಿವಾದನಮಾಡಬೇಕು.

೨೦. ಶಿಷ್ಯನು ವಂದನಮಾಡುವಾಗ ಗುರುವು ಪ್ರತ್ಯಭಿವಾದನಮಾಡಬೇಕು. ವಿಪ್ರನಿಗೆ ಪ್ರತ್ಯಭಿವಾದನಮಾಡುವಾಗ ಸೌಮ್ಯನೆ! ಆಯುಷ್ಮಂತನಾಗು ಎಂಬ ಅರ್ಥವುಳ್ಳ "ಆಯುಷ್ಮಾನ್ ಭವ ಸೌಮ್ಯ" ಎಂದು ಆಶೀರ್ವಚನವನ್ನು ಹೇಳಬೇಕು. ಸೌಮ್ಯಶಬ್ದದ ಮುಂದೆ ಶಿಷ್ಯನ ನಾಮಧೇಯದ ಕಡೆಯ ಅಕಾರವನ್ನು ಪ್ಲುತವಾಗಿ ಉಚ್ಚರಿಸಬೇಕು.

೨೧. ಶಿಷ್ಯನು ಮಾಡಿರುವ ಅಭಿವಾದನಕ್ಕೆ ಪ್ರತ್ಯಭಿವಾದನವನ್ನು ಯಾವ ದ್ವಿಜನು ಮಾಡುವುದಿಲ್ಲವೊ, ಅಂತಹ ದ್ವಿಜನಿಗೆ ಜ್ಞಾನಿಯಿಂದ ಅಭಿವಾದನವು ಮಾಡಲ್ಪಡಬಾರದು. ಪ್ರತ್ಯಭಿವಾದನವನ್ನು ಅರಿಯದ ದ್ವಿಜನು ಶೂದ್ರನಿಗೆ ಸಮಾನನಾದವನು.

೨೨. ಗುರುವಿಗೆ ಅಭಿಮುಖನಾಗಿ ನಿಂತು ವ್ಯತ್ಯಾಸಮಾಡಿದ ಹಸ್ತಗಳಿಂದ ಗುರುವಿನ ಪಾದೋಪಸಂಗ್ರಹಣವನ್ನು ಮಾಡಬೇಕು. ಎಂದರೆ ತನ್ನ ವಾಮಹಸ್ತದಿಂದ ಗುರುವಿನ ವಾಮಪಾದವನ್ನೂ ದಕ್ಷಿಣಹಸ್ತದಿಂದ ದಕ್ಷಿಣಪಾದವನ್ನೂ ಸ್ಪರ್ಶಿಸಬೇಕು.

ಲೌಕಿಕಂ ವೈದಿಕಂ ಚಾಪಿ ತಥಾಧ್ಯಾತ್ಮಿಕಮೇವ ವಾ ।
ಆದದೀತ ಯತೋ ಜ್ಞಾನಂ ತಂ ಪೂರ್ವಮಭಿವಾದಯೇತ್ ॥ ೨೩ ॥

ನೋದಕಂ ಧಾರಯೇದ್ಭೈಕ್ಷ್ಯಂ ಪುಷ್ಪಾಣಿ ಸಮಿಧಸ್ತಥಾ ।
ಏವಂವಿಧಾನಿ ಚಾನ್ಯಾನಿ ನ ದೈವಾದ್ಯೇಷು ಕರ್ಮಸು ॥ ೨೪ ॥

ಬ್ರಾಹ್ಮಣಂ ಕುಶಲಂ ಪೃಚ್ಛೇತ್ ಕ್ಷತ್ರಬಂಧುಮನಾಮಯಮ್ ।
ವೈಶ್ಯಂ ಕ್ಷೇಮಂ ಸಮಾಗತ್ಯ ಶೂದ್ರಮಾರೋಗ್ಯಮೇವ ಚ ॥ ೨೫ ॥

ಉಪಾಧ್ಯಾಯಃ ಪಿತಾ ಜ್ಯೇಷ್ಠೋ ಭ್ರಾತಾ ಚೈವ ಮಹೀಪತಿಃ ।
ಮಾತುಲಃ ಶ್ವಶುರಶ್ಚೈವ ಮಾತಾಮಹಪಿತಾಮಹೌ ॥ ೨೬ ॥

---

೨೩. ಯಾವ ಗುರುವಿನಿಂದ ಲೌಕಿಕ-ವೈದಿಕ ಮತ್ತು ಆಧ್ಯಾತ್ಮಿಕ ಜ್ಞಾನವನ್ನು ಆರ್ಜಿಸುವನೊ, ಅಂತಹ ಗುರುವನ್ನು ಆದಿಯಲ್ಲಿ ಅಭಿವಾದಿಸಬೇಕು.

೨೪. ಅಭಿವಾದನ-ಪಾದೋಪಸಂಗ್ರಹಾದಿ ಸಮಯದಲ್ಲಿ ಉದಕ, ಭಿಕ್ಷಾನ್ನ, ಪುಷ್ಪ, ಸಮಿತ್ತು ಮುಂತಾದುವುಗಳನ್ನು ಧರಿಸಬಾರದು. ಹಾಗೆ ಧಾರಣಮಾಡಿದ್ದ ಯಾವುದೊಂದು ವಸ್ತುವನ್ನೂ ದೈವಾದಿ ಕರ್ಮಗಳಲ್ಲಿ ಉಪಯೋಗಿಸಬಾರದು.

೨೫. ಕುಶಲಪ್ರಶ್ನಪ್ರಸಂಗದಲ್ಲಿ ಬ್ರಾಹ್ಮಣನಲ್ಲಿ ಕುಶಲವನ್ನೂ ಕ್ಷತ್ರಿಯ ಕುಲದಲ್ಲಿ ಹುಟ್ಟಿರುವವನಲ್ಲಿ ಅನಾಮಯ-ವ್ಯಾಧಿಪೀಡಾಭಾವವನ್ನೂ ವೈಶ್ಯನಲ್ಲಿ ಕ್ಷೇಮವನ್ನೂ ಮತ್ತು ಶೂದ್ರನಲ್ಲಿ ಆರೋಗ್ಯವನ್ನೂ ಪ್ರಶ್ನಿಸಬೇಕು.

೨೬. ಸಾಮಾನ್ಯವಾಗಿ ಪ್ರತಿಯೊಂದು ವ್ಯಕ್ತಿಗೂ ಉಪಾಧ್ಯಾಯ, ತಂದೆ, ಜ್ಯೇಷ್ಠಭ್ರಾತಾ, ರಾಜ, ಮಾತುಲ, ಶ್ವಶುರ, ಮಾತಾಮಹ ಮತ್ತು ಪಿತಾಮಹರು ಪೂಜ್ಯರಾದ ಗುರುಗಳಾಗಿರುವರು.

ವರ್ಣಜ್ಯೇಷ್ಠಃ ಪಿತೃವ್ಯಶ್ಚ ಸರ್ವೇ ತೇ ಗುರವಃ ಸ್ಮೃತಾಃ ।
ಮಾತಾ ಮಾತಾಮಹೀ ಗುರ್ವೀ ಪಿತುರ್ಮಾತುಶ್ಚ ಸೋದರಾಃ ॥ ೨೭ ॥

ಶ್ವಶ್ರೂಃ ಪಿತಾಮಹೀ ಜ್ಯೇಷ್ಠಾ ಭ್ರಾತೃಜಾಯಾ ಗುರುಸ್ತ್ರಿಯಃ ।
ಇತ್ಯುಕ್ತೋ ಗುರುವರ್ಗೋಽಯಂ ಮಾತೃತಃ ಪಿತೃತಸ್ತಥಾ ॥ ೨೮ ॥

ಅನುವರ್ತನಮೇತೇಷಾಂ ಮನೋವಾಕ್ಕಾಯಕರ್ಮಭಿಃ ।
ಗುರುಂ ದೃಷ್ಟ್ವಾ ಸಮುತ್ತಿಷ್ಠೇದಭಿವಾದ್ಯ ಕೃತಾಂಜಲಿಃ ॥ ೨೯ ॥

ನೈತೈರುಪವಿಶೇತ್ ಸಾರ್ಧಂ ವಿವದೇತಾರ್ಥಕಾರಣಾತ್ ।
ಜೀವಿತಾರ್ಥಮಪಿ ದ್ವೇಷಾದ್ಗುರುಭಿರ್ನೈವ ಭಾಷಣಮ್ ॥ ೩೦ ॥

---

೨೭. ಹಾಗು ತನ್ನ ವರ್ಣಕ್ಕಿಂತಲೂ ಉತ್ತಮ ವರ್ಣದ ವ್ಯಕ್ತಿ, ಪಿತೃವ್ಯ ಎಂಬ ವ್ಯಕ್ತಿಗಳೆಲ್ಲರೂ ಪ್ರತಿಯೊಬ್ಬನಿಗೂ ಗುರುಗಳೆಂದು ಸ್ಮರಿಸಲ್ಪಟ್ಟಿರುವರು. ಮತ್ತು ಗುರುಸ್ತ್ರೀಯರಲ್ಲಿ ಮಾತಾ, ಮಾತಾಮಹೀ, ಪಿತೃ-ಮಾತೃ ಸಹೋದರಿಯರು ಸೇರಿರುವರು.

೨೮. ಹಾಗು ಶ್ವಶ್ರು, ಪಿತಾಮಹೀ, ಜ್ಯೇಷ್ಠಳಾದ ಭ್ರಾತೃಜಾಯೆ, ಇವರು ಇಷ್ಟುಮಂದಿಯು ಗುರುಸ್ತ್ರೀಯರಾಗಿ ಮಾನ್ಯರಾಗುವರು. ಈ ರೀತಿಯಾಗಿ ಮಾತಾ ಪಿತೃವರ್ಗಕ್ಕೆ ಸೇರಿದ ಗುರುವರ್ಗವು ಹೇಳಲ್ಪಟ್ಟಿದೆ.

೨೯. ಇಂತಹ ಗುರುವರ್ಗವನ್ನು ಮನಸ್ಸು, ವಾಕ್, ಕರ್ಮಗಳಿಂದ ಅನುವರ್ತಿಸಬೇಕು. ಗುರುವನ್ನು ನೋಡಿದಾಗ ಕುಳಿತಿದ್ದ ಸ್ಥಳದಿಂದ ಮೇಲಕ್ಕೆ ಎದ್ದು ಅಭಿವಾದನಮಾಡಿ ಅಂಜಲಿಬದ್ಧನಾಗಿ ನಿಂತುಕೊಳ್ಳಬೇಕು.

೩೦. ಈ ಗುರುಜನರೊಂದಿಗೆ ಕುಳಿತುಕೊಳ್ಳಬಾರದು ಮತ್ತು ತನ್ನ ಜೀವನಾರ್ಥವಾಗಿ ಕೂಡ ಗುರುಗಳೊಂದಿಗೆ ದ್ವೇಷದಿಂದ ಭಾಷಣವನ್ನಾಗಲಿ, ಅರ್ಥ ಪ್ರಾಪ್ತಿ ನಿಮಿತ್ತವಾಗಿ ವಿವಾದವನ್ನಾಗಲಿ ಮಾಡಬಾರದು.

ಉದಿತೋಽಪಿ ಗುಣೈರನ್ಯೈರ್ಗುರುದ್ವೇಷೀ ಪತತ್ಯಧಃ ।
ಗುರೂಣಾಮಪಿ ಸರ್ವೇಷಾಂ ಪೂಜ್ಯಾಃ ಪಂಚ ವಿಶೇಷತಃ ॥ ೩೧ ॥

ತೇಷಾಮಾದ್ಯಾಸ್ತ್ರಯಃ ಶ್ರೇಷ್ಠಾಸ್ತೇಷಾಂ ಮಾತಾ ಸುಪೂಜಿತಾ ।
ಯೋ ಭಾವಯತಿ ಯಾ ಸೂತೇ ಯೇನ ವಿದ್ಯೋಪದಿಶ್ಯತೇ ॥ ೩೨ ॥

ಜ್ಯೇಷ್ಠೋ ಭ್ರಾತಾ ಚ ಭರ್ತಾ ಚ ಪಂಚೈತೇ ಗುರವಃ ಸ್ಮೃತಾಃ ।
ಆತ್ಮನಃ ಸರ್ವಯತ್ನೇನ ಪ್ರಾಣತ್ಯಾಗೇನ ವಾ ಪುನಃ ॥ ೩೩ ॥

ಪೂಜನೀಯಾ ವಿಶೇಷೇಣ ಪಂಚೈತೇ ಭೂತಿಮಿಚ್ಛತಾ ।
ಯಾವತ್ಪಿತಾ ಚ ಮಾತಾ ಚ ದ್ವಾವೇತೌ ನಿರ್ವಿಕಾರಿಣೌ ॥ ೩೪ ॥

---

೩೧. ಮಿಕ್ಕ ಅನೇಕ ಗುಣಗಳಿಂದ ಸಮೃದ್ಧನಾಗಿದ್ದರೂ ಗುರುದ್ವೇಷ ಮಾಡಿದವನು ಪತಿತನಾಗುವನು. ಹಿಂದೆ ಹೇಳಿದ ಸಮಸ್ತ ಗುರುಗಳಲ್ಲಿ ಐದು ಮಂದಿಯು ವಿಶೇಷವಾಗಿ ಪೂಜ್ಯರಾಗಿರುವರು.

೩೨. ಆ ಐದುಮಂದಿಯಲ್ಲಿಯೂ ಮೊದಲನೆಯ ಮೂರು ಮಂದಿಯು ಶ್ರೇಷ್ಠರಾಗಿರುವರು. ಅವರಲ್ಲಿ ಜನನಿಯು ಅತಿಶಯವಾಗಿ ಪೂಜ್ಯಳಾದವಳು. ವಿಶೇಷವಾಗಿ ಪೂಜ್ಯವ್ಯಕ್ತಿಗಳಾದ ಐದುಮಂದಿಯಲ್ಲಿ ಪುತ್ರನ ಉತ್ಪತ್ತಿಗೆ ಕಾರಣನಾದ ಜನಕನೂ, ಪುತ್ರನನ್ನು ಪ್ರಸವಿಸಿದ ಜನನನಿಯೂ ಮತ್ತು ವಿದ್ಯೆಯನ್ನು ಉಪದೇಶಿಸಿದ ಆಚಾರ್ಯನೂ ಗಣ್ಯರಾಗಿರುವರು.

೩೩. ಮತ್ತು ಜ್ಯೇಷ್ಠನಾದ ಭ್ರಾತಾ, ರಕ್ಷಕನಾದ ಸ್ವಾಮಿ ಹೀಗೆ ಐದು ಮಂದಿಯು ವಿಶೇಷವಾಗಿ ಪೂಜ್ಯರಾದ ಗುರುಗಳಾಗಿರುವರು. ಇವರನ್ನು ಸರ್ವಪ್ರಯತ್ನಗಳಿಂದಲೂ ಕಡೆಯಲ್ಲಿ ಪ್ರಾಣತ್ಯಾಗ ಪ್ರಸಂಗದಿಂದಲೂ ಸನ್ಮಾನಿಸಬೇಕು.

೩೪. ಅಭ್ಯುದಯವನ್ನು ಇಚ್ಛಿಸುವ ಮಾನವನಿಂದ ಈ ಐದು ಮಂದಿ ಗುರುಗಳು ವಿಶೇಷವಾಗಿ ಪೂಜಿಸಲ್ಪಡಬೇಕು. ಜನಕ ಮತ್ತು ಜನನಿಯರು ಎಷ್ಟುವರೆಗೆ ವಿಕಾರವಿಲ್ಲದೆ ಸ್ವಸ್ಥತೆಯಿಂದಿರುವರೊ, ಅದುವರೆಗೆ ಅವರಿಗೆ ಪರತಂತ್ರನಾಗಿರಬೇಕು.

ತಾವತ್ ಸರ್ವಂ ಪರಿತ್ಯಜ್ಯ ಪುತ್ರಃ ಸ್ಯಾತ್ತತ್ಪರಾಯಣಃ ।
ಪಿತಾ ಮಾತಾ ಚ ಸುಪ್ರೀತೌ ಸ್ಯಾತಾಂ ಪುತ್ರಗುಣೈರ್ಯದಿ ॥ ೩೫ ॥

ಸ ಪುತ್ರಃ ಸಕಲಂ ಧರ್ಮಮಾಪ್ನುಯಾತ್ತೇನ ಕರ್ಮಣಾ ।
ನಾಸ್ತಿ ಮಾತೃಸಮೋ ದೇವೋ ನಾಸ್ತಿ ತಾತಸಮೋ ಗುರುಃ ॥ ೩೬ ॥

ತಯೋಃ ಪ್ರತ್ಯುಪಕಾರೋ ಹಿ ನ ಕಥಂ ಚನ ವಿದ್ಯತೇ ।
ತಯೋರ್ನಿತ್ಯಂ ಪ್ರಿಯಂ ಕುರ್ಯಾತ್ ಕರ್ಮಣಾ ಮನಸಾ ಗಿರಾ॥ ೩೭॥

ನ ತಾಭ್ಯಾಮನನುಜ್ಞಾತೋ ಧರ್ಮಮನ್ಯಂ ಸಮಾಚರೇತ್ ।
ವರ್ಜಯಿತ್ವಾ ಮುಕ್ತಿಫಲಂ ನಿತ್ಯಂ ನೈಮಿತ್ತಿಕಂ ತಥಾ ॥ ೩೮ ॥

---

೩೫. ಪುತ್ರನು ಅದುವರೆಗೆ ಸರ್ವವ್ಯಾಪಾರಗಳನ್ನು ಬಿಟ್ಟು ಅವರಲ್ಲಿ ಆಸಕ್ತನಾಗಿರಬೇಕು. ಪುತ್ರನ ಗುಣಗಳಿಂದ ಜನಕ ಜನನಿಯರು ಸುಪ್ರೀತರಾದರೆ ಪುತ್ರನಿಗೆ ಅದೊಂದು ಮಹಾ ಭಾಗ್ಯವು ದೊರೆಯುವುದು.

೩೬. ಆ ಪುತ್ರನು ಮಾತಾಪಿತೃಶುಶ್ರೂಷಾ ಕರ್ಮದಿಂದ ಸಕಲ ಧರ್ಮಗಳನ್ನು ಆರ್ಜಿಸುತ್ತಾನೆ. ಜನನಿಗೆ ಸಮಾನವಾದ ದೇವತೆಯು ಇಲ್ಲ. ಹಾಗು ಜನಕನಿಗೆ ಸಮಾನನಾದ ಗುರುವು ಇಲ್ಲ.

೩೭. ಮಾತಾಪಿತೃಗಳಿಂದ ಪುತ್ರನು ಹೊಂದುವ ಉಪಕಾರಕ್ಕೆ ತುಲ್ಯವಾದ ಪ್ರತ್ಯುಪಕಾರವು ಯಾವ ವಿಧದಿಂದಲೂ ಮಾಡಲು ಸಾಧ್ಯವಾದುದಿಲ್ಲ. ಆದ್ದರಿಂದ ಕರ್ಮ-ಮನಸ್ಸು-ವಾಕ್ಯಗಳಿಂದ ಯಾವಾಗಲೂ ಅವರಿಗೆ ಪ್ರಿಯವನ್ನು ಆಚರಿಸಬೇಕು.

೩೮. ಮುಕ್ತಿಸಾಧನ ಕರ್ಮ ಅಥವಾ ನಿತ್ಯ-ನೈಮಿತ್ತಿಕ ಕರ್ಮಗಳು ವಿನಹ ಮಿಕ್ಕ ಯಾವುದೊಂದು ಧರ್ಮವನ್ನಾದರೂ ಮಾತಾಪಿತೃಗಳ ಅನುಜ್ಞೆಯನ್ನು ಪಡೆಯದೆ ಆಚರಿಸಬಾರದು.

ಧರ್ಮಃ ಸಾರಃ ಸಮುದ್ದಿಷ್ಟಃ ಪ್ರೇತ್ಯಾನಂತಫಲಪ್ರದಃ ।
ಸಮ್ಯಗಾರಾಧ್ಯ ವಕ್ತಾರಂ ವಿಸೃಷ್ಟಸ್ತದನುಜ್ಞಯಾ ॥ ೩೯ ॥

ಶಿಷ್ಯೋ ವಿದ್ಯಾಫಲಂ ಭುಂಕ್ತೇ ಪ್ರೇತ್ಯ ವಾ ಪೂಜ್ಯತೇ ದಿವಿ ।
ಯೋ ಭ್ರಾತರಂ ಪಿತೃಸಮಂ ಜ್ಯೇಷ್ಠಂ ಮೂರ್ಖೋಽವಮನ್ಯತೇ ॥೪೦॥

ತೇನ ದೋಷೇಣ ಸ ಪ್ರೇತ್ಯ ನಿರಯಂ ಘೋರಮೃಚ್ಛತಿ ।
ಪುಂಸಾಂ ವರ್ತ್ಮನಿ ತಿಷ್ಠೇತ ಪೂಜ್ಯೋ ಭರ್ತಾ ಚ ಸರ್ವದಾ ॥ ೪೧ ॥

ಅಪಿ ಮಾತರಿ ಲೋಕೇಽಸ್ಮಿನ್ನುಪಕಾರಾದ್ಧಿ ಗೌರವಮ್ ।
ಯೇ ನರಾ ಭರ್ತೃಪಿಂಡಾರ್ಥಂ ಸ್ವಾನ್ ಪ್ರಾಣಾನ್ ಸಂತ್ಯಜಂತಿ ಹಿ ॥

---

೩೯. ಕರ್ತವ್ಯ ಕರ್ಮಗಳಲ್ಲಿ ಧರ್ಮವು ಸಾರವಾಗಿರುವುದು. ಅಂತಹ ಧರ್ಮವು ಮರಣಾನಂತರದಲ್ಲಿ ಅನಂತವಾದ ಫಲಗಳನ್ನು ಕೊಡುವುದು. ಶಿಷ್ಯನು ಗುರುವನ್ನು ಆದರದಿಂದ ಆರಾಧಿಸಿ ವಿದ್ಯಾಗ್ರಹಣಾನಂತರದಲ್ಲಿ ಅವನಿಂದ ಹಿಂದಕ್ಕೆ ಕಳುಹಿಸಲ್ಪಡುವನು.

೪೦. ಅಂತಹ ಶಿಷ್ಯನು ವಿದ್ಯೆಯ ಫಲವನ್ನು ಭುಂಜಿಸುತ್ತಾನೆ. ಮತ್ತು ಮರಣಾನಂತರದಲ್ಲಿ ಸ್ವರ್ಗದಲ್ಲಿ ಪೂಜಿಸಲ್ಪಡುತ್ತಾನೆ. ಮೂರ್ಖನು ಪಿತೃವಿನಿಂದ ಮಾನ್ಯನಾದ ಜ್ಯೇಷ್ಠಭ್ರಾತೃವನ್ನು ಅವಮಾನಮಾಡುತ್ತಾನೆ.

೪೧. ಆ ದುಷ್ಕರ್ಮದಿಂದ ಅವನು ಮರಣಹೊಂದಿದ ನಂತರದಲ್ಲಿ ಘೋರವಾದ ನರಕವನ್ನು ಹೊಂದುತ್ತಾನೆ. ಪೂಜ್ಯನಾದ ಸ್ವಾಮಿಯು ಯಾವಾಗಲೂ ಮಾನವರ ಹಿತಮಾರ್ಗದಲ್ಲಿ ತತ್ಪರನಾಗಿರಬೇಕು.

೪೨. ಈ ಲೋಕದಲ್ಲಿ ಜನನಿಯಲ್ಲಿ ಕೂಡ ಅವಳಿಂದಾಗುವ ಉಪಕಾರದ ಮಹತ್ತ್ವ ದೃಷ್ಟಿಯಿಂದ ಗೌರವವು ಇರುವುದು. ಅಂತಹ ಸ್ವಾಮಿಯ ಅನ್ನವನ್ನು ಭುಂಜಿಸಿದಿದ್ದರಿಂದ ಮಾನವರು ತಮ್ಮ ಪ್ರಾಣಗಳನ್ನು ಸ್ವಾಮಿಗೋಸ್ಕರ ತ್ಯಜಿಸುವರು.

ತೇಷಾಮಥಾಕ್ಷಯಾಂಲ್ಲೋಕಾನ್ ಪ್ರೋವಾಚ ಭಗವಾನ್ ಮನುಃ ।
ಮಾತುಲಾಂಶ್ಚ ಪಿತೃವ್ಯಾಂಶ್ಚ ಶ್ವಶುರಾನ್ಋತ್ವಿಜೋ ಗುರೂನ್ ॥ ೪೩ ॥

ಅಸಾವಹಮಿತಿ ಬ್ರೂಯುಃ ಪ್ರತ್ಯುತ್ಥಾಯ ಯವೀಯಸಃ ।
ಅವಾಚ್ಯೋ ದೀಕ್ಷಿತೋ ನಾಮ್ನಾ ಯವೀಯಾನಪಿ ಯೋ ಭವೇತ್ ॥

ಭೋಭವತ್ಪೂರ್ವಕತ್ವೇನ ಅಭಿಭಾಷೇತ ಧರ್ಮವಿತ್ ।
ಅಭಿವಾದ್ಯಶ್ಚ ಪೂಜ್ಯಶ್ಚ ಶಿರಸಾ ವಂದ್ಯ ಏವ ಚ ॥ ೪೫ ॥

ಬ್ರಾಹ್ಮಣಃ ಕ್ಷತ್ರಿಯಾದ್ಯೈಶ್ಚ ಶ್ರೀಕಾಮೈಃ ಸಾದರಂ ಸದಾ ।
ನಾಭಿವಾದ್ಯಾಸ್ತು ವಿಪ್ರೇಣ ಕ್ಷತ್ರಿಯಾದ್ಯಾಃ ಕಥಂಚನ ॥ ೪೬ ॥

---

೪೩. ಹಾಗೆ ಸ್ವಾಮಿಭಕ್ತರಾದ ಮಾನವರಿಗೆ ಅಕ್ಷಯವಾದ ಸದ್ಗತಿಯು ದೊರೆಯುವುದೆಂದು ಭಗವಂತನಾದ ಮನುವು ಬೋಧಿಸಿರುವನು. ಮಾತುಲ, ಪಿತೃವ್ಯ, ಶ್ವಶುರ, ಋತ್ವಿಜ, ಮತ್ತು ಗುರು-ಇವರು ಕಿರಿಯವರಾದರೂ ಪೂಜ್ಯರಾಗಿರುವರು.

೪೪. ಕಿರಿಯವರಾದರೂ ಪೂಜ್ಯರಾದ ಮಾತುಲಾದಿಗಳ ಸಮ್ಮುಖದಲ್ಲಿ ಮೇಲಕ್ಕೆ ಎದ್ದು ನಿಂತು ಇಂತಹ ನಾನು ಅಭಿವಾದಿಸುವೆನೆಂದು ಹೇಳಿ ಅವರನ್ನು ವಂದಿಸಬೇಕು. ದೀಕ್ಷಿತನು ಕಿರಿಯವನಾದರೂ ನಾಮಧೇಯವನ್ನು ಗ್ರಹಿಸಿ ಕರೆಯಲ್ಪಡಬಾರದು.

೪೫. ಧರ್ಮಜ್ಞನು ಭೋ-ಭವತ್ ಮುಂತಾದ ಗೌರವಶಬ್ದದಿಂದ ಆರಂಭಿಸಿ ಮಾತನಾಡಬೇಕು. ಮತ್ತು ಧರ್ಮಜ್ಞನನ್ನು ಅಭಿವಾದನ, ಪೂಜೆ ಮತ್ತು ತಲೆಬಾಗಿಸಿ ನಮಸ್ಕಾರ–ಮುಂತಾದ ರೀತಿಯಲ್ಲಿ ಸತ್ಕರಿಸಬೇಕು.

೪೬. ಸಂಪತ್ತಿಯನ್ನು ಅಪೇಕ್ಷಿಸುವ ಕ್ಷತ್ರಿಯ ಮುಂತಾದವರಿಂದ ಬ್ರಾಹ್ಮಣನು ಆದರಪೂರ್ವಕವಾಗಿ ಯಾವಾಗಲೂ ಸತ್ಕರಿಸಲ್ಪಡಬೇಕು. ಬ್ರಾಹ್ಮಣನಿಂದ ಕ್ಷತ್ರಿಯ ಮುಂತಾದವರು ಯಾವಾಗಲೂ ಅಭಿವಾದಿಸಲ್ಪಡಲು ಅರ್ಹರಲ್ಲ.

ಜ್ಞಾನಕರ್ಮಗುಣೋಪೇತಾ ಯೇ ಯಜಂತಿ ಬಹುಶ್ರುತಾಃ ।
ಬ್ರಾಹ್ಮಣಃ ಸರ್ವವರ್ಣಾನಾಂ ಸ್ವಸ್ತಿ ಕುರ್ಯಾದಿತಿ ಶ್ರುತಿಃ ॥ ೪೭ ॥

ಸವರ್ಣೇಷು ಸವರ್ಣಾನಾಂ ಕಾಮ್ಯಮೇವಾಭಿವಾದನಮ್ ।
ಗುರುಗಗ್ನಿರ್ದ್ವಿಜಾತೀನಾಂ ವರ್ಣಾನಾಂ ಬ್ರಾಹ್ಮಣೋ ಗುರುಃ ॥ ೪೮ ॥

ಪತಿರೇವ ಗುರುಃ ಸ್ತ್ರೀಣಾಂ ಸರ್ವಸ್ಯಾಭ್ಯಾಗತೋ ಗುರುಃ ।
ವಿದ್ಯಾ ಕರ್ಮ ತಪೋ ಬಂಧುರ್ವಿತ್ತಂ ಭವತಿ ಪಂಚಮಮ್ ॥ ೪೯ ॥

ಮಾನ್ಯಸ್ಥಾನಾನಿ ಪಂಚಾಹುಃ ಪೂರ್ವಂ ಪೂರ್ವಂ ಗುರೂತ್ತರಾತ್ ।
ಏತಾನಿ ತ್ರಿಷು ವರ್ಣೇಷು ಭೂಯಾಂಸಿ ಬಲವಂತಿ ಚ ॥ ೫೦ ॥

---

೪೭. ಜ್ಞಾನ-ಕರ್ಮ ಮುಂತಾದ ಗುಣಗಳಿಂದ ಕೂಡಿದವರೂ, ಬಹು ವಿದ್ಯಾವಂತರೂ ಮತ್ತು ಯಜ್ಞಾದಿ ಕರ್ಮನಿರತರೂ ಆದ ಕ್ಷತ್ರಿಯಾದಿಗಳು ಬ್ರಾಹ್ಮಣರಿಗೆ ಮಾನ್ಯರಲ್ಲ. ಬ್ರಾಹ್ಮಣನು ಸಮಸ್ತ ವರ್ಣಗಳಿಗೂ ಕಲ್ಯಾಣವನ್ನು ಮಾಡುವನೆಂದು ಶ್ರುತಿಯು ಹೇಳುತ್ತದೆ.

೪೮. ಸವರ್ಣಗಳಲ್ಲಿ ಒಂದೇ ಸವರ್ಣದ ವ್ಯಕ್ತಿಗಳಿಗೆ ಅಭಿವಾದನವು ಕಾಮ್ಯವಾಗಿರುವುದು. ತ್ರೈವರ್ಣಿಕರಿಗೆ ಅಗ್ನಿದೇವತೆಯು ಗುರುವು. ವರ್ಣಗಳಿಗೆ ಬ್ರಾಹ್ಮಣನು ಗುರುವು.

೪೯. ಮತ್ತು ಸ್ತ್ರೀಯರಿಗೆ ಪತಿಯೇ ಗುರುವು. ಪ್ರತಿಯೊಂದು ವ್ಯಕ್ತಿಗೂ ಅಭ್ಯಾಗತನು ಶ್ರೇಷ್ಠನಾದ ಗುರುವು. ವಿದ್ಯಾ-ಕರ್ಮ ತಪಸ್ಸು- ಬಾಂಧವ್ಯ ಮತ್ತು ವಿತ್ತ ಎಂಬ ಐದು ಸಂಬಂಧಗಳು ಗೌರವಿಸುವುದಕ್ಕೆ ನಿಮಿತ್ತಗಳು.

೫೦. ಗೌರವಕ್ಕೆ ನಿಮಿತ್ತವಾದ ವಿದ್ಯಾ ಮುಂತಾದ ಐದು ವಸ್ತುಗಳಲ್ಲಿ ಮೊದಮೊದಲನೆಯದು ಮುಂದಿನ ನಿಮಿತ್ತಕ್ಕಿಂತ ಶ್ರೇಷ್ಠವಾದುದು. ಈ ವಿದ್ಯಾದಿಗಳು ತ್ರೈವರ್ಣಿಕರಲ್ಲಿ ಅತಿಶಯವೂ, ಪ್ರಬಲವೂ ಆಗಿದೆ.

ಯತ್ರ ಸ್ಯುಃ ಸೋऽತ್ರ ಮಾನಾರ್ಹಃ ಶೂದ್ರೋऽಪಿ ದಶಮೀಂ ಗತಃ ।
ಪಂಥಾ ದೇಯೋ ಬ್ರಾಹ್ಮಣಾಯ ಸ್ತ್ರಿಯೈ ರಾಜ್ಞೇ ಹ್ಯಚಕ್ಷುಷೇ ॥೫೧॥

ವೃದ್ಧಾಯ ಭಾರಭುಗ್ನಾಯ ರೋಗಿಣೇ ದುರ್ಬಲಾಯ ಚ ।
ಭಿಕ್ಷಾಮಾಹೃತ್ಯ ಶಿಷ್ಟಾನಾಂ ಗೃಹೇಭ್ಯಃ ಪ್ರಯತೋऽನ್ವಹಮ್ ॥ ೫೨ ॥

ನಿವೇದ್ಯ ಗುರವೇऽಶ್ನೀಯಾದ್ವಾಗ್ಯತಸ್ತದನುಜ್ಞಯಾ ।
ಭವತ್ಪೂರ್ವಂ ಚರೇದ್ಭೈಕ್ಷ್ಯಮುಪನೀತೋ ದ್ವಿಜೋತ್ತಮಃ ॥ ೫೩ ॥

ಭವನ್ಮಧ್ಯಂ ತು ರಾಜನ್ಯೋ ವೈಶ್ಯಸ್ತು ಭವದುತ್ತರಮ್ ।
ಮಾತರಂ ವಾ ಸ್ವಸಾರಂ ವಾ ಮಾತುರ್ವಾ ಭಗಿನೀಂ ನಿಜಾಮ್ ॥ ೫೪ ॥

---

೫೧. ಈ ಗುಣಗಳು ಯಾರಲ್ಲಿವೆಯೋ ; ಅವನು ಸನ್ಮಾನಕ್ಕೆ ಅರ್ಹನು. ವಾರ್ಧಕ್ಯವನ್ನು ಹೊಂದಿದ ಶೂದ್ರನು ಸನ್ಮಾನಕ್ಕೆ ಅರ್ಹನಾಗುವನು. ಬ್ರಾಹ್ಮಣನಿಗೂ, ನಾರಿಗೂ, ರಾಜನಿಗೂ ಮತ್ತು ನೇತ್ರವಿಲ್ಲದ ಅಂಧನಿಗೂ ದಾರಿಯನ್ನು ಬಿಡಬೇಕು.

೫೨. ಹಾಗು ವೃದ್ಧ, ಭಾರವನ್ನು ಹೊತ್ತವ, ರೋಗಿ ಅಥವಾ ದುರ್ಬಲ ಮನುಷ್ಯರಿಗೆ ದಾರಿಯನ್ನು ಕೊಡಬೇಕು. ವಟುವು ಶುಚಿಯಾಗಿ ಪ್ರತಿನಿತ್ಯದಲ್ಲಿಯೂ ಶಿಷ್ಟರ ಮನೆಯಿಂದ ಭಿಕ್ಷಾನ್ನವನ್ನು ತರಬೇಕು.

೫೩. ಮತ್ತು ಆ ಭಿಕ್ಷಾನ್ನವನ್ನು ಗುರುವಿಗೆ ಅರ್ಪಿಸಿ ಅವನ ಅನುಜ್ಞೆಯಿಂದ ಮೌನದಿಂದಿದ್ದು ಭುಂಜಿಸಬೇಕು. ಶ್ರೇಷ್ಠನಾದ ವಿಪ್ರನು ಉಪನೀತನಾದಕೂಡಲೇ ಭವತ್ ಶಬ್ದಪೂರ್ವಕವಾಗಿ ಪ್ರಾರ್ಥಿಸಿ ಭಿಕ್ಷೆಯನ್ನು ಬೇಡಬೇಕು.

೫೪. ಕ್ಷತ್ರಿಯನು ವಾಕ್ಯಮಧ್ಯದಲ್ಲಿ ಭವತ್ ಶಬ್ದವನ್ನಿಟ್ಟು ಭಿಕ್ಷೆಯನ್ನು ಬೇಡಬೇಕು. ಹಾಗು ವೈಶ್ಯನು ಕಡೆಯಲ್ಲಿ ಭವತ್ ಶಬ್ದವನ್ನು ಸೇರಿಸಿ ಭಿಕ್ಷೆಯನ್ನು ಪ್ರಾರ್ಥಿಸಬೇಕು.

ಭಿಕ್ಷೇತ ಭಿಕ್ಷಾಂ ಪ್ರಥಮಂ ಯಾ ಚೈನಂ ನ ವಿಮಾನಯೇತ್ ।
ಸ್ವಜಾತೀಯಗೃಹೇಷ್ವೇವ ಸಾರ್ವವರ್ಣಿಕಮೇವ ವಾ ॥ ೫೫ ॥

ಭೈಕ್ಷ್ಯಸ್ಯ ಚರಣಂ ಯುಕ್ತಂ ಪತಿತಾದಿಷು ವರ್ಜಿತಮ್ ।
ವೇದಯಜ್ಞೈರಹೀನಾನಾಂ ಪ್ರಪನ್ನಾನಾಂ ಸ್ವಕರ್ಮಸು ॥ ೫೬ ॥

ಬ್ರಹ್ಮಚಾರೀ ಹರೇದ್ಭೈಕ್ಷ್ಯಂ ಗೃಹೇಭ್ಯಃ ಪ್ರಯತೋಽನ್ವಹಮ್ ।
ಗುರೋಃ ಕುಲೇ ನ ಭಿಕ್ಷೇತ ನ ಜ್ಞಾತಿಕುಲಬಂಧುಷು ॥ ೫೭ ॥

ಅಲಾಭೇ ತ್ವನ್ಯಗೇಹಾನಾಂ ಪೂರ್ವಂ ಪೂರ್ವಂ ವಿವರ್ಜಯೇತ್ ।
ಸರ್ವಂ ವಾ ವಿಚರೇದ್ಗ್ರಾಮಂ ಪೂರ್ವೋಕ್ತಾನಾಮಸಂಭವೇ ॥ ೫೮ ॥

---

೫೫. ಯಾವ ನಾರಿಯು ಇವನನ್ನು ಅವಮಾನಪಡಿಸುವುದಿಲ್ಲವೊ; ಅವಳಲ್ಲಿ ಮೊದಲು ಭಿಕ್ಷಾಟನವನ್ನು ಮಾಡಬೇಕು. ತನ್ನ ಜಾತಿಯವರ ಅಥವ ಸರ್ವ ವರ್ಣಗಳ ಗೃಹಗಳಲ್ಲಿ ಭಿಕ್ಷೆಯನ್ನು ಯಾಚಿಸಬಹುದು.

೫೬. ಈ ಭಿಕ್ಷಾಚರಣೆಯು ಪತಿತಾದಿಗಳಲ್ಲಿ ಮಾಡುವುದು ನಿಷಿದ್ಧವು ಮತ್ತು ವೇದಾಭ್ಯಾಸ, ಯಜ್ಞಾನುಷ್ಠಾನಗಳನ್ನು ಬಿಡದೆ ಸ್ವಧರ್ಮದಲ್ಲಿ ನಿರತ ರಾದವರ ಗೃಹಗಳಲ್ಲಿ ಭಿಕ್ಷಾಚರಣೆಯು ಯುಕ್ತವಾದುದು.

೫೭. ಪವಿತ್ರನಾದ ಬ್ರಹ್ಮಚಾರಿಯು ಅಂತಹವರ ಗೃಹಗಳಿಂದ ಯಾವಾಗಲೂ ಭಿಕ್ಷಾನ್ನವನ್ನು ತರಬೇಕು. ಗುರುವಿನ ಗೃಹದಲ್ಲಿಯೂ, ಜ್ಞಾತಿ ಮತ್ತು ಕುಲ ಬಾಂಧವರಲ್ಲಿಯೂ ಭಿಕ್ಷೆಯನ್ನೆತ್ತಬಾರದು.

೫೮. ಮಿಕ್ಕಾದವರ ಗೃಹಗಳಲ್ಲಿ ಭಿಕ್ಷೆಯು ಲಭಿಸದಿದ್ದರೆ ಪೂರ್ವ ಪೂರ್ವ ದವರನ್ನು ಬಿಟ್ಟು ಗುರು ಗೃಹಾದಿಗಳಲ್ಲಿಯೂ ಭಿಕ್ಷೆಯನ್ನು ಎತ್ತಬಹುದು. ಹಿಂದೆ ಹೇಳಿದ ಯೋಗ್ಯಜನರಲ್ಲಿ ಭಿಕ್ಷಾನ್ನವು ಲಭಿಸದಿದ್ದರೆ ಸಂಪೂರ್ಣಗ್ರಾಮದಲ್ಲಿ ಭಿಕ್ಷೆಗಾಗಿ ಸಂಚರಿಸಬೇಕು.

ನಿಯಮ್ಯ ಪ್ರಯತೋ ವಾಚಂ ದಿಶಸ್ತ್ವನವಲೋಕಯನ್ ।
ಸಮಾಹೃತ್ಯ ತು ತದ್ಭೈಕ್ಷ್ಯಂ ಪಚೇದನ್ನಮಮಾಯಯಾ ॥ ೫೯ ॥

ಭುಂಜೀತ ಪ್ರಯತೋ ನಿತ್ಯಂ ವಾಗ್ಯತೋಽನನ್ಯಮಾನಸಃ ।
ಭೈಕ್ಷ್ಯೇಣ ವರ್ತಯೇನ್ನಿತ್ಯಮೇಕಾನ್ನಾದೀ ಭವೇದ್ವ್ರತೀ ॥ ೬೦ ॥

ಭೈಕ್ಷ್ಯೇಣ ವ್ರತಿನೋ ವೃತ್ತಿರುಪವಾಸಸಮಾ ಸ್ಮೃತಾ ।
ಪೂಜಯೇದಶನಂ ನಿತ್ಯಮದ್ಯಾಚ್ಚೈತದಕುತ್ಸಯನ್ ॥ ೬೧ ॥

ದೃಷ್ಟ್ವಾ ಹೃಷ್ಯೇತ್ ಪ್ರಸೀದೇಚ್ಚ ತತೋ ಭುಂಜೀತ ವಾಗ್ಯತಃ ।
ಅನಾರೋಗ್ಯಮನಾಯುಷ್ಯಮಸ್ವರ್ಗ್ಯಂ ಚಾತಿಭೋಜನಮ್ ॥ ೬೨ ॥

---

೫೯. ಇಂದ್ರಿಯಗಳನ್ನು ನಿಗ್ರಹಿಸಿ ಪವಿತ್ರನಾಗಿ ದಿಕ್ಕುಗಳನ್ನು ನೋಡದೆ ಆ ಭಿಕ್ಷಾನ್ನವನ್ನು ತಂದು ನಿರ್ವಂಚನೆಯಿಂದ ಭುಂಜಿಸಬೇಕು.

೬೦. ಪ್ರತಿನಿತ್ಯದಲ್ಲಿಯೂ ಶುಚಿಯೂ, ಮೌನಿಯೂ ಬೇರೊಂದು ವಿಷಯದಲ್ಲಿ ಮಾನಸವಿಲ್ಲದವನೂ ಆಗಿ ಭೋಜನಮಾಡಬೇಕು. ಮತ್ತು ಭಿಕ್ಷಾನ್ನದಿಂದ ಪ್ರತಿ ನಿತ್ಯವೂ ಒಂದು ಹೊತ್ತು ಮಾತ್ರ ಭೋಜನಮಾಡುವವನೂ, ವ್ರತಧಾರಿಯೂ ಆಗಿರಬೇಕು.

೬೧. ವ್ರತಧಾರಿಗೆ ಭಿಕ್ಷಾನ್ನದ ಜೀವನವು ಉಪವಾಸಕ್ಕೆ ಸಮವೆಂದು ಸ್ಮರಿಸಲ್ಪಟ್ಟಿದೆ. ಆ ಅನ್ನವನ್ನು ಯಾವಾಗಲೂ ಪೂಜಿಸುತ್ತಾ ಸ್ವಲ್ಪವೂ ನಿಂದಾದೃಷ್ಟಿಯಿಂದ ನೋಡದೆ ಭುಂಜಿಸಬೇಕು.

೬೨. ಆ ಅನ್ನವನ್ನು ನೋಡಿದಕೂಡಲೇ ಹರ್ಷವುಳ್ಳವನೂ, ನಿರ್ಮಲವಾದ ಮಾನಸವುಳ್ಳವನೂ ಆಗಬೇಕು. ತರುವಾಯ ಮೌನದಿಂದ ಕುಳಿತು ಅದನ್ನು ಭುಂಜಿಸಬೇಕು.

ಅಪುಣ್ಯಂ ಲೋಕವಿದ್ವಿಷ್ಟಂ ತಸ್ಮಾತ್ತತ್ಪರಿವರ್ಜಯೇತ್ ।
ಪ್ರಾಙ್ಮುಖೋಽನ್ನಾನಿ ಭುಂಜೀತ ಸೂರ್ಯಾಭಿಮುಖ ಏವ ವಾ ॥೬೩॥

ನಾದ್ಯಾದುದಙ್ಮುಖೋ ನಿತ್ಯಂ ವಿಧಿರೇಷ ಸನಾತನಃ ।
ಪ್ರಕ್ಷಾಲ್ಯ ಪಾಣಿಪಾದೌ ಚ ಭುಂಜಾನೋ ದ್ವಿರುಪಸ್ಪೃಶೇತ್ ॥ ೬೪ ॥
ಶುಚೌ ದೇಶೇ ಸಮಾಸೀನೋ ಭುಕ್ತ್ವಾ ಚ ದ್ವಿರುಪಸ್ಪೃಶೇತ್ ॥ ೬೫ ॥

ಇತಿ ಶ್ರೀ ಕೂರ್ಮಪುರಾಣೇ ಪಂಚಷಷ್ಟಿತಮೋಽಧ್ಯಾಯಃ.

---

೬೩. ಅತಿಯಾದ ಭೋಜನವು ಅನಾರೋಗ್ಯ-ಅಲ್ಪಾಯುಷ್ಯ, ಸ್ವರ್ಗಕ್ಕೆ ವಿರೋಧಿ, ಪಾಪಕರ ಮತ್ತು ಲೋಕನಿಂದೆ ಇವುಗಳಿಗೆ ಸಾಧನವಾದುದರಿಂದ ಅದನ್ನು ವರ್ಜಿಸಬೇಕು.

೬೪. ಪೂರ್ವಾಭಿಮುಖನಾಗಿ ಅಥವಾ ಸೂರ್ಯನು ಇರುವ ದಿಕ್ಕಿಗೆ ಅಭಿಮುಖನಾಗಿ ಕುಳಿತುಕೊಂಡು ಭೋಜನಮಾಡಬೇಕು. ಉತ್ತಮ ದಿಕ್ಕಿಗೆ ಅಭಿಮುಖನಾಗಿ ಕುಳಿತು ಯಾವಗಲೂ ಭುಂಜಿಸಬಾರದು. ಇದು ಅನಾದಿಯಾದ ವಿಧಿಯು.

೬೫. ಊಟಮಾಡುವವನು ಕೈ-ಕಾಲುಗಳನ್ನು ತೊಳೆದು-ಎರಡು ಸಲ ಜಲದಿಂದ ಆಚಮನಮಾಡಬೇಕು. ಮತ್ತು ಶುಚಿಯಾದ ದೇಶದಲ್ಲಿ ಕುಳಿತು ಭೋಜನಮಾಡಿ ಮತ್ತೆ ಎರಡು ಸಲ ಆಚಮನಮಾಡಬೇಕು.

( ಕೂರ್ಮಪುರಾಣದಲ್ಲಿ ಅರವತ್ತೈದನೆಯ ಅಧ್ಯಾಯವು ಮುಗಿದುದು. )

---

ಶ್ರೀಃ

# ಕೂರ್ಮಪುರಾಣಂ

## ಷಟ್‌ಷಷ್ಟಿತಮೋಽಧ್ಯಾಯಃ.

ವ್ಯಾಸ ಉವಾಚ :—

ಭುಕ್ತ್ವಾ ಪೀತ್ವಾ ಚ ಸುಪ್ತ್ವಾ ಚ ಸ್ನಾತ್ವಾ ರಥ್ಯೋಪಸರ್ಪಣೇ ।
ಓಷ್ಠಾವಲೋಮಕೌ ಸ್ಪೃಷ್ಟ್ವಾ ವಾಸೋ ವಿಪರಿಧಾಯ ಚ ॥ ೧ ॥

ರೇತೋಮೂತ್ರಪುರೀಷಾಣಾಮುತ್ಸರ್ಗೇಽಯುಕ್ತಭಾಷಣೇ ।
ಷ್ಠೀವಿತ್ವಾಧ್ಯಯನಾರಂಭೇ ಕಾಸಶ್ವಾಸಾಗಮೇ ತಥಾ ॥ ೨ ॥

---

## ಅರವತ್ತಾರನೆಯ ಅಧ್ಯಾಯವು

೧. ವ್ಯಾಸಮುನಿಯು ಹೀಗೆಂದು ಹೇಳಿದನು :— ಶ್ರೇಷ್ಠನಾದ ದ್ವಿಜನು ಭೋಜನ-ಪಾನ-ಶಯನ-ಸ್ನಾನ ಮಾರ್ಗಾಟನ-ವಿಲೋಮವಾದ ಓಷ್ಠಗಳ ಸ್ಪರ್ಶ ಮತ್ತು ವಸ್ತ್ರಧಾರಣಗಳ ನಿಮಿತ್ತ ಪ್ರಸಂಗದಲ್ಲಿ ಆಚಮನಮಾಡಬೇಕು.

೨. ಮತ್ತು ರೇತಸ್ಸು, ಮೂತ್ರ, ಅಮೇಧ್ಯಗಳ ವಿಸರ್ಜನೆ, ಅಯೋಗ್ಯರ ಸಂಗಡ ಭಾಷಣ, ಉಗುಳುವುದು, ವೇದಾಧ್ಯಯನದ ಆರಂಭ, ಶ್ಲೇಷ್ಮಾದಿ ವಿಸರ್ಜನೆ ಇಂತಹ ನಿಮಿತ್ತಗಳಲ್ಲಿಯೂ ಆಚಮನಮಾಡುವುದು ಆವಶ್ಯಕವು.

ಚತ್ವರಂ ವಾ ಶ್ಮಶಾನಂ ವಾ ಸಮಾಗಮ್ಯ ದ್ವಿಜೋತ್ತಮಃ ।
ಸಂಧ್ಯಯೋರುಭಯೋಸ್ತದ್ವದಾಚಾಂತೋಽಪ್ಯಾಚಮೇತ್ ಪುನಃ ॥ ೩ ॥

ಚಂಡಾಲಮ್ಲೇಚ್ಛಸಂಭಾಷೇ ಸ್ತ್ರೀಶೂದ್ರೋಚ್ಛಿಷ್ಟಭಾಷಣೇ ।
ಉಚ್ಛಿಷ್ಟಂ ಪುರುಷಂ ಸ್ಪೃಷ್ಟ್ವಾ ಭೋಜ್ಯಂ ಚಾಪಿ ತಥಾವಿಧಮ್॥ ೪ ॥

ಆಚಾಮೇದಶ್ರುಪಾತೇ ವಾ ಲೋಹಿತಸ್ಯ ತಥೈವ ಚ ।
ಭೋಜನೇ ಸಂಧ್ಯಯೋಃ ಸ್ನಾತ್ವಾ ತ್ಯಾಗೇ ಮೂತ್ರಪುರೀಷಯೋಃ ॥೫॥

ಆಚಾಂತೋಽಪ್ಯಾಚಮೇತ್ ಸುಪ್ತ್ವಾ ಸಕೃತ್ಸಕೃದಥಾನ್ಯಯಃ ।
ಅಗ್ನೇರ್ಗವಾಮಥಾಲಂಭೇ ಸ್ಪೃಷ್ಟ್ವಾಽಪ್ರಯತಮೇವ ಚ ॥ ೬ ॥

---

೩. ಮತ್ತು ಮಾರ್ಗಚೌಕಗಳು, ಶ್ಮಶಾನ-ಇವುಗಳಿಗೆ ಹೋಗಿಬರುವುದು, ಎರಡು ಸಂಧ್ಯಾವಂದನಾನುಷ್ಠಾನ-ಈ ಪ್ರಸಂಗಗಳಲ್ಲಿ ಹಿಂದೊಂದು ಸಲ ಆಚಮನ ಮಾಡಿದ್ದರೂ ಮತ್ತೊಂದು ಸಲ ಆಚಮನಮಾಡಬೇಕು.

೪. ಹಾಗು ಚಂಡಾಲ, ಮ್ಲೇಚ್ಛರೊಡನೆ ಸಂಭಾಷಣೆ, ಸ್ತ್ರೀ-ಶೂದ್ರ ಅಥವಾ ಉಚ್ಛಿಷ್ಟ ಜನಸ್ಪರ್ಶಪೂರ್ವಕವಾದ ಭಾಷಣೆ, ಉಚ್ಛಿಷ್ಟನಾದ ಪುರುಷನ ಸ್ಪರ್ಶ ಅಥವಾ ಉಚ್ಛಿಷ್ಟ ವಸ್ತುಸ್ಪರ್ಶ ಎಂಬ ಹೀನ ನಿಮಿತ್ತಗಳಲ್ಲಿ ಆಚಮನಾನುಷ್ಠಾನವು ವಿಧಿಸಲ್ಪಟ್ಟಿದೆ.

೫. ಕಣ್ಣೀರು ಸುರಿಸುವುದು, ರಕ್ತಪಾತ, ಭೋಜನ, ಎರಡು ಸಂಧ್ಯಾ ವಂದನೆಗಳ ಅನುಷ್ಠಾನ, ಸ್ನಾನ ಮತ್ತು ಮಲ-ಮೂತ್ರವಿಸರ್ಜನೆ ಇವುಗಳನ್ನು ಮಾಡಿದ ಕೂಡಲೇ ಆಚಮನವನ್ನು ಮಾಡಬೇಕು.

೬. ಈ ಹಿಂದೆ ಹೇಳಿದ ಪ್ರಸಂಗಗಳಲ್ಲಿ ಒಂದು ಸಲ ಆಚಮನಮಾಡಿದ್ದರೂ, ಮತ್ತೆ ಆಚಮನಮಾಡುವುದು ಅವಶ್ಯಕವು. ಮತ್ತು ಅಗ್ನಿ-ಗೋವುಗಳ ಸ್ಪರ್ಶ ವಲ್ಲಿಯೂ, ಅಪವಿತ್ರನಾದ ಪುರುಷನ ಸ್ಪರ್ಶದಲ್ಲಿಯೂ ಅಥವಾ ಮತ್ತೊಂದು ವಿಹಿತ ವಾದ ನಿಮಿತ್ತ ಪ್ರಸಂಗದಲ್ಲಿಯೂ ಸ್ವಾಪಾನಂತರದಲ್ಲಿಯೂ ಆಚಮನಮಾಡಬೇಕು

ಸ್ತ್ರೀಣಾಮಥಾತ್ಮನಃ ಸ್ಪರ್ಶೇ ನೀವೀಂ ವಾ ಪರಿಧಾಯ ಚ ।
ಉಪಸ್ಪೃಶೇಜ್ಜಲಂ ಚಾಂತಸ್ತೃಣಂ ವಾ ಭೂಮಿಮೇವ ಚ ॥ ೭ ॥

ಕೇಶಾನಾಂ ಚಾತ್ಮನಃ ಸ್ಪರ್ಶಂ ವಾಸಸೋಽಕ್ಷಾಳಿತಸ್ಯ ಚ ।
ಅನುಷ್ಣಾಭಿರಫೇನಾಭಿರ್ವಿಶುದ್ಧಾಭಿಶ್ಚ ವಾಗ್ಯತಃ ॥ ೮ ॥

ಶೌಚೇಪ್ಸುಃ ಸರ್ವದಾಚಾಮೇದಾಸೀನಃ ಪ್ರಾಗುದಙ್ಮುಖಃ ।
ಶಿರಃ ಪ್ರಾವೃತ್ಯ ಕಂಠಂ ವಾ ಮುಕ್ತಕಚ್ಛಶಿಖೋಽಪಿ ವಾ ॥ ೯ ॥

ಅಕೃತ್ವಾ ಪಾದಯೋಃ ಶೌಚಮಾಚಾಂತೋಽಪ್ಯಶುಚಿರ್ಭವೇತ್ ।
ಸೋಪಾನತ್ಕೋ ಜಲಸ್ಥೋ ವಾ ನೋಷ್ಣೀಷೀ ಚಾಚಮೇದ್ಬುಧಃ ॥

---

೭. ಅಥವಾ ತನಗೆ ಸ್ತ್ರೀಯರ ಸ್ಪರ್ಶವಾದಾಗಲೂ, ಉತ್ತರೀಯವನ್ನು ಧರಿಸಿದಾಗಲೂ, ಜಲವನ್ನು ಸ್ಪರ್ಶಮಾಡಬೇಕು ಅಥವಾ ಆರ್ದ್ರವಾದ ತೃಣ ಅಥವಾ ಭೂಮಿಗಳನ್ನು ಸ್ಪರ್ಶಮಾಡಬೇಕು.

೮. ತನ್ನ ಕೇಶಗಳ ಸ್ಪರ್ಶ ಮತ್ತು ತೊಳೆಯದಿರುವ ವಸ್ತ್ರದ ಸ್ಪರ್ಶಗಳಲ್ಲಿ, ಶುದ್ಧಜಲವನ್ನು ಸ್ಪರ್ಶಮಾಡಬೇಕು. ಶೀತವೂ, ಫೇನರಹಿತವೂ ಮತ್ತು ಶುದ್ಧವೂ ಆದ ನೀರಿನಿಂದ ಮೌನವಾಗಿ ಕುಳಿತು ಆಚಮನಮಾಡಬೇಕು.

೯. ಪವಿತ್ರತೆಯನ್ನು ಅಪೇಕ್ಷಿಸುವ ಮಾನವನು ಪೂರ್ವ ಅಥವಾ ಉತ್ತರಾಭಿಮುಖನಾಗಿ ಕುಳಿತು ಯಾವಾಗಲೂ ಆಚಮನಮಾಡಬೇಕು. ತಲೆಯನ್ನು ಮತ್ತು ಕಂಠವನ್ನು ವಸ್ತ್ರದಿಂದ ಆಚ್ಛಾದಿಸಿಕೊಂಡಾಗಲೀ, ಕಚ್ಛ-ಶಿಖೆಗಳನ್ನು ಬಿಡಿಸಿಕೊಂಡಾಗಲೀ ಆಚಮನಮಾಡುವುದು ನಿಷಿದ್ಧವು.

೧೦. ಪಾದಗಳ ಶೌಚವನ್ನು ಮಾಡದೆ ಆಚಮನಮಾಡಿದರೂ ಅಪವಿತ್ರನಾಗುತ್ತಾನೆ. ಜ್ಞಾನಿಯಾದ ಮಾನವನು ಪಾದರಕ್ಷೆಯನ್ನು ಧರಿಸಿಕೊಂಡಾಗಲಿ ನೀರಿನಲ್ಲಿ ಕುಳಿತುಕೊಂಡಾಗಲಿ ಮತ್ತು ರುಮಾಲನ್ನು ಧರಿಸಿಕೊಂಡಾಗಲಿ ಆಚಮನ ಮಾಡಬಾರದು.

ನ ಚೈವ ವರ್ಷಧಾರಾಭಿರ್ಹಸ್ತೋಚ್ಛಿಷ್ಟೈಸ್ತಥಾ ಬುಧಃ ।
ನೈಕಹಸ್ತಾರ್ಪಿತಜಲೈರ್ವಿನಾ ಸೂತ್ರೇಣ ವಾ ಪುನಃ ॥ ೧೧ ॥

ನ ಪಾದುಕಾಸನಸ್ಥೋ ವಾ ಬಹಿರ್ಜಾನುಕರೋಽಪಿ ವಾ ।
ವಿಟ್ಛೂದ್ರಾದಿಕರಾಮುಕ್ತೈರ್ನ ಚೋಚ್ಛಿಷ್ಟೈಸ್ತಥೈವ ಚ ॥ ೧೨ ॥

ನ ಚೈವಾಂಗುಲಿಭಿಃ ಶಸ್ತಂ ಪ್ರಕುರ್ವನ್ನನ್ಯಮಾನಸಃ ।
ನ ವರ್ಣರಸದುಷ್ಟಾಭಿರ್ನಚೈವ ಪ್ರದರೋದಕೈಃ ॥ ೧೩ ॥

ನ ಪಾಣಿಕ್ಷುಭಿತಾಭಿರ್ವಾ ನ ಬಹಿಷ್ಕಕ್ಷ ಏವ ವಾ ।
ಹೃದ್ಗಾಭಿಃ ಪೂಯತೇ ವಿಪ್ರಃ ಕಂಠ್ಯಾಭಿಃ ಕ್ಷತ್ರಿಯಃ ಶುಚಿಃ ॥ ೧೪ ॥

---

೧೧. ಮಳೆಯಲ್ಲಿ ಸುರಿಯುವ ಜಲಧಾರೆಗಳಿಂದಲೂ, ಹಸ್ತದಲ್ಲಿ ಧರಿಸಿದ ಉಚ್ಛಿಷ್ಟ ಜಲದಿಂದಲೂ, ಒಂದು ಕೈಯಿಂದ ಧರಿಸಿದ ಜಲದಿಂದಲೂ ಮತ್ತು ಯಜ್ಞೋಪವೀತಸೂತ್ರ ಶೂನ್ಯತೆಯಿಂದಲೂ ಆಚಮನಮಾಡುವುದು ನಿಷಿದ್ಧವಾಗಿದೆ.

೧೨. ಪಾದುಕಾಧಾರಿಯೂ, ಆಸನದಲ್ಲಿ ಕುಳಿತುಕೊಂಡವನೂ, ಮಂಡಿಯ ಹೊರಭಾಗದಲ್ಲಿ ಕೈಯನ್ನಿಟ್ಟುಕೊಂಡವನೂ ಆಚಮನಮಾಡುವುದು ನಿಷಿದ್ಧವು. ವೈಶ್ಯ-ಶೂದ್ರಾದಿಗಳ ಕೈಯಿಂದ ತರಲ್ಪಟ್ಟ, ಉಚ್ಛಿಷ್ಟವಾದ ನೀರಿನಿಂದ ಆಚಮನ ಮಾಡಲಾಗದು.

೧೩. ಬೇರೊಂದು ಕಡೆ ಮಾನಸವನ್ನಿಟ್ಟು ಬೆರಳು ಭಾಗಗಳಿಂದ ಆಚಮನ ಮಾಡುವುದು ಪ್ರಶಸ್ತವಲ್ಲ. ವರ್ಣ-ರಸಗಳಿಂದ ದುಷ್ಟವಾ , ಝರಿಯಲ್ಲಿ ಹರಿಯುವ ನೀರಿನಲ್ಲಿ ಆಚಮನಮಾಡಬಾರದು.

೧೪. ಮತ್ತು ಕೈಯಿಂದ ಕಡೆದಿರುವ ನೀರಿನಲ್ಲಿ ಆಚಮನಮಾಡಬಾರದು. ಬಾಹ್ಯವಾದ ಕಕ್ಷಪ್ರದೇಶವುಳ್ಳವನಾಗಿ ಆಚಮನಮಾಡಬಾರದು. ಬ್ರಾಹ್ಮಣನ. ಹೃದಯವನ್ನು ಸೇರುವ ಆಚಮನೋದಕದಿಂದ ಶುಚಿಯಾಗುತ್ತಾನೆ. ಕ್ಷತ್ರಿಯನು ಕಂಠವನ್ನು ಸೇರುವ ಆಚಮನೋದಕದಿಂದ ಶುಚಿಯಾಗುವನು.

ಪ್ರಾಶಿತಾಭಿಸ್ತಥಾ ವೈಶ್ಯಃ ಸ್ತ್ರೀಶೂದ್ರೌ ಸ್ಪರ್ಶತೋಽಂಭಸಃ ।
ಅಂಗುಷ್ಠಮೂಲರೇಖಾಯಾಂ ತೀರ್ಥಂ ಬ್ರಾಹ್ಮ್ಯಮಿಹೋಚ್ಯತೇ ॥

ಪ್ರದೇಶಿನ್ಯಾಂ ಚ ಯನ್ಮೂಲಂ ಪಿತೃತೀರ್ಥಮನುತ್ತಮಮ್ ।
ಕನಿಷ್ಠಾಮೂಲತಃ ಪಶ್ಚಾತ್ ಪ್ರಾಜಾಪತ್ಯಂ ಪ್ರಚಕ್ಷತೇ　　॥ ೧೬ ॥

ಅಂಗುಲ್ಯಗ್ರೇ ಸ್ಮೃತಂ ದೈವಂ ತದ್ದೇವಾರ್ಥಂ ಪ್ರಕೀರ್ತಿತಮ್ ।
ಮೂಲೇ ವಾ ದೈವಮಾದಿಷ್ಟಮಾಗ್ನೇಯಂ ಮಧ್ಯತಃ ಸ್ಮೃತಮ್ ॥೧೭॥

ತದೇವ ಸೌಮಿಕಂ ತೀರ್ಥಮೇವಂ ಜ್ಞಾತ್ವಾ ನ ಮುಹ್ಯತಿ ।
ಬ್ರಾಹ್ಮೇಣೈವ ತು ತೀರ್ಥೇನ ದ್ವಿಜೋ ನಿತ್ಯಮುಪಸ್ಪೃಶೇತ್ ॥ ೧೮ ॥

---

೧೫. ಹಾಗೂ ವೈಶ್ಯನು ಪ್ರಾಶನಮಾತ್ರ ಮಾಡಿದ ಉದಕದಿಂದ ಶುಚಿಯಾಗುತ್ತಾನೆ. ಸ್ತ್ರೀ ಮತ್ತು ಶೂದ್ರರು ನೀರಿನ ಸ್ಪರ್ಶಮಾತ್ರದಿಂದ ಪವಿತ್ರರಾಗುವರು. ದಕ್ಷಿಣ ಹಸ್ತದ ಅಂಗುಷ್ಠದ ಮೂಲರೇಖೆಯಲ್ಲಿ ಬ್ರಾಹ್ಮತೀರ್ಥವು ಇರುವುದೆಂದು ಹೇಳಲ್ಪಟ್ಟಿದೆ.

೧೬. ಪ್ರದೇಶಿನೀ ಬೆರಳಿನ ಮೂಲಭಾಗವು ಸರ್ವೋತ್ತಮವಾದ ಪಿತೃತೀರ್ಥವೆನಿಸುವುದು. ಕನಿಷ್ಠಾಂಗುಳಿಯ ಮೂಲದ ಕೆಳಗೆ ಪ್ರಾಜಾಪತ್ಯತೀರ್ಥವು ಇದೆ—ಎಂದು ಹೇಳುತ್ತಾರೆ.

೧೭. ಅಂಗುಳಿಗಳ ಅಗ್ರದಲ್ಲಿ ಇರುವ ದೈವತೀರ್ಥವು ದೇವತೆಗಳಿಗೋಸ್ಕರವೆಂದು ಕೀರ್ತಿಸಲ್ಪಟ್ಟಿದೆ. ಅಥವಾ ಅಂಗುಳಿ ಮೂಲದಲ್ಲಿ ದೈವತೀರ್ಥವೆಂದು ನಿರ್ದೇಶಿಸಲ್ಪಟ್ಟಿದೆ. ಮತ್ತು ಮಧ್ಯದಲ್ಲಿ ಅಗ್ನಿ ತೀರ್ಥವು ಸ್ಮರಿಸಲ್ಪಟ್ಟಿದೆ.

೧೮. ಅದೇ ಸೌಮಿಕ ತೀರ್ಥವು ಆಗುವುದು. ಹೀಗೆಂದು ತಿಳಿದ ಮಾನವನು ಮೋಹವನ್ನು ಹೊಂದುವುದಿಲ್ಲ. ದ್ವಿಜನು ಯಾವಾಗಲೂ ಬ್ರಾಹ್ಮತೀರ್ಥದಿಂದಲೇ ಆಚಮನಮಾಡಬೇಕು.

ಕಾಯೇನ ವಾಥ ದೈವೇವ ಚಾಥಾಚಾಂತೇ ಶುಚಿರ್ಭವೇತ್ ।
ತ್ರಿರಾಚಾಮೇದಪಃ ಪೂರ್ವಂ ಬ್ರಾಹ್ಮಣಃ ಪ್ರಯತಸ್ತತಃ ॥ ೧೯ ॥

ಸಂವೃತಾಂಗುಷ್ಠಮೂಲೇನ ಮುಖಂ ವೈ ಸಮುಪಸ್ಪೃಶೇತ್ ।
ಅಂಗುಷ್ಠಾನಾಮಿಕಾಭ್ಯಾಂ ತು ಸ್ಪೃಶೇನ್ನೇತ್ರದ್ವಯಂ ತತಃ ॥ ೨೦ ॥

ತರ್ಜನ್ಯಂಗುಷ್ಠಯೋಗೇನ ಸ್ಪೃಶೇನ್ನಾಸಾಪುಟದ್ವಯಮ್ ।
ಕನಿಷ್ಠಾಂಗುಷ್ಠಯೋಗೇನ ಶ್ರವಣೇ ಸಮುಪಸ್ಪೃಶೇತ್ ॥ ೨೧ ॥

ಸರ್ವಾಸಾಂಗುಲೀಭಿರ್ಬಾಹೂ ಚ ಹೃದಯಂ ತು ತಲೇನ ವಾ ।
ನಾಭಿಃ ಶಿರಶ್ಚ ಸರ್ವಾಭಿರಂಗುಷ್ಠೇನಾಥ ವಾ ದ್ವಯಮ್ ॥ ೨೨ ॥

---

೧೯. ಅಥವಾ ಕಾಯತೀರ್ಥದಿಂದಾಗಲೀ ದೈವತೀರ್ಥದಿಂದಾಗಲಿ ಆಚಮನ ಮಾಡಬಹುದು. ಅಂತಹ ಆಚಮನದಿಂದ ದ್ವಿಜನು ಶುಚಿಯಾಗುವನು. ಬ್ರಾಹ್ಮಣನು ಮೊದಲು ಮೂರು ಸಲ ಜಲವನ್ನು ಪ್ರಾಶನಮಾಡಬೇಕು. ಅದರಿಂದ ಪವಿತ್ರನಾಗುವನು.

೨೦. ಮತ್ತು ಮುಚ್ಚಿಕೊಂಡಿರುವ ಅಂಗುಷ್ಠದ ಮೂಲದಿಂದ ಮುಖವನ್ನು ಸ್ಪರ್ಶಮಾಡಬೇಕು. ಮತ್ತು ಅಂಗುಷ್ಠ ಅನಾಮಿಕಾಂಗುಳಿಗಳಿಂದ ಎರಡು ನೇತ್ರಗಳನ್ನು ಸ್ಪರ್ಶಮಾಡಬೇಕು.

೨೧. ತರ್ಜನೀ-ಅಂಗುಷ್ಠಗಳ ಯೋಗದಿಂದ ಎರಡು ನಾಸಾರಂಧ್ರಗಳನ್ನು ಸ್ಪರ್ಶಿಸಬೇಕು. ಅಂಗುಷ್ಠ ಕನಿಷ್ಠಿಕಾಂಗುಳಿಗಳ ಯೋಗದಿಂದ ಕಿವಿಗಳನ್ನು ಸ್ಪರ್ಶಿಸಬೇಕು.

೨೨. ಮತ್ತು ಸಮಸ್ತ ಅಂಗುಳಿಗಳಿಂದ ಬಾಹುಗಳನ್ನೂ, ಹಸ್ತತಲದಿಂದ ಹೃದಯವನ್ನೂ ಸ್ಪರ್ಶಿಸಬೇಕು. ನಾಭಿ, ಶಿರಸ್ಸುಗಳನ್ನು ಎಲ್ಲಾ ಅಂಗುಳಿಗಳಿಂದಲೂ, ಅಥವಾ ಅಂಗುಷ್ಠದಿಂದಲೂ ಸ್ಪರ್ಶಿಸಬೇಕು.

ತ್ರಿಃ ಪ್ರಾಶ್ನೀಯಾತ್ ತದಂಭಸ್ತು ಸುಪ್ರೀತಾಸ್ತೇನ ದೇವತಾಃ ।
ಬ್ರಹ್ಮಾ ವಿಷ್ಣುರ್ಮಹೇಶಶ್ಚ ಭವಂತೀತ್ಯನುಶುಶ್ರುಮ ॥ ೨೩ ॥

ಗಂಗಾ ಚ ಯಮುನಾ ಚೈವ ಪ್ರೀಯೇತೇ ಪರಿಮಾರ್ಜನಾತ್ ।
ಸಂಸ್ಪೃಷ್ಟಯೋರ್ಲೋಚನಯೋಃ ಪ್ರೀಯೇತೇ ಶಶಿಭಾಸ್ಕರೌ ॥ ೨೪ ॥

ನಾಸತ್ಯದಸ್ರೌ ಪ್ರೀಯೇತೇ ಸ್ಪೃಷ್ಟೇ ನಾಸಾಪುಟದ್ವಯೇ ।
ಶ್ರೋತ್ರಯೋಃ ಸ್ಪೃಷ್ಟಯೋಸ್ತದ್ವತ್ಪ್ರೀಯೇತೇ ಚಾನಿಲಾನಲೌ॥ ೨೫॥

ಸಂಸ್ಪೃಷ್ಟೇ ಹೃದಯೇ ವಾಸ್ಯ ಪ್ರೀಯಂತೇ ಸರ್ವದೇವತಾಃ ।
ಮೂರ್ಧ್ನಿ ಸಂಸ್ಪರ್ಶನಾದೇವ ಪ್ರೀತಸ್ತು ಪುರುಷೋ ಭವೇತ್ ॥ ೨೬ ॥

---

೨೩. ಮೂರು ಸಲ ಜಲವನ್ನು ಸ್ಪರ್ಶಮಾಡುವುದರಿಂದ ಬ್ರಹ್ಮ-ವಿಷ್ಣು-ಈಶ್ವರರೆಂಬ ತ್ರಿಮೂರ್ತಿ ದೇವತೆಗಳು ಪ್ರೀತರಾಗುವರೆಂದು ನಾವು ಕೇಳುತ್ತೇವೆ.

೨೪. ಮತ್ತು ಮುಖವನ್ನು ಮಾರ್ಜಿಸುವುದರಿಂದ ಗಂಗಾ-ಯಮುನಾ ನದಿಗಳು ಸುಪ್ರೀತರಾಗುವರು. ನೇತ್ರಗಳನ್ನು ಸ್ಪರ್ಶಮಾಡುವುದರಿಂದ ಸೂರ್ಯ-ಚಂದ್ರರು ಪ್ರೀತಿಯನ್ನು ಹೊಂದುತ್ತಾರೆ.

೨೫. ಮತ್ತು ಮೂಗಿನ ರಂಧ್ರಗಳನ್ನು ಸ್ಪರ್ಶಮಾಡಿದ್ದರಿಂದ ಅಶ್ವಿನೀ ದೇವತೆಗಳು ಸುಪ್ರೀತರಾಗುವರು. ಶ್ರೋತ್ರೇಂದ್ರಿಯಗಳ ಸ್ಪರ್ಶದಿಂದ ವಾಯು-ಅಗ್ನಿ ದೇವತೆಗಳು ಸುಪ್ರೀತಿಯನ್ನು ಹೊಂದುವರು.

೨೬. ಹೃದಯದ ಸ್ಪರ್ಶದಿಂದ ನರನಿಗೆ ಸಮಸ್ತ ದೇವತೆಗಳೂ ಪ್ರೀತಿ ಹೊಂದುವರು. ಶಿರದಲ್ಲಿ ಸ್ಪರ್ಶಮಾಡುವುದರಿಂದ ಪುರುಷರೂಪಿಯಾದ ಪರಮಾತ್ಮನು ಪ್ರೀತಿಹೊಂದುವನು.

ನೋಚ್ಛಿಷ್ಟಂ ಕುರ್ವತೇ ನಿತ್ಯಂ ವಿಪ್ರುಷೋಽಂಗಂ ನಯಂತಿ ಯಾಃ ।
ದಂತಾಂತರ್ದಂತಲಗ್ನೇಷು ಜಿಹ್ವೌಷ್ಠೈರಶುಚಿರ್ಭವೇತ್ ॥ ೨೭ ॥

ಸ್ಪೃಶಂತಿ ಬಿಂದವಃ ಪಾದೌ ಯ ಆಚಾಮಯತಃ ಪರಾನ್ ।
ಭೂಮಿಕಾಸ್ತೇ ಸಮಾಜ್ಞೇಯಾ ನ ತೈರಪ್ರಯತೋ ಭವೇತ್ ॥ ೨೮ ॥

ಮಧುಪರ್ಕೇ ಚ ಸೋಮೇ ಚ ತಾಂಬೂಲಸ್ಯ ಚ ಭಕ್ಷಣೇ ।
ಫಲೇ ಮೂಲೇಕ್ಷುದಂಡೇ ಚ ನ ದೋಷಂ ಪ್ರಾಹ ವೈ ಮನುಃ ॥ ೨೯ ॥

ಪ್ರಚುರಾನ್ನೋದಪಾನೇಷು ಯದ್ಯುಚ್ಛಿಷ್ಟೋ ಭವೇದ್ದ್ವಿಜಃ ।
ಭೂಮೌ ನಿಕ್ಷಿಪ್ಯ ತದ್ದ್ರವ್ಯಮಾಚಮ್ಯಾಭ್ಯುಕ್ಷಯೇತ್ತತಃ ॥ ೩೦ ॥

---

೨೭. ಯಾವ ಜಲಬಿಂದುಗಳು ದೇಹದಲ್ಲಿ ಬಿದ್ದರೂ ಅವು ಯಾವಾಗಲೂ ಉಚ್ಛಿಷ್ಟವನ್ನು ಮಾಡುವುದಿಲ್ಲ. ಹಲ್ಲುಗಳ ಮಧ್ಯದಲ್ಲಿ ಸೇರಿಕೊಂಡ ಅಂಶಗಳಲ್ಲಿ ಉಚ್ಛಿಷ್ಟಭಾವನೆಯು ಇರುವುದಿಲ್ಲ. ನಾಲಿಗೆ ಮತ್ತು ತುಟಿಗಳ ಸ್ಪರ್ಶದಿಂದ ಅಶುಚಿಯಾಗುವನು.

೨೮. ಪರನಿಗೆ ಆಚಮನಮಾಡಿಸುತ್ತಿರುವಾಗ ಯಾವ ಜಲಬಿಂದುಗಳು ತನ್ನ ಪಾದಕ್ಕೆ ಸ್ಪರ್ಶವಾಗುವುವೋ, ಅವು ಭೂಮಿ ಬಿಂದುಗಳಂತೆ ಭಾವಿಸಲು ಅರ್ಹವಾದುವುಗಳು. ಅವುಗಳಿಂದ ಅಶುಚಿಯಾಗುವುದಿಲ್ಲ.

೨೯. ಮಧುಪರ್ಕ, ಸೋಮರಸ, ತಾಂಬೂಲ ಭಕ್ಷಣ, ಫಲ-ಮೂಲ-ಮತ್ತು ಇಕ್ಷುದಂಡಗಳಲ್ಲಿ ಉಚ್ಛಿಷ್ಟ ದೋಷವಿಲ್ಲವೆಂದು ಮನುವೆಂಬ ಮಹಾತ್ಮನು ಹೇಳಿರುವನು.

೩೦. ಹೆಚ್ಚು ರಾಶಿಯಾದ ಅನ್ನಜಲಾದಿಗಳಲ್ಲಿ ದ್ವಿಜನು ಉಚ್ಛಿಷ್ಟನಾದರೆ ಆಗ ಆ ಉಚ್ಛಿಷ್ಟ ದ್ರವ್ಯಭಾಗವನ್ನು ನೆಲದಲ್ಲಿ ಹಾಕಿ ಆಚಮನಮಾಡಿ ಮತ್ತೆ ಆ ರಾಶಿಯನ್ನು ಪ್ರೋಕ್ಷಿಸಬೇಕು.

ತೈಜಸಂ ವಾ ಸಮಾದಾಯ ಯದ್ಯುಚ್ಛಿಷ್ಟೋ ಭವೇದ್ದ್ವಿಜಃ ।
ಭೂಮೌ ನಿಕ್ಷಿಪ್ಯ ತದ್ದ್ರವ್ಯಮಾಚಮ್ಯಾಭ್ಯುಕ್ಷಯೇತ್ ತು ತತ್ ॥ ೩೧ ॥

ಯದ್ಯಮಂತ್ರಂ ಸಮಾದಾಯ ಭವೇದುಚ್ಛೇಷಣಾನ್ವಿತಃ ।
ಅನಿಧಾಯೈವ ತದ್ದ್ರವ್ಯಮಾಚಾಂತಃ ಶುಚಿತಾಮಿಯಾತ್ ॥ ೩೨ ॥

ವಸ್ತ್ರಾದಿಷು ವಿಕಲ್ಪಃ ಸ್ಯಾನ್ನ ಸ್ಪೃಷ್ಟ್ವಾ ಚೈವಮೇವ ಹಿ ।
ಅರಣ್ಯೇಽನುದಕೇ ರಾತ್ರೌ ಚೋರವ್ಯಾಘ್ರಾಕುಲೇ ಪಥಿ ॥ ೩೩ ॥

ಕೃತ್ವಾ ಮೂತ್ರಂ ಪುರೀಷಂ ವಾ ದ್ರವ್ಯಹಸ್ತೋ ನ ದುಷ್ಯತಿ ।
ನಿಧಾಯ ದಕ್ಷಿಣೇ ಕರ್ಣೇ ಬ್ರಹ್ಮಸೂತ್ರಮುದಙ್ಮುಖಃ ॥ ೩೪ ॥

---

೩೧. ತೈಜಸ ದ್ರವ್ಯವನ್ನು ತೆಗೆದುಕೊಂಡು ದ್ವಿಜನು ಉಚ್ಛಿಷ್ಟನಾದರೆ ಆ ದ್ರವ್ಯವನ್ನು ಭೂಮಿಯಲ್ಲಿರಿಸಿ ಆಚಮನದಿಂದ ಪವಿತ್ರನಾಗಿ ಮತ್ತೆ ಆ ವಸ್ತುವನ್ನು ತೆಗೆದುಕೊಂಡು ಒಯ್ಯಬಹುದು.

೩೨. ಮಂತ್ರಪಠನವಿಲ್ಲದ ಸ್ರುವಾದಿ ಪಾತ್ರದಲ್ಲಿರುವ ದ್ರವ್ಯವನ್ನು ತೆಗೆದುಕೊಂಡು ದ್ವಿಜನು ಉಚ್ಛಿಷ್ಟನಾದರೆ ಆ ದ್ರವ್ಯವನ್ನು ಕೆಳಗೆ ಇರಿಸದೆ ಆಚಮನಮಾಡಿ ಶುಚಿತ್ವವನ್ನು ಹೊಂದುವನು.

೩೩. ವಸ್ತ್ರಾದಿ ದ್ರವ್ಯಗಳ ವಿಷಯದಲ್ಲಿಯೂ, ಅಶುಚಿಯಾದ ದ್ರವ್ಯಾದಿಗಳ ಸ್ಪರ್ಶವಿಷಯದಲ್ಲಿಯೂ ಆಚಮನ ಸಮಯದಲ್ಲಿ ಆ ದ್ರವ್ಯಧಾರಣವು ವಿಕಲ್ಪ ರೂಪವಾಗಿದೆ. ಅರಣ್ಯ-ಜಲರಹಿತಸ್ಥಳ, ರಾತ್ರಿಸಮಯ, ಚೋರ-ವ್ಯಾಘ್ರಗಳ ಭಯದಿಂದ ಕೂಡಿದ ಮಾರ್ಗಗಳಲ್ಲಿ ಹಸ್ತದಲ್ಲಿ ದ್ರವ್ಯವನ್ನು ಧರಿಸಿಕೊಂಡಿರಬಹುದು.

೩೪. ಆದ್ದರಿಂದ ಹಸ್ತದಲ್ಲಿ ದ್ರವ್ಯವನ್ನು ಧರಿಸಿ ಮಲ-ಮೂತ್ರಗಳನ್ನು ವಿಸರ್ಜಿಸಿದವನು ದೋಷಿಯಾಗುವುದಿಲ್ಲ. ಹಗಲಿನಲ್ಲಿ ಬ್ರಹ್ಮಸೂತ್ರವನ್ನು ದಕ್ಷಿಣ ಕರ್ಣದಲ್ಲಿ ಇರಿಸಿ ಉತ್ತರಮುಖನಾಗಿ ಕುಳಿತು ಮಲ-ಮೂತ್ರಗಳನ್ನು ವಿಸರ್ಜಿಸಬೇಕು.

ಅಹ್ನಿ ಕುರ್ಯಾಚ್ಛಕೃನ್ಮೂತ್ರಂ ರಾತ್ರೌ ಚೇದ್ದಕ್ಷಿಣಾಮುಖಃ ।
ಅಂತರ್ಧಾಯ ಮಹೀಂ ಕಾಷ್ಠೈ ಪತ್ರೈರ್ಲೋಷ್ಟೈಸ್ತೃಣೇನ ವಾ ॥

ಪ್ರಾವೃತ್ಯ ಚ ಶಿರಃ ಕುರ್ಯಾದ್ವಿಣ್ಮೂತ್ರಸ್ಯ ವಿಸರ್ಜನಮ್ ।
ಛಾಯಾಕೂಪನದೀಗೋಷ್ಠಚೈತ್ಯಾಂತಃಪಥಿಭಸ್ಮಸು ॥ ೩೬ ॥

ಅಗ್ನೌ ವೇಶ್ಮ ಶ್ಮಶಾನೇ ಚ ವಿಣ್ಮೂತ್ರೇ ನ ಸಮಾಚರೇತ್ ।
ನ ಗೋಪಥೇ ನ ಕೃಷ್ಟೇ ವಾ ಮಹಾವೃಕ್ಷೇ ನ ಶಾದ್ವಲೇ ॥ ೩೭ ॥

ನ ತಿಷ್ಠನ್ ವಾ ನ ನಿರ್ವಾಸಾ ನ ಚ ಪರ್ವತಮಸ್ತಕೇ ।
ನ ಜೀರ್ಣದೇವಾಯತನೇ ನ ವಲ್ಮೀಕೇ ಕದಾಚನ ॥ ೩೮ ॥

---

೩೫. ರಾತ್ರಿವೇಳೆಯಲ್ಲಿ ದಕ್ಷಿಣದಿಕ್ಕಿಗೆ ಅಭಿಮುಖನಾಗಿ ಕುಳಿತು ಮಲ-ಮೂತ್ರಗಳನ್ನು ವಿಸರ್ಜಿಸಬೇಕು. ಭೂಮಿಯನ್ನು ಕಾಷ್ಠ-ಪತ್ರ-ಮೃತ್ತಿಂಡ ಅಥವಾ ಹುಲ್ಲಿನಿಂದ ಮುಚ್ಚಬೇಕು.

೩೬. ಶಿರಸ್ಸನ್ನು ವಸ್ತ್ರದಿಂದ ಆಚ್ಛಾದಿಸಿಕೊಂಡು ಮಲ-ಮೂತ್ರ ವಿಸರ್ಜನೆಗೆ ಹೋಗಬೇಕು. ಛಾಯೆ, ಭಾವಿ, ನದಿ, ಗೋಶಾಲೆ, ಶೂನ್ಯಾಲಯ, ಮಾರ್ಗ ಮತ್ತು ಭಸ್ಮರಾಶಿಗಳಲ್ಲಿ ಮಲ-ಮೂತ್ರಗಳನ್ನು ವಿಸರ್ಜಿಸಬಾರದು.

೩೭. ಅಗ್ನಿಗೃಹ, ಶ್ಮಶಾನ, ಗೋವುಗಳ ಮಾರ್ಗ, ಕೃಷಿಮಾಡಿದ ಭೂಮಿ, ದೊಡ್ಡವೃಕ್ಷ ಮತ್ತು ಹುಲ್ಲು ನೆಲಗಳಲ್ಲಿ ಮಲ-ಮೂತ್ರ ವಿಸರ್ಜನೆಯನ್ನು ಮಾಡಬಾರದು.

೩೮. ಹಾಗು ಪರ್ವತದ ಶಿಖರದಲ್ಲಿಯೂ, ಜೀರ್ಣದೇವಾಲಯದಲ್ಲಿಯೂ, ಮತ್ತು ಹುತ್ತದಲ್ಲಿಯೂ ಯಾವಾಗಲೂ ಮಲ-ಮೂತ್ರಗಳನ್ನು ಬಿಡಬಾರದು ಮತ್ತು ನಿಂತುಕೊಂಡವನೂ, ದಿಗಂಬರನೂ ಆಗಿ ಮಲ-ಮೂತ್ರ ವಿಸರ್ಜನೆಮಾಡಬಾರದು.

ನ ಸಸತ್ತ್ವೇಷು ಗರ್ತೇಷು ನ ಗಚ್ಛನ್ ವಾ ಸಮಾಚರೇತ್ ।
ತುಷಾಂಗಾರಕಪಾಲೇಷು ರಾಜಮಾರ್ಗೇ ತಥೈವ ಚ　　　　॥ ೩೯ ॥

ನ ಕ್ಷೇತ್ರೇ ವಿಮಲೇ ಚಾಪಿ ನ ತೀರ್ಥೇ ನ ಚತುಷ್ಪಥೇ ।
ನೋದ್ಯಾನೇ ನ ಸಮೀಪೇ ವಾ ನೋಷರೇ ನ ಪರಾಶುಚೌ　　　॥ ೪೦ ॥

ನ ಸೋಪಾನತ್ಪಾದುಕೋ ವಾ ಗಂತಾ ಯಾನಾಂತರಿಕ್ಷಗಃ ।
ನ ಚೈವಾಭಿಮುಖಿಂ ಸ್ತ್ರೀಣಾಂ ಗುರುಬ್ರಾಹ್ಮಣಯೋರ್ನ ಚ　॥ ೪೧ ॥

ನ ದೇವದೇವಾಲಯಯೋರ್ನದ್ಯಾಮಪಿ ಕದಾಚನ ।
ನದೀಂ ಜ್ಯೋತೀಂಷಿ ವೀಕ್ಷಿತ್ವಾ ನ ವಾರ್ಯಭಿಮುಖೋಽಥ ವಾ॥ ೪೨ ॥

---

೩೯. ಹಾಗು ಪ್ರಾಣಿಗಳು ವಾಸಮಾಡುವ ಹಳ್ಳಗಳಲ್ಲಿಯೂ, ತುಷರಾಶಿಯಲ್ಲಿಯೂ, ಅಂಗಾರಗಳಲ್ಲಿಯೂ, ಕಪಾಲಗಳಲ್ಲಿಯೂ ಮತ್ತು ರಾಜಮಾರ್ಗಗಳಲ್ಲಿಯೂ, ನಡೆಯುವಾಗಲೂ ಮಲ-ಮೂತ್ರ ವಿಸರ್ಜನೆಯನ್ನು ಮಾಡಬಾರದು.

೪೦. ಮತ್ತು ಪುಣ್ಯಕ್ಷೇತ್ರ, ನಿರ್ಮಲವಾದ ತೀರ್ಥ, ಮಾರ್ಗಗಳ ಚೌಕ, ಉದ್ಯಾನ ಸಮೀಪ ಪ್ರದೇಶ, ಊಷರಭೂಮಿ ಅಥವಾ ಬೇರೊಂದರಿಂದ ಅಶುಚಿಯಾದ ಸ್ಥಳ-ಈ ಪ್ರದೇಶಗಳಲ್ಲಿ ಮಲ-ಮೂತ್ರವಿಸರ್ಜನೆಯನ್ನು ಮಾಡಬಾರದು.

೪೧. ಪಾದರಕ್ಷೆ, ಪಾದುಕೆಗಳಿಂದ ಕೂಡಿ ಪ್ರಯಾಣಮಾಡುವವನೂ, ವಾಹನಾರೂಢನೂ, ಅಂತರಿಕ್ಷದಲ್ಲಿ ಪ್ರಯಾಣಮಾಡುವವನೂ, ಗುರು-ಬ್ರಾಹ್ಮಣ ಅಥವಾ ಸ್ತ್ರೀಯರಿಗೆ ಅಭಿಮುಖನಾಗಿರುವವನೂ ಮಲಮೂತ್ರವಿಸರ್ಜನೆಯನ್ನು ಮಾಡಕೂಡದು.

೪೨. ಮತ್ತು ದೇವತಾಮೂರ್ತಿ, ದೇವಾಲಯ, ನದಿ ಮುಂತಾದ ಸ್ಥಳಗಳಲ್ಲಿಯಾಗಲೀ ನದಿ, ಜ್ಯೋತಿಸ್ಸು, ಜಲರಾಶಿ ಇವುಗಳನ್ನು ನೋಡುಂವತೆ ಇವುಗಳಿಗೆ ಅಭಿಮುಖನಾಗಿಯಾಗಲೀ ಮಲ-ಮೂತ್ರಗಳನ್ನು ವಿಸರ್ಜಿಸಬಾರದು.

ಪ್ರತ್ಯಾದಿತ್ಯಂ ಪ್ರತ್ಯನಲಂ ಪ್ರತಿಸೋಮಂ ತಥೈವ ಚ ॥ ೪೩ ॥

ಆಹೃತ್ಯ ಮೃತ್ತಿಕಾಂ ಕೂಲಾಲ್ಲೇಪಗಂಧಾಪಕರ್ಷಣಾತ್ ।
ಕುರ್ಯಾದತಂದ್ರಿತಃ ಶೌಚಂ ವಿಶುದ್ಧೈರುದ್ಧೃತೋದಕೈಃ ॥ ೪೪ ॥

ನಾಹರೇನ್ಮೃತ್ತಿಕಾಂ ವಿಪ್ರಃ ಪಾಂಸುಲಾನ್ನ ಚ ಕರ್ದಮಾನ್ ।
ನ ಮಾರ್ಗಾನ್ನೋಷರಾದ್ದೇಶಾಚ್ಛೌಚೋಚ್ಛಿಷ್ಟಾತ್ತಥೈವ ಚ ॥ ೪೫ ॥

ನ ದೇವಾಯತನಾತ್ ಕೂಪಾದ್ಗ್ರಾಮಾದಂತರ್ಜಲಾತ್ತಥಾ ।
ಉಪಸ್ಪೃಶೇತ್ತತೋ ನಿತ್ಯಂ ಪೂರ್ವೋಕ್ತೇನ ವಿಧಾನತಃ ॥ ೪೬ ॥

ಇತಿ ಶ್ರೀ ಕೂರ್ಮಪುರಾಣೇ ಷಟ್‌ಷಷ್ಟಿತಮೋಽಧ್ಯಾಯಃ.

---

೪೩. ಹಾಗೂ ಆದಿತ್ಯ, ಅಗ್ನಿ, ಚಂದ್ರ-ಇವರಿಗೆ ಅಭಿಮುಖನಾಗಿ ಕುಳಿತುಕೊಂಡು ಮಲ-ಮೂತ್ರಗಳನ್ನು ವಿಸರ್ಜನಮಾಡಬಾರದು.

೪೪. ಮಲ-ಮೂತ್ರವಿಸರ್ಜನೆಯನ್ನು ಮಾಡಿ ಅಶುಚಿ-ಲೇಪ-ಗಂಧಗಳನ್ನು ಹೋಗಲಾಡಿಸುವ, ಮೃತ್ತಿಕೆಯನ್ನು ತೀರದಿಂದ ತಂದು ಶುದ್ಧವೂ, ಮೇಲಕ್ಕೆತ್ತಿರುವುದೂ ಆದ ಉದಕದಿಂದ ಆಲಸ್ಯವಿಲ್ಲದೆ ಶೌಚವಿಧಿಯನ್ನು ಆಚರಿಸಬೇಕು.

೪೫. ವಿಪ್ರನು ಧೂಳಿಯ ಸ್ಥಳದಿಂದಲೂ, ಕೆಸರಿನಿಂದಲೂ, ಮಾರ್ಗದಿಂದಲೂ ಊಷರ ಭೂಮಿಯಿಂದಲೂ ಮತ್ತು ಶೌಚವಿಧಿಯಿಂದ ಉಚ್ಛಿಷ್ಟವಾದ ಆಶ್ರಯದಿಂದಲೂ ಮೃತ್ತಿಕೆಯನ್ನು ತರಬಾರದು.

೪೬. ಹಾಗು ದೇವಾಲಯ, ಕೂಪ, ಗ್ರಾಮ, ಜಲಮಧ್ಯ ಪ್ರದೇಶಗಳಿಂದಲೂ ಮೃತ್ತಿಕೆಯನ್ನು ತರಬಾರದು. ಹೀಗೆ ಶೌಚವಿಧಿಯನ್ನು ನೆರವೇರಿಸಿ ಪೂರ್ವೋಕ್ತ ವಿಧಾನದಿಂದ ನಿತ್ಯದಲ್ಲಿಯೂ ಆಚಮನಮಾಡಬೇಕು.

( ಕೂರ್ಮಪುರಾಣದಲ್ಲಿ ಅರವತ್ತಾರನೆಯ ಅಧ್ಯಾಯವು ಮುಗಿದುದು. )

---

ಶ್ರೀಃ

# ಕೂರ್ಮಪುರಾಣಂ

## ಸಪ್ತಷಷ್ಟಿತಮೋಽಧ್ಯಾಯಃ.

**ವ್ಯಾಸ ಉವಾಚ :—**

**ಏವಂ ದಂಡಾದಿಭಿರ್ಯುಕ್ತಃ ಶೌಚಾಚಾರಸಮನ್ವಿತಃ ।**
**ಆಹೂತೋಽಧ್ಯಯನಂ ಕುರ್ಯಾದ್ವೀಕ್ಷಮಾಣೋ ಗುರೋರ್ಮುಖಮ್**

**ನಿತ್ಯಮುದ್ಧೃತಪಾಣಿಃ ಸ್ಯಾತ್ ಸಂಧ್ಯಾಚಾರಸಮನ್ವಿತಃ ।**
**ಆಸ್ಯತಾಮಿತಿ ಚೋಕ್ತಃ ಸನ್ನಾಸೀತಾಭಿಮುಖಂ ಗುರೋಃ ॥ ೨ ॥**

---

## ಅರವತ್ತೇಳನೆಯ ಅಧ್ಯಾಯವು

೧. ವ್ಯಾಸಮುನಿಯು ಹೀಗೆಂದು ಹೇಳಿದನು :— ಈರೀತಿಯಾಗಿ ದಂಡ ಮುಂತಾದುವುಗಳಿಂದ ಕೂಡಿದವನೂ, ಶೌಚ-ಆಚಾರಗಳಿಂದ ಸಂಪನ್ನನೂ ಆದ ಬ್ರಹ್ಮಚಾರಿಯು ಗುರುವಿನಿಂದ ಕರೆಯಲ್ಪಟ್ಟವನಾಗಿ ಬಂದು ಗುರುವಿನ ಮುಖವನ್ನು ನೋಡುತ್ತಾ ಕುಳಿತುಕೊಂಡು ಅಧ್ಯಯವನ್ನು ಪ್ರಾರಂಭಿಸಬೇಕು.

೨. ಯಾವಾಗಲೂ ಸಂಧ್ಯಾಚರಣೆಯಿಂದ ಕೂಡಿದವನೂ, ಮೇಲಕ್ಕೆ ಎತ್ತಿದ ಹಸ್ತವುಳ್ಳವನೂ ಆದ ಬ್ರಹ್ಮಚಾರಿಯು " ಕುಳಿತುಕೋ " ಎಂದು ಹೇಳಲ್ಪಟ್ಟವನಾಗಿ ಗುರುವಿಗೆ ಅಭಿಮುಖನಾಗಿ ಕುಳಿತುಕೊಳ್ಳಬೇಕು.

ಪ್ರತಿಶ್ರವಣಸಂಭಾಷೇ ಶಯಾನೋ ನ ಸಮಾಚರೇತ್ ।
ಆಸೀನೋ ನ ಚ ತಿಷ್ಠನ್ ವಾ ಉತ್ತಿಷ್ಠನ್ ವಾ ಪರಾಙ್ಮುಖಃ ॥ ೩ ॥

ನ ಚ ಶಯ್ಯಾಸನಂ ಚಾಸ್ಯ ಸರ್ವದಾ ಗುರುಸನ್ನಿಧೌ ।
ಗುರೋಶ್ಚ ಚಕ್ಷುರ್ವಿಷಯೇ ನ ಯಥೇಷ್ಟಾಸನೋ ಭವೇತ್ ॥ ೪ ॥

ನೋದಾಹರೇದಸ್ಯ ನಾಮ ಪರೋಕ್ಷಮಪಿ ಕೇವಲಮ್ ।
ನ ಚೈವಾಸ್ಯಾನುಕುರ್ವೀತ ಗತಿಭಾಷಿತಚೇಷ್ಟಿತಮ್ ॥ ೫ ॥

ಗುರೋರ್ಯತ್ರ ಪ್ರತೀವಾದೋ ನಿಂದಾ ಚಾಪಿ ಪ್ರವರ್ತತೇ ।
ಕರ್ಣೌ ತತ್ರ ಪಿಧಾತವ್ಯೌ ಗಂತವ್ಯಂ ವಾ ತತೋಽನ್ಯತಃ ॥ ೬ ॥

---

೩. ಗುರುವಿನೊಡನೆ ಆಜ್ಞೆಯ ಅಂಗೀಕಾರ-ಸಂಭಾಷಣೆಗಳನ್ನು ಶಯನ ಮಾಡಿಕೊಂಡು ಮಾಡಬಾರದು. ಮತ್ತು ಕುಳಿತುಕೊಂಡವನಾಗಿ, ಪ್ರಯಾಣ ಮಾಡುವವನಾಗಿ ಅಥವಾ ಪರಾಙ್ಮುಖನಾಗಿ ಸಂಭಾಷಣಾದಿಗಳನ್ನು ಮಾಡಬಾರದು.

೪. ಗುರುವಿನ ಸಮೀಪದಲ್ಲಿ ಶಿಷ್ಯನು ಯಾವಾಗಲೂ ಶಯ್ಯೆ ಆಸನಗಳನ್ನು ಉಪಯೋಗಿಸಬಾರದು. ಗುರುವಿನ ದೃಷ್ಟಿಗೆ ವಿಷಯವಾದ ಸ್ಥಳದಲ್ಲಿ ಇಷ್ಟಾನುಸಾರವಾದ ಆಸನದಿಂದ ಇರಬಾರದು.

೫. ಮತ್ತು ಗುರುವಿನ ನಾಮಧೇಯವನ್ನು ಪರೋಕ್ಷದಲ್ಲಿ ಕೂಡ ಸಾಕ್ಷಾತ್ತಾಗಿ ಗ್ರಹಿಸಬಾರದು. ಗುರುವಿನ ನಡೆ-ನುಡಿ-ವ್ಯವಹಾರಗಳನ್ನು ಅಣಕಿಸಬಾರದು.

೬. ಯಾವ ಸ್ಥಳವಲ್ಲಿ ಗುರುವಿನಲ್ಲಿ ಅಪವಾದವೂ, ನಿಂದೆಯೂ ನಡೆಯುತ್ತಿರುವುದೋ ; ಅಲ್ಲಿ ಶಿಷ್ಯನು ತನ್ನ ಕಿವಿಗಳನ್ನು ಮುಚ್ಚಿಕೊಳ್ಳಬೇಕು. ಅಥವಾ ಆ ಸ್ಥಳವನ್ನು ಬಿಟ್ಟು ಬೇರೆ ಕಡೆ ಹೊರಡಬೇಕು.

ದೂರಸ್ಥೋ ನಾರ್ಚಯೇದೇನಂ ನ ಕ್ರುದ್ಧೋ ನಾಂತಿಕೇ ಸ್ತ್ರಿಯಃ ।
ನ ಚೈವಾಸ್ಯೋತ್ತರಂ ಬ್ರೂಯಾತ್ ಸ್ಥಿತೇ ನಾಸೀತ ಸನ್ನಿಧೌ ॥ ೭ ॥

ಉದಕುಂಭಂ ಕುಶಾನ್ ಪುಷ್ಪಂ ಸಮಿಧೋಽಸ್ಯಾಹರೇತ್ ಸದಾ ।
ಮಾರ್ಜನಂ ಲೇಪನಂ ನಿತ್ಯಮಂಗಾನಾಂ ವಾ ಸಮಾಚರೇತ್ ॥ ೮ ॥

ನಾಸ್ಯ ನಿರ್ಮಾಲ್ಯಶಯನಂ ಪಾದಕೋಪಾನಹಾವಪಿ ।
ಆಕ್ರಮೇದಾಸನಂ ಛಾಯಾಮಾಸಂದೀಂ ವಾ ಕದಾಚನ ॥ ೯ ॥

ಸಾಧಯೇದ್ದಂತಕಾಷ್ಠಾದೀನ್ ಕೃತ್ಯಂ ಚಾಸ್ಮೈ ನಿವೇದಯೇತ್ ।
ಅನಾಪೃಚ್ಛ್ಯ ನ ಗಂತವ್ಯಂ ಭವೇತ್ ಪ್ರಿಯಹಿತೇ ರತಃ ॥ ೧೦ ॥

---

೭. ಗುರುವಿಗಿಂತಲೂ ದೂರದಲ್ಲಿ ನಿಂತು ಗುರುವನ್ನು ಸತ್ಕರಿಸಬಾರದು. ಮತ್ತು ಸ್ತ್ರೀ ಸಮೀಪದಲ್ಲಿಯಾಗಲೀ ಕ್ರೋಧಾವಸ್ಥೆಯಲ್ಲಿಯಾಗಲೀ ಗುರುವನ್ನು ಅರ್ಚಿಸಬಾರದು. ಗುರುವಿಗೆ ಉತ್ತರವನ್ನು ನುಡಿಯಬಾರದು. ಮತ್ತು ಗುರುವು ನಿಂತಿರುವ ಸಮಯದಲ್ಲಿ ಅವನ ಸನ್ನಿಧಿಯಲ್ಲಿ ಕುಳಿತುಕೊಳ್ಳಬಾರದು.

೮. ಗುರುಶುಶ್ರೂಷಾಪರನಾದ ಶಿಷ್ಯನು ಗುರುವಿಗೆ ಜಲಕುಂಭ, ದರ್ಭೆ, ಪುಷ್ಪ, ಸಮಿತ್ತು ಮುಂತಾದುದನ್ನು ತಂದುಕೊಡಬೇಕು. ಮತ್ತು ಗುರುವಿನ ದೇಹಕ್ಕೆ ಮಾರ್ಜನ, ಲೇಪನ-ಮುಂತಾದ ಸೇವೆಯನ್ನು ಯಾವಾಗಲೂ ಮಾಡಬೇಕು.

೯. ಗುರುವಿನ ನಿರ್ಮಾಲ್ಯ, ಶಯನ, ಪಾದುಕೆ, ಪಾದರಕ್ಷೆ, ಆಸನ, ಛಾಯೆ ಮತ್ತು ಚತುಷ್ಪಾದಾಸನ-ಈ ವಸ್ತುಗಳನ್ನು ಶಿಷ್ಯನು ಯಾವಾಗಲೂ ಉಪಯೋಗಿಸಬಾರದು.

೧೦. ಗುರುವಿಗೆ ದಂತಕಾಷ್ಠಾದಿಗಳನ್ನು ಒದಗಿಸಬೇಕು. ಅವನ ಕಾರ್ಯವನ್ನು ಮಾಡಿ ಅದನ್ನು ತಿಳಿಸಬೇಕು. ಅವನನ್ನು ಕೇಳದೆ ಬೇರೆಲ್ಲಿಗೂ ಹೋಗಬಾರದು. ಮತ್ತು ಯಾವಾಗಲೂ ಗುರುವಿನ ಪ್ರಿಯ-ಹಿತಗಳ ದೃಷ್ಟಿಯಲ್ಲಿ ಇರಬೇಕು.

ನ ಪಾದೌ ಸಾರಯೇದಸ್ಯ ಸನ್ನಿಧಾನೇ ಕದಾಚನ ।
ಜೃಂಭಾಹಾಸ್ಯಾದಿಕಂ ಚೈವ ಕಂಠಪ್ರಾವರಣಂ ತಥಾ ॥ ೧೧ ॥

ವರ್ಜಯೇತ್ ಸನ್ನಿಧೌ ನಿತ್ಯಮಥಾಸ್ಫೋಟನಮಂ ವಚಃ ।
ಯಥಾಕಾಲಮಧೀಯೀತ ಯಾವನ್ನ ವಿಮನಾ ಗುರುಃ ॥ ೧೨ ॥

ಆಸೀತಾಥ ಗುರೋರುಕ್ತೇ ಫಲಕೇ ವಾ ಸಮಾಹಿತಃ ।
ಆಸನೇ ಶಯನೇ ಯಾನೇ ನೈಕಸ್ತಿಷ್ಠೇತ್ ಕದಾಚನ ॥ ೧೩ ॥

ಧಾವಂತಮನುಧಾವೇತ್ತಂ ಗಚ್ಛಂತಂ ಚಾನಮುಗಚ್ಛತಿ ।
ಗೋಽಶ್ವೋಷ್ಟ್ರ ಯಾನಪ್ರಾಸಾದಪ್ರಸ್ತರೇಷು ಕಟೇಷು ಚ ॥ ೧೪ ॥

---

೧೧. ಗುರುವಿನ ಸನ್ನಿಧಿಯಲ್ಲಿ ಯಾವಾಗಲೂ ಕಾಲುಚಾಚಿಕೊಂಡು ಕುಳಿತಿರಬಾರದು. ಗುರುಸಮ್ಮುಖದಲ್ಲಿ ಆವಳಿಕೆ-ಹಾಸ್ಯವೃತ್ತಿ ಮುಂತಾದುವುಗಳನ್ನೂ, ಕಂಠಾವರಣವನ್ನೂ ವರ್ಜಿಸಬೇಕು.

೧೨. ಮತ್ತು ಗುರುಸನ್ನಿಧಿಯಲ್ಲಿ ಆಸ್ಫೋಟನರೂಪವಾದ ಶಬ್ದವನ್ನು ಯಾವಾಗಲೂ ವರ್ಜಿಸಬೇಕು. ಗರುವಿಗೆ ವೈಮನಸ್ಯವುದಯಿಸುವವರೆಗೂ ವಿಹಿತ ಕಾಲದಲ್ಲಿ ಅಧ್ಯಯನವನ್ನು ಮಾಡಬೇಕು.

೧೩. ಗುರುವಿನ ಕೂರ್ಚಾಸನ, ಫಲಕ, ಆಸನ, ಶಯ್ಯೆ, ಯಾನ, ಮುಂತಾದುವುಗಳಲ್ಲಿ ಗುರುವಿನಿಂದ ಹೇಳಲ್ಪಟ್ಟವನಾಗಿ ಅವನ ಸಂಗಡ ಕುಳಿತುಕೊಳ್ಳಬಹುದು. ಯಾವಾಗಲೂ ಏಕಾಕಿಯಾಗಿ ಆಯಾಯ ಆಸನಾದಿಗಳಲ್ಲಿ ಕುಳಿತಿರಬಾರದು

೧೪. ಗುರುವನ್ನು ಧಾವಿಸುವವನನ್ನು ಅನುಸರಿಸಿ ಧಾವಿಸಬೇಕು. ಹೋಗುತ್ತಿರುವವನನ್ನು ಹಿಂಬಾಲಿಸಿ ನಡೆಬೇಕು. ಗೋವು, ಅಶ್ವ, ಯಾನ, ಪ್ರಾಸಾದ, ಶಿಲೆ, ಮತ್ತು ಚಾಪೆಗಳಲ್ಲಿ ಗುರುವಿನೊಡನೆ ಏಕಾಸನದಲ್ಲಿ ಕುಳಿತಿರಬಾರದು.

ನಾಸೀತ ಗುರುಣಾ ಸಾರ್ಧಂ ಶಿಲಾಫಲಕನೌಷು ಚ ।
ಜಿತೇಂದ್ರಿಯಃ ಸ್ಯಾತ್ ಸತತಂ ವಶ್ಯಾತ್ಮಾಕ್ರೋಧನಃ ಶುಚಿಃ ॥ ೧೫ ॥

ಪ್ರಯುಂಜೀತ ಸದಾ ವಾಚಂ ಮಧುರಾಂ ಹಿತಭಾಷಿಣೀಮ್ ।
ಗಂಧಮಾಲ್ಯಂ ರಸಂ ಭವ್ಯಂ ಶುಕ್ಲಂ ಪ್ರಾಣಿವಿಹಿಂಸನಮ್ ॥ ೧೬ ॥

ಅಭ್ಯಂಗಂ ಚಾಂಜನೋಪಾನಚ್ಛತ್ರಧಾರಣಮೇವ ಚ ।
ಕಾಮಂ ಲೋಭಂ ಭಯಂ ನಿದ್ರಾಂ ಗೀತವಾದಿತ್ರನರ್ತನಮ್ ೧೭ ॥

ದ್ಯೂತಂ ಜನಪರೀವಾದಂ ಸ್ತ್ರೀಪ್ರೇಕ್ಷಾಲಂಭನಂ ತಥಾ ।
ಪರೋಪಘಾತಂ ಪೈಶುನ್ಯಂ ಪ್ರಯತ್ನೇನ ನಿವರ್ಜಯೇತ್ ॥ ೧೮ ॥

ಉದಕುಂಭಂ ಸುಮನಸೋ ಗೋಶಕೃನ್ಮೃತ್ತಿಕಾಂ ಕುಶಾನ್ ।
ಆಹರೇದ್ಯಾವದರ್ಥಾನಿ ಭೈಕ್ಷ್ಯಂ ಚಾಹರಹಶ್ಚರೇತ್ ॥ ೧೯ ॥

---

೧೫. ಮತ್ತು ಶಿಲಾಫಲಕ, ನಾವೆಗಳಲ್ಲಿ ಗುರುವಿನ ಸಂಗಡ ಕುಳಿತುಕೊಳ್ಳ ಬಾರದು. ಮತ್ತು ಗುರುಕುಲದಲ್ಲಿ ಜಿತೇಂದ್ರಿಯನೂ, ಸ್ವತಂತ್ರವಾದ ದೇಹಚಲನವುಳ್ಳವನೂ, ಕ್ರೋಧರಹಿತನೂ ಮತ್ತು ಶುಚಿಯೂ ಆಗಿರಬೇಕು.

೧೬. ಶಿಷ್ಯನು ಯಾವಾಗಲೂ ಮಧುರವೂ, ಹಿತಕರವೂ ಆದ ವಚನವನ್ನು ಹೇಳಬೇಕು. ಬ್ರಹ್ಮಚಾರಿಯು ಗಂಧ,ಮಾಲ್ಯ, ಸ್ವಾದುರಸ, ಧೌತವಸ್ತ್ರ ಮತ್ತು ಪ್ರಾಣಿಹಿಂಸೆಗಳನ್ನು ಯತ್ನಪೂರ್ವಕವಾಗಿ ವರ್ಜಿಸಬೇಕು.

೧೭. ಮತ್ತು ಅಂಜನ, ಅಭ್ಯಂಜನ, ಪಾದರಕ್ಷೆ, ಛತ್ರಧಾರಣ, ಕಾಮ, ಲೋಭ, ಭಯ, ನಿದ್ರೆ, ಗೀತ, ವಾದ್ಯ ಮತ್ತು ನಿದ್ರೆಗಳನ್ನು ಬ್ರಹ್ಮಚಾರಿಯು ಯತ್ನದಿಂದ ವರ್ಜಿಸಬೇಕು.

೧೮. ಹಾಗು ದ್ಯೂತ, ಜನನಿಂದೆ, ಸ್ತ್ರೀಪ್ರೇಕ್ಷಣ, ಸ್ತ್ರೀಸ್ಪರ್ಶ, ಪರಹಿಂಸೆ, ಪಿಶುನತ್ವಗಳನ್ನು ಬ್ರಹ್ಮಚಾರಿಯು ಪ್ರಯತ್ನಪೂರ್ವಕವಾಗಿ ಬಿಡಬೇಕು.

೧೯. ಜಲಕುಂಭ, ಪುಷ್ಪ, ಗೋಮಯ, ಮೃತ್ತಿಕೆ ಮತ್ತು ದರ್ಭ ಮುಂತಾದ ಗುರುಗಳಿಗೆ ಉಪಯೋಗಕರವಾದ ವಸ್ತುಗಳನ್ನೂ, ಭಿಕ್ಷಾನ್ನವನ್ನೂ ಪ್ರತಿದಿನದಲ್ಲಿಯೂ ತರುತ್ತ ಗುರುಸೇವೆಮಾಡಬೇಕು.

ಕೃತಂ ಚ ಲವಣಂ ಸರ್ವಂ ವರ್ಜ್ಯಂ ಪರ್ಯುಷಿತಂ ಚ ಯತ್ ।
ಅನೃತ್ಯದರ್ಶೀ ಸತತಂ ಭವೇದ್ಗೀತಾದಿನಿಃಸ್ಪೃಹಃ ॥ ೨೦ ॥

ನಾದಿತ್ಯಂ ವೈ ಸಮೀಕ್ಷೇತ ನ ಚರೇದ್ದಂತಧಾವನಮ್ ।
ಏಕಾಂತಮಶುಚಿಸ್ತ್ರೀಭಿಃ ಶೂದ್ರಾದ್ಯೈರಭಿಭಾಷಣಮ್ ॥ ೨೧ ॥

ಗುರುಪ್ರಿಯಾರ್ಥಂ ಸರ್ವಂ ಹಿ ಪ್ರಯುಂಜೀತ ನ ಕಾಮತಃ ।
ಮಲಾಪಕರ್ಷಣಂ ಸ್ನಾನಮಾಚರೇದ್ವೈ ಕಥಂ ಚನ ॥ ೨೨ ॥

ನ ಕುರ್ಯಾನ್ಮಾನಸಂ ವಿಪ್ರೋ ಗುರೋಸ್ತ್ಯಾಗೇ ಕದಾಚನ ।
ಮೋಹಾದ್ವಾ ಯದಿ ವಾ ಲೋಭಾತ್ತ್ಯಕ್ತ್ವೈನಂ ಪತಿತೋ ಭವೇತ್ ॥

---

೨೦. ಲವಣಮಿಶ್ರಿತವಾಗಿ ಸಂಸ್ಕೃತವಾದ ಸಮಸ್ತವಸ್ತುಗಳನ್ನೂ, ಪರ್ಯುಷಿತವನ್ನೂ ವರ್ಜಿಸಬೇಕು. ನೃತ್ಯದರ್ಶನದಲ್ಲಿಯೂ ಸಂಗೀತಾದಿ ಶ್ರವಣದಲ್ಲಿಯೂ ನಿಸ್ಪೃಹನಾಗಿರಬೇಕು.

೨೧. ಹಾಗು ಬ್ರಹ್ಮಚಾರಿಯು ಆದಿತ್ಯನನ್ನು ನೋಡಬಾರದು. ಅಲಂಕಾರಾರ್ಥವಾಗಿ ದಂತಧಾವನವನ್ನು ಮಾಡಬಾರದು. ಮತ್ತು ಅಶುಚಿಗಳಾದ ಸ್ತ್ರೀಯರೊಡನೆ ಏಕಾಂತದಲ್ಲಿ ಭಾಷಣವನ್ನೂ ಶೂದ್ರ-ಅಂತ್ಯಜರೊಡನೆ ವ್ಯವಹಾರವನ್ನೂ ಬಿಡಬೇಕು.

೨೨. ಗುರುವಿನ ಪ್ರೀತಿಗೋಸ್ಕರ ಸಕಲ ವ್ಯಾಪಾರಗಳನ್ನು ಮಾಡಬೇಕೇ ಹೊರತು ತನ್ನ ಕಾಮನೆಯಿಂದ ಯಾವುದನ್ನೂ ಆಚರಿಸಬಾರದು. ಹೇಗಾದರೂ ಮಲನಿವೃತ್ತಿಗೋಸ್ಕರ ಶುದ್ಧಸ್ನಾನವನ್ನು ಮಾಡಬೇಕು.

೨೩. ವಿಪ್ರನು ತನ್ನ ಗುರುವಿನ ತ್ಯಾಗದಲ್ಲಿ ಯಾವಾಗಲೂ ಸಂಕಲ್ಪವನ್ನು ಮಾಡಬಾರದು. ಲೋಭ-ಮೋಹಗಳಿಂದ ಗುರುವನ್ನು ತ್ಯಜಿಸಿದ ವಿಪ್ರನು ಪತಿತನಾಗುವನು

ಲೌಕಿಕಂ ವೈದಿಕಂ ಚಾಪಿ ತಥಾಧ್ಯಾತ್ಮಿಕಮೇವ ಚ ।
ಆದದೀತ ಯತೋ ಜ್ಞಾನಂ ನ ತಂ ದ್ರುಹ್ಯೇತ್ ಕದಾ ಚನ ॥ ೨೪ ॥

ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ ।
ಉತ್ಪಥಂ ಪ್ರತಿಪನ್ನಸ್ಯ ಮನುಸ್ತ್ಯಾಗಂ ಸಮಬ್ರವೀತ್ ॥ ೨೫ ॥

ಗುರೋರ್ಗುರೌ ಸನ್ನಿಹಿತೇ ಗುರುವದ್ಭಕ್ತಿಮಾಚರೇತ್ ।
ನ ಚಾತಿಸೃಷ್ಟೋ ಗುರುಣಾ ಸ್ವಾನ್ ಗುರೂನಭಿವಾದಯೇತ್ ॥ ೨೬ ॥

ವಿದ್ಯಾಗುರುಷ್ವೇತದೇವ ನಿತ್ಯಾ ವೃತ್ತಿಃ ಸ್ವಯೋನಿಷು ।
ಪ್ರತಿಷೇಧತ್ಸು ಚಾಧರ್ಮಾದ್ಧಿತಂ ಚೋಪದಿಶತ್ಸ್ವಪಿ ॥ ೨೭ ॥

---

೨೪. ಶಿಷ್ಯನು ಯಾವ ಗುರುವಿನಿಂದ ಲೌಕಿಕ-ವೈದಿಕ ಜ್ಞಾನವನ್ನೂ, ಆಧ್ಯಾತ್ಮಿಕವಾದ ಜ್ಞಾನವನ್ನೂ ಸಂಪಾದಿಸುವನೊ, ಅಂತಹ ಗುರುವಿನಲ್ಲಿ ಯಾವಾಗಲೂ ದ್ರೋಹಭಾವನೆಯನ್ನಿಡಬಾರದು.

೨೫. ಗುರುವಾಗಿದ್ದರೂ ಅಹಂಕಾರಿಯೂ, ಕರ್ತವ್ಯ-ಅಕರ್ತವ್ಯಗಳನ್ನು ತಿಳಿಯದವನೂ ಉನ್ಮಾರ್ಗದಲ್ಲಿ ನಡೆಯುವವನೂ, ಆದವನನ್ನು ತ್ಯಜಿಸಬೇಕೆಂದು ಮನುವು ಬೋಧಿಸಿರುವನು.

೨೬. ಸನ್ನಿಹಿತನಾದ ಗುರುವಿನ ಗುರುವಿನಲ್ಲಿ ಗುರುವಿನಲ್ಲಿ ಹೇಗೋ ಹಾಗೆ ಭಕ್ತಿವೃತ್ತಿಯನ್ನು ಆಚರಿಸಬೇಕು. ಗುರುವಿನಿಂದ ಕಾಮಚಾರಾನುಜ್ಞೆಯನ್ನು ಹೊಂದಿದ ಶಿಷ್ಯನು ಸ್ವಗುರುಗಳನ್ನು ಅಭಿವಾದಿಸಕೂಡದು.

೨೭. ತನಗೆ ಕಾರಣರಾದ ವಿದ್ಯಾಗುರುಗಳಲ್ಲಿ ನಿತ್ಯದಲ್ಲಿಯೂ ಈ ವರ್ತನದಿಂದ ಇರಬೇಕು ಮತ್ತು ಅಧರ್ಮದಿಂದ ನಿಷೇಧಿಸುವವರಲ್ಲಿಯೂ ಹಿತವನ್ನು ಉಪದೇಶಿಸುವವರಲ್ಲಿಯೂ ಗುರುವೃತ್ತಿಯನ್ನು ಅವಲಂಬಿಸಬೇಕು.

ಶ್ರೇಯಸ್ತು ಗುರುವದ್ವೃತ್ತಿಃ ನಿತ್ಯಮೇವ ಸಮಾಚರೇತ್ ।
ಗುರುಪುತ್ರೇಷು ದಾರೇಷು ಗುರೋಶ್ಚೈವ ಸ್ವಬಂಧುಷು ॥ ೨೮ ॥

ಬಾಲಃ ಸಮ್ಮಾನಯನ್ ಮಾನ್ಯಾನ್ ಶಿಷ್ಯೋ ವಾ ಯಜ್ಞಕರ್ಮಣಿ ।
ಅಧ್ಯಾಪಯನ್ ಗುರುಸುತೋ ಗುರುವನ್ಮಾನಮರ್ಹತಿ ॥ ೨೯ ॥

ಉತ್ಸಾದನಂ ವೈ ಗಾತ್ರಾಣಾಂ ಸ್ನಪನೋಚ್ಛಿಷ್ಟಭೋಜನೇ ।
ನ ಕುರ್ಯಾದ್ಗುರುಪುತ್ರಸ್ಯ ಪಾದಯೋಃ ಶೌಚಮೇವ ಚ ॥ ೩೦ ॥

ಗುರುವತ್ ಪರಿಪೂಜ್ಯಾಶ್ಚ ಸವರ್ಣಾ ಗುರುಯೋಷಿತಃ ।
ಅಸವರ್ಣಾಸ್ತು ಸಂಪೂಜ್ಯಾಃ ಪ್ರತ್ಯುತ್ಥಾನಾಭಿವಾದನೈಃ ॥ ೩೧ ॥

---

೨೮. ಗುರುಪುತ್ರರಲ್ಲಿಯೂ ಗುರುಪತ್ನಿಯರಲ್ಲಿಯೂ ಅಥವಾ ಗುರುಬಂಧುಗಳಲ್ಲಿಯೂ ಗುರುವಿನಂತೆ ವೃತ್ತಿಯನ್ನು ಯಾವಾಗಲೂ ಆಚರಿಸುವುದು ಶ್ರೇಯಸ್ಕರವೆಂದು ತಿಳಿಯಬೇಕು.

೨೯. ಮಾನ್ಯರನ್ನು ಸನ್ಮಾನಮಾಡುವ ಪ್ರಸಂಗದಲ್ಲಿ ಸಮೂಹದಲ್ಲಿ ಸೇರಿದ ಮಾನ್ಯಬಾಲಕನೂ, ಯಜ್ಞಸಮಾರಂಭದಲ್ಲಿ ಸೇರಿದ ಶಿಷ್ಯನೂ, ಮತ್ತು ಪ್ರವಚನ ಮಾಡಿಸುವ ಗುರುಪುತ್ರನೂ ಗುರುವಿನಂತೆ ಮಾನಿಸಲು ಅರ್ಹನಾಗಿರುವನು.

೩೦. ಆದರೆ ಗಾತ್ರಸಂಮರ್ದನ, ಸ್ನಾನಮಾಡಿಸುವುದು, ಉಚ್ಛಿಷ್ಟಭೋಜನ ಮತ್ತು ಪಾದಶೌಚಗಳೆಂಬ ಗುರುವೃತ್ತಿಯನ್ನು ಗುರುಪುತ್ರಾದಿಗಳಲ್ಲಿ ಆಚರಿಸಬಾರದು.

೩೧. ಸವರ್ಣರಾದ ಗುರುಪತ್ನಿಯರನ್ನು ಗುರುವಿನಂತೆ ಸತ್ಕರಿಸಬೇಕು. ಅಸವರ್ಣರಾದ ಗುರುಪತ್ನಿಯರಲ್ಲಿ ಪ್ರತ್ಯುತ್ಥಾನ, ಅಭಿವಾದನಗಳಿಂದ ಸತ್ಕಾರವನ್ನು ತೋರಿಸಬೇಕು.

ಅಭ್ಯಂಜನಂ ಸ್ನಾಪನಂ ಚ ಗಾತ್ರೋತ್ಸಾದನಮೇವ ಚ ।
ಗುರುಪತ್ನ್ಯಾ ನ ಕಾರ್ಯಾಣಿ ಕೇಶಾನಾಂ ಚ ಪ್ರಸಾಧನಮ್ ॥ ೩೨ ॥

ಗುರುಪತ್ನೀ ತು ಯುವತೀ ನಾಭಿವಾದ್ಯೇಹ ಪಾದಯೋಃ ।
ಕುರ್ವೀತ ವಂದನಂ ಭೂಮಾವಸಾವಹಮಿತಿ ಬ್ರುವನ್ ॥ ೩೩ ॥

ವಿಪ್ರೋಷ್ಯ ಪಾದಗ್ರಹಣಮನ್ವಹಂ ಚಾಭಿವಾದನಮ್ ।
ಗುರುದಾರೇಷು ಸರ್ವೇಷು ಸತಾಂ ಧರ್ಮಮನುಸ್ಮರನ್ ॥ ೩೪ ॥

ಮಾತೃಷ್ವಸಾ ಮಾತುಲಾನೀ ಶ್ವಶ್ರೂಶ್ಚಾಥ ಪಿತೃಷ್ವಸಾ ।
ಸಂಪೂಜ್ಯಾ ಗುರುಪತ್ನೀ ಚ ಸಮಾಸ್ತಾ ಗುರುಭಾರ್ಯಯಾ ॥ ೩೫ ॥

---

೩೨. ಗುರುಪತ್ನಿಯ ವಿಷಯದಲ್ಲಿ ಅಭ್ಯಂಜನ ಸ್ನಾನಮಾಡಿಸುವುದು, ಗಾತ್ರಮರ್ದನ ಮತ್ತು ಕೇಶಸಂಸ್ಕಾರ ಕರ್ಮಗಳನ್ನು ಶುಶ್ರೂಷೆಗಾಗಿಯೂ ಆಚರಿಸಬಾರದು.

೩೩. ಗುರುಪತ್ನಿಯು ತರುಣಿಯಾಗಿದ್ದ ಪಕ್ಷದಲ್ಲಿ ಪಾದಗಳನ್ನು ಉಪಸಂಗ್ರಹಿಸಿ ಅಭಿವಾದನವನ್ನು ಮಾಡಬಾರದು. ತನ್ನ ನಾಮಧೇಯವನ್ನು ಲ್ಲೇಖಿಸಿ ನೆಲವನ್ನು ಸ್ಪರ್ಶಮಾಡಿ ವಂದನವನ್ನು ಮಾಡಬೇಕು.

೩೪. ಎಲ್ಲ ಗುರುಪತ್ನಿಯರ ವಿಷಯದಲ್ಲಿ ಸಾಧುಧರ್ಮವನ್ನು ಸ್ಮರಿಸಿಕೊಂಡು ದೇಶಾಟನದಿಂದ ಹಿಂತಿರುಗಿ ಬಂದಾಗ ಪಾದೋಪಸಂಗ್ರಹಣವನ್ನೂ ಪ್ರತಿನಿತ್ಯದಲ್ಲಿ ಅಭಿವಾದನವನ್ನೂ ಮಾಡಬೇಕು.

೩೫. ಮಾತೃಭಗಿನೀ, ಮಾತುಲಪತ್ನೀ, ಶ್ವಶ್ರು, ಪಿತೃಭಗಿನೀ, ಮತು ಗುರುಪತ್ನಿಯರು ಮರ್ಯಾದೆಯಲ್ಲಿ ಗುರುಪತ್ನಿಯರಿಗೆ ಸಮಾನರಾಗಿರುವರು. ಇವರು ಪೂಜಾರ್ಹರಾಗಿರುವರು.

ಭ್ರಾತುರ್ಭಾರ್ಯಾ ಚ ಸಂಗ್ರಾಹ್ಯಾ ಸವರ್ಣಾಹನ್ಯಹನ್ಯಪಿ ।
ವಿಪ್ರಸ್ಯ ತೂಪಸಂಗ್ರಾಹ್ಯಾ ಜ್ಞಾತಿಸಂಬಂಧಿಯೋಷಿತಃ ॥ ೩೬ ॥

ಪಿತುರ್ಭಗಿನ್ಯಾ ಮಾತುಶ್ಚ ಜ್ಯಾಯಸ್ಯಾಂ ಚ ಸ್ವಸರ್ಯಪಿ ।
ಮಾತೃವದ್ವೃತ್ತಿಮಾತಿಷ್ಠೇನ್ಮಾತಾ ತಾಭ್ಯೋ ಗರೀಯಸೀ ॥ ೩೭ ॥

ಏವಮಾಚಾರಸಂಪನ್ನಮಾತ್ಮವಂತಮದಾಂಭಿಕಮ್ ।
ವೇದಮಧ್ಯಾಪಯೇದ್ಧರ್ಮಂ ಪುರಾಣಾಂಗಾನಿ ನಿತ್ಯಶಃ ॥ ೩೮ ॥

ಸಂವತ್ಸರೋಷಿತೇ ಶಿಷ್ಯೇ ಗುರುರ್ಜ್ಞಾನಮನಿರ್ದಿಶನ್ ।
ಹರತೇ ದುಷ್ಕೃತಂ ತಸ್ಯ ಶಿಷ್ಯಸ್ಯ ವಸತೋ ಗುರುಃ ॥ ೩೯ ॥

---

೩೬. ಸವರ್ಣಳಾದ ಜ್ಯೇಷ್ಠಭ್ರಾತೃಭಾರ್ಯೆಯೂ, ಜ್ಞಾತಿಸಂಬಂಧವುಳ್ಳ ಸ್ತ್ರೀಯರೂ ವಿಪ್ರನಿಗೆ ಪ್ರತಿದಿನದಲ್ಲಿಯೂ ಪಾದೋಪಸಂಗ್ರಹಣಾಭಿವಾದನಗಳಿಗೆ ಅರ್ಹರಾಗಿರುವರು.

೩೭. ಪಿತೃಭಗಿನೀ, ಮಾತೃಭಗಿನೀ, ಮತ್ತು ಜ್ಯೇಷ್ಠಭಗಿನಿಯರಲ್ಲಿ ಮಾತೃವಿನಲ್ಲಿ ಹೇಗೋ ಹಾಗೆ ಭಕ್ತಿವೃತ್ತಿಯನ್ನು ಆಚರಿಸಬೇಕು. ಇವರೆಲ್ಲರಿಗಿಂತಲೂ ಮಾತೆಯು ಪೂಜ್ಯಳಾಗಿರುವಳು.

೩೮. ಈ ವಿಧವಾದ ಆಚಾರಸಂಪನ್ನನೂ, ಅಪ್ರಮಾದಿಯೂ, ದಂಭರಹಿತನೂ ಆದ ಶಿಷ್ಯನಿಗೆ ವೇದ, ಪುರಾಣ ಮತ್ತು ಧರ್ಮಶಾಸ್ತ್ರಗಳನ್ನು ಯಾವಾಗಲೂ ಅಧ್ಯಯನ ಮಾಡಿಸಬೇಕು.

೩೯. ಜ್ಞಾನಾರ್ಥಿಯಾದ ಶಿಷ್ಯನು ಒಂದು ವರ್ಷಕಾಲ ಗುರುಕುಲದಲ್ಲಿ ವಾಸಮಾಡಿದರೂ ಅವನಿಗೆ ಜ್ಞಾನವನ್ನು ಉಪದೇಶಮಾಡದಿರುವ ಗುರುವು ಆ ಶಿಷ್ಯನ ಪಾಪಕರ್ಮಕ್ಕೆ ಭಾಗಿಯಾಗುತ್ತಾನೆ.

ಆಚಾರ್ಯಪುತ್ರಃ ಶುಶ್ರೂಷುರ್ಜ್ಞಾನದೋ ಧಾರ್ಮಿಕಃ ಶುಚಿಃ ।
ಸೊಕ್ತಾರ್ಥದೋಽರಸಃ ಸಾಧುಃ ಸ್ವಾಧ್ಯಾಯ್ಯಾದಶಧರ್ಮತಃ ॥ ೪೦ ॥

ಕೃತಜ್ಞಶ್ಚ ತಥಾದ್ರೋಹೀ ಮೇಧಾವೀ ತೂಪಕೃನ್ನರಃ ।
ಆಪ್ತಃ ಪ್ರಿಯೋಽಥ ವಿಧಿವತ್ ಷಡಧ್ಯಾಪ್ಯಾ ದ್ವಿಜಾತಯಃ ॥ ೪೧ ॥

ಏತೇಷು ಬ್ರಹ್ಮಣೋ ದಾನಮನ್ಯತ್ರ ಚ ಯಥೋದಿತಾನ್ ।
ಆಚಮ್ಯ ಸಂಯತೋ ನಿತ್ಯಮಧೀಯೀತ ಹ್ಯುದಙ್ಮುಖಃ ॥ ೪೨ ॥

ಉಪಸಂಗೃಹ್ಯ ತತ್ಪಾದೌ ವೀಕ್ಷಮಾಣೋ ಗುರೋರ್ಮುಖಮ್ ।
ಅಧೀಷ್ವ ಭೋ ಇತಿ ಬ್ರೂಯಾದ್ವಿರಾಮುಸ್ತ್ವಿತಿ ನಾರಭೇತ್ ॥ ೪೩ ॥

---

೪೦. ಆಚಾರ್ಯನ ಪುತ್ರನೂ ಶ್ರವಣಮಾಡಲು ಇಷ್ಟವುಳ್ಳವನೂ ಜ್ಞಾನದಾತನೂ ಧಾರ್ಮಿಕನೂ ಶುಚಿಯೂ ವಾಕ್ಯಾರ್ಥವನ್ನು ಸ್ಪಷ್ಟಪಡಿಸುವವನೂ ರಾಗಶೂನ್ಯನೂ ಸಾಧುವೂ ಜಾತಕರ್ಮಾದಿ ಸಂಸ್ಕಾರ ಸಂಸ್ಕೃತನೂ ಆದ ಶಿಷ್ಯನು ಸ್ವಾಧ್ಯಾಯ ಪ್ರವಚನಕ್ಕೆ ಯೋಗ್ಯನಾಗಿರುವನು.

೪೧. ಕೃತಜ್ಞನೂ, ದ್ರೋಹಶೂನ್ಯನೂ, ಮೇಧಾವಿಯೂ, ಉಪಕಾರಿಯೂ, ಆಪ್ತನೂ ಮತ್ತು ಪ್ರಿಯನೂ ಆದ ಈ ಆರುವಿಧದ ದ್ವಿಜರು ಅಧ್ಯಯನಮಾಡಿಸಲು ಯೋಗ್ಯರಾಗಿರುವರು.

೪೨. ಇವರಲ್ಲಿಯೂ, ಹಿಂದೆ ಹೇಳಿದ ವಿಹಿತ ಸತ್ಪಾತ್ರದಲ್ಲಿಯೂ ವೇದದಾನವು ಶುಭಕರವಾದುದು. ಪ್ರತಿದಿನದಲ್ಲಿಯೂ ಆಚಮನಮಾಡಿ ಶುಚಿಯೂ ಉತ್ತರಾಭಿಮುಖನೂ ಆಗಿ ಅಧ್ಯಯನಮಾಡಬೇಕು.

೪೩. ಮೊದಲು ಗುರುವಿನ ಪಾದಗಳನ್ನು ಉಪಸಂಗ್ರಹಣಮಾಡಿ ಗುರುಮುಖವನ್ನು ನೋಡುತ್ತಾ "ಪೂಜ್ಯನಾದ ಗುರುವೇ! ಅಧ್ಯಯನಮಾಡಿಸು" ಹೀಗೆಂದು ಹೇಳಬೇಕು. ವಿರಾಮ ದಿವಸಗಳಲ್ಲಿ ಅಧ್ಯಯನವನ್ನು ಆರಂಭಿಸಬಾರದು.

ಅನುಕೂಲಂ ಸಮಾಸೀನಃ ಪವಿತ್ರೈಶ್ಚೈವ ಪಾವಿತಃ ।
ಪ್ರಾಣಾಯಾಮೈಸ್ತ್ರಿಭಿಃ ಪೂತಸ್ತತ ಓಂಕಾರಮರ್ಹತಿ ॥ ೪೪ ॥

ಬ್ರಾಹ್ಮಣಃ ಪ್ರಣವಂ ಕುರ್ಯಾದಂತೇ ಚ ವಿಧಿವದ್ದ್ವಿಜಃ ।
ಕುರ್ಯಾದಧ್ಯಯನಂ ನಿತ್ಯಂ ಬ್ರಹ್ಮಾಂಜಲಿಕರಃ ಸ್ಥಿತಃ ॥ ೪೫ ॥

ಸರ್ವೇಷಾಮೇವ ಭೂತಾನಾಂ ವೇದಶ್ಚಕ್ಷುಃ ಸನಾತನಮ್ ।
ಅಧೀಯೀತಾಪ್ಯಯಂ ನಿತ್ಯಂ ಬ್ರಾಹ್ಮಣ್ಯಾಚ್ಚ್ಯವತೇಽನ್ಯಥಾ ॥ ೪೬ ॥

ಯೋಽಧೀಯೀತ ಋಚೋ ನಿತ್ಯಂ ಕ್ಷೀರಾಹುತ್ಯಾ ಸ ದೇವತಾಃ ।
ಪ್ರೀಣಾತಿ ತರ್ಪಯಂತ್ಯೇನಂ ಕಾಮೈಸ್ತೃಪ್ತಾಃ ಸದೈವ ಹಿ ॥ ೪೭ ॥

---

೪೪. ಗುರುವಿಗೆ ಅನುಕೂಲನಾಗಿ ಕುಳಿತುಕೊಂಡು ಪಾವನಮಂತ್ರಗಳಿಂದ ಪರಿಶುದ್ಧನಾಗಿ ಮತ್ತು ಮೂರು ಪ್ರಾಣಾಯಾಮಗಳಿಂದ ಪರಿಶುದ್ಧಿಯನ್ನು ಸಂಪಾದಿಸಿ ತರುವಾಯ ಓಂಕಾರವನ್ನು ಹೇಳಲು ಅರ್ಹನಾಗುವನು.

೪೫. ಬ್ರಾಹ್ಮಣನಾದ ದ್ವಿಜನು ವೇದಾಧ್ಯಯನದ ಆದಿ-ಅಂತಗಳಲ್ಲಿ ಓಂಕಾರ ವನ್ನು ಉಚ್ಚರಿಸಬೇಕು. ಮತ್ತು ಕೈಯಲ್ಲಿ ಬ್ರಹ್ಮಾಂಜಲಿಯನ್ನು ಕಟ್ಟಿಕೊಂಡು ಯಾವಾಗಲೂ ವೇದಾಧ್ಯಯನವನ್ನು ಮಾಡಬೇಕು.

೪೬. ಸಮಸ್ತಭೂತಗಳಿಗೆ ವೇದವೆಂಬುದು ಅನಾದಿಯಾದ ನೇತ್ರವಾಗಿಹುದು. ಇಂತಹ ವೇದವನ್ನು ನಿತ್ಯದಲ್ಲಿಯೂ ಅಧ್ಯಯನಮಾಡಬೇಕು. ವೇದಾಧ್ಯಯವನ್ನು ಬಿಟ್ಟವನು ಬ್ರಾಹ್ಮಣ್ಯದಿಂದ ಪತಿತನಾಗುತ್ತಾನೆ.

೪೭. ಯಾವ ಮಾನವನು ಪ್ರತಿದಿನದಲ್ಲಿ ಋಙ್ಮಂತ್ರಗಳನ್ನು ಅಧ್ಯಯನ ಮಾಡುವನೋ, ಅವನು ಕ್ಷೀರಾಹುತಿಯಿಂದ ಸಮಸ್ತ ದೇವತೆಗಳನ್ನು ಪ್ರೀತಿಗೊಳಿಸುವನು. ಹಾಗೆ ಪ್ರೀತಿಹೊಂದಿದ ದೇವತೆಗಳು ಇಷ್ಟಾರ್ಥ ದಾನದಿಂದ ಮಾನವನನ್ನು ಯಾವಾಗಲೂ ತೃಪ್ತಿಗೊಳಿಸುವರು.

ಯಜೂಂಷ್ಯಧೀತೇ ನಿಯತಂ ದಧ್ನಾ ಪ್ರೀಣಾತಿ ದೇವತಾಃ ।
ಸಾಮಾನ್ಯಧೀತೇ ಪ್ರೀಣಾತಿ ಘೃತಾಹುತಿಭಿರನ್ವಹಮ್ ॥ ೪೮ ॥

ಅಥರ್ವಾಂಗಿರಸೋ ನಿತ್ಯಂ ಮಧ್ವಾ ಪ್ರೀಣಾತಿ ದೇವತಾಃ ।
ವೇದಾಂಗಾನಿ ಪುರಾಣಾನಿ ಮಾಂಸೈಶ್ಚ ತರ್ಪಯೇತ್ ಸುರಾನ್ ॥ ೪೯ ॥

ಅಪಾಂ ಸಮೀಪೇ ನಿಯತೋ ನೈತ್ಯಕಂ ವಿಧಿಮಾಶ್ರಿತಃ ।
ಗಾಯತ್ರೀಮಪ್ಯಧೀಯೀತ ಗತ್ವಾರಣ್ಯಂ ಸಮಾಹಿತಃ ॥ ೫೦ ॥

ಸಹಸ್ರಪರಮಾಂ ದೇವೀಂ ಶತಮಧ್ಯಾಂ ದಶಾವರಾಮ್ ।
ಗಾಯತ್ರೀಂ ವೈ ಜಪೇನ್ನಿತ್ಯಂ ಜಪಯಜ್ಞಃ ಪ್ರಕೀರ್ತಿತಃ ॥ ೫೧ ॥

---

೪೮. ಯಜುರ್ಮಂತ್ರಗಳನ್ನು ನಿತ್ಯವಾಗಿ ಅಧ್ಯಯನಮಾಡಿದವನು ದಧಿ ಆಹುತಿಯಿಂದ ದೇವತೆಗಳನ್ನು ತೃಪ್ತಿಗೊಳಿಸುತ್ತಾನೆ. ಸಾಮಮಂತ್ರಗಳನ್ನು ಅಧ್ಯಯನ ಮಾಡಿದವನು ಘೃತಾಹುತಿಯಿಂದ ಯಾವಾಗಲೂ ದೇವತೆಗಳನ್ನು ತೃಪ್ತಿಪಡಿಸುತ್ತಾನೆ.

೪೯. ಅಥರ್ವವೇದಪಾರಾಯಣದಿಂದ ನಿತ್ಯವಾಗಿ ಮಧು ಆಹುತಿಯಿಂದ ದೇವತೆಗಳನ್ನು ಪ್ರೀತಿಗೊಳಿಸುವನು. ಹಾಗು ವೇದಾಂಗ-ಪುರಾಣಗಳ ಅಧ್ಯಯನದಿಂದ ಮಾಂಸಾಹುತಿಯಿಂದ ದೇವರನ್ನು ತೃಪ್ತಿಪಡಿಸುವನು.

೫೦. ಜಲಾಶಯದ ಸಮೀಪದಲ್ಲಿ ಪವಿತ್ರನಾಗಿ ನಿತ್ಯಕರ್ಮವಿಧಿಯನ್ನು ನೆರವೇರಿಸಿ ಸಾವಧಾನಚಿತ್ತನಾಗಿ ಅರಣ್ಯಕ್ಕೆ ಹೋಗಿ ಗಾಯತ್ರೀಮಂತ್ರವನ್ನಾದರೂ ಅಧ್ಯಯನಮಾಡಬೇಕು.

೫೧. ಹೆಚ್ಚೆಂದರೆ ಸಹಸ್ರ ಸಂಖ್ಯೆಯಾಗಿಯೂ ಮಧ್ಯಪ್ರಮಾಣದಲ್ಲಿ ಒಂದು ನೂರು ಸಂಖ್ಯೆಯಾಗಿಯೂ, ನ್ಯೂನವೆಂದರೆ ಹತ್ತು ಸಂಖ್ಯೆಯಾಗಿಯೂ ಗಾಯತ್ರೀ ಮಂತ್ರವನ್ನು ನಿತ್ಯದಲ್ಲಿ ಜಪಿಸಬೇಕು. ಇದು ಜಪಯಜ್ಞವೆಂದು ಕೀರ್ತಿಸಲ್ಪಟ್ಟಿದೆ.

ಗಾಯತ್ರೀಂ ಚೈವ ವೇದಾಂಸ್ತು ತುಲಯಾಽತೋಲಯತ್ಪ್ರಭುಃ ।
ಏಕತಶ್ಚತುರೋ ವೇದಾನ್ ಗಾಯತ್ರೀಂ ಚ ತಥೈಕತಃ ॥ ೫೨ ॥

ಓಂಕಾರಮಾದಿತಃ ಕೃತ್ವಾ ವ್ಯಾಹೃತೀಸ್ತದನಂತರಮ್ ।
ತತೋಽಧೀಯೀತ ಸಾವಿತ್ರೀಮೇಕಾಗ್ರಃ ಶ್ರದ್ಧಯಾನ್ವಿತಃ ॥ ೫೩ ॥

ಪುರಾಕಲ್ಪೇ ಸಮುತ್ಪನ್ನಾ ಭೂರ್ಭುವಃಸ್ವಃ ಸನಾತನಾಃ ।
ಮಹಾವ್ಯಾಹೃತಯಸ್ತಿಸ್ರಃ ಸರ್ವಾಃ ಶುಭನಿಬರ್ಹಣಾಃ ॥ ೫೪ ॥

ಪ್ರಧಾನಂ ಪುರುಷಃ ಕಾಲೋ ವಿಷ್ಣುರ್ಬ್ರಹ್ಮಾ ಮಹೇಶ್ವರಃ ।
ಸತ್ತ್ವಂ ರಜಸ್ತಮಸ್ತಿಸ್ರಃ ಕ್ರಮಾದ್ವ್ಯಾಹೃತಯಃ ಸ್ಮೃತಾ॥ ॥ ೫೫ ॥

---

೫೨. ಪ್ರಭುವಾದ ಮಹೇಶ್ವರನು ಗಾಯತ್ರೀಮಂತ್ರವನ್ನೂ ಸಮಸ್ತ ವೇದಗಳನ್ನೂ ತಕ್ಕಡಿಯಲ್ಲಿಟ್ಟು ತೂಕಮಾಡಿದನು. ಒಂದು ಭಾಗದಲ್ಲಿ ನಾಲ್ಕು ವೇದಗಳೂ ಮತ್ತೊಂದು ಭಾಗದಲ್ಲಿ ಗಾಯತ್ರೀ ಮಂತ್ರವೂ ಸಮಾನವಾದುವು.

೫೩. ಚಿತ್ತೈಕಾಗ್ರತೆ ಉಳ್ಳವನೂ, ಶ್ರದ್ಧಾಸಂಪನ್ನನೂ ಆಗಿ ಮೊದಲು ಓಂಕಾರವನ್ನು ಪಠಿಸಿ ತರುವಾಯ ವ್ಯಾಹೃತಿ ಮಂತ್ರಗಳನ್ನು ಹೇಳಿ ಕಡೆಯಲ್ಲಿ ಗಾಯತ್ರೀ ಮಂತ್ರವನ್ನು ಅಧ್ಯಯನಮಾಡಬೇಕು.

೫೪. "ಭೂಃ, ಭುವಃ, ಸ್ವಃ" ಎಂಬ ಮೂರು ಮಹಾವ್ಯಾಹೃತಿಗಳು ಪೂರ್ವ ಕಲ್ಪದಲ್ಲಿ ಹುಟ್ಟಿದುವುಗಳಾಗಿವೆ. ಎಲ್ಲಾ ವ್ಯಾಹೃತಿ ಮಂತ್ರಗಳೂ ಪಾಪವನ್ನು ದೂರ ಮಾಡಿ ಪುಣ್ಯಕರಗಳಾಗಿರುವುವು.

೫೫. ಮೂರು ವ್ಯಾಹೃತಿ ಮಂತ್ರಗಳು ಕ್ರಮವಾಗಿ ಪ್ರಧಾನ-ಪುರುಷ,-ಕಾಲ, ವಿಷ್ಣು-ಬ್ರಹ್ಮ,-ಮಹೇಶ್ವರ ಮತ್ತು ಸತ್ವ-ರಜಸ್ಸು-ತಮಸ್ಸು ಎಂಬ ಮೂರು ವರ್ಗಗಳಿಗೆ ಸೇರಿದ ಮೂರು ತತ್ವಗಳಾಗಿ ಸ್ಮರಿಸಲ್ಪಟ್ಟವೆ.

ಓಂಕಾರಸ್ತತ್ಪರಂ ಬ್ರಹ್ಮ ಸಾವಿತ್ರೀ ಸ್ಯಾತ್ತದಕ್ಷರಮ್ ।
ಏಷ ಮಂತ್ರೋ ಮಹಾಯೋಗಃ ಸಾರಾತ್ಸಾರ ಉದಾಹೃತಃ ॥ ೫೬ ॥

ಯೋಽಧೀತೇಽಹನ್ಯಹನ್ಯೇತಾಂ ಸಾವಿತ್ರೀಂ ವೇದಮಾತರಮ್ ।
ವಿಜ್ಞಾಯಾರ್ಥಂ ಬ್ರಹ್ಮಚಾರೀ ಸ ಯಾತಿ ಪರಮಾಂ ಗತಿಮ್ ॥ ೫೭ ॥

ಗಾಯತ್ರೀ ವೇದಜನನೀ ಗಾಯತ್ರೀ ಲೋಕಪಾವನೀ ।
ನ ಗಾಯತ್ರ್ಯಾಃ ಪರಂ ಜಪ್ಯಮೇತದ್ವಿಜ್ಞಾಯ ಮುಚ್ಯತೇ ॥ ೫೮ ॥

ಶ್ರಾವಣಸ್ಯ ತು ಮಾಸಸ್ಯ ಪೌರ್ಣಮಾಸ್ಯಾಂ ದ್ವಿಜೋತ್ತಮಾಃ ।
ಆಷಾಢ್ಯಾಂ ಪ್ರೋಷ್ಠಪದ್ಯಾಂ ವಾ ವೇದೋಪಾಕರಣಂ ಸ್ಮೃತಮ್ ॥

---

೫೬. ಓಂಕಾರವೆಂಬುದು ಬ್ರಹ್ಮರೂಪವಾಗಿರುವುದು. ಗಾಯತ್ರಿಯು ಅಕ್ಷರ ರೂಪವಾಗಿರುವುದು. ಹೀಗೆ ಓಂಕಾರ-ಸಾವಿತ್ರಿಗಳೆಂಬ ಮಹಾಯೋಗವುಳ್ಳ ಮಂತ್ರವು ಸಾರವಸ್ತುಗಳೆಲ್ಲಕ್ಕಿಂತ ಸಾರವಾಗಿ ಹೇಳಲ್ಪಟ್ಟಿದೆ.

೫೭. ಯಾವ ಬ್ರಹ್ಮಚಾರಿಯು ಪ್ರತಿದಿನದಲ್ಲಿ ಅರ್ಥಜ್ಞಾನಪೂರ್ವಕವಾಗಿ ವೇದಮಾತೆಯಾದ ಸಾವಿತ್ರಿಯನ್ನು ಜಪಿಸುವನೋ, ಆ ಬ್ರಹ್ಮಚಾರಿಯು ಉತ್ತಮವಾದ ಸದ್ಗತಿಯನ್ನು ಹೊಂದುವನು.

೫೮. ಗಾಯತ್ರಿಯು ವೇದಗಳ ಮಾತೆಯು. ಗಾಯತ್ರಿಯು ಲೋಕಗಳನ್ನು ಪಾವನಮಾಡುವುದು ಮತ್ತು ಗಾಯತ್ರಿಗಿಂತ ಜಪಾರ್ಹವಾದ ಮಂತ್ರವು ಬೇರೊಂದಿಲ್ಲ. ಇದನ್ನು ತಿಳಿದ ಮಾನವನು ಮುಕ್ತಿಹೊಂದುವನು.

೫೯. ದ್ವಿಜಶ್ರೇಷ್ಠರೇ! ಶ್ರಾವಣಮಾಸದ ಪೂರ್ಣಿಮೆಯಲ್ಲಾಗಲೀ ಆಷಾಢ ಮಾಸದ ಪೂರ್ಣಿಮೆಯಲ್ಲಾಗಲೀ ಅಥವಾ ಭಾದ್ರಪದಮಾಸದ ಪೂರ್ಣಿಮೆಯಲ್ಲಾಗಲೀ ಉಪಾಕರ್ಮವು ಕರ್ತವ್ಯವೆಂದು ಸ್ಮರಿಸಲ್ಪಟ್ಟಿದೆ.

ಉತ್ಸೃಜ್ಯ ಗ್ರಾಮನಗರಂ ಮಾಸಾನ್ ವಿಪ್ರೋऽರ್ಧಪಂಚಮಾನ್ ।
ಅಧೀಯೀತ ಶುಚೌ ದೇಶೇ ಬ್ರಹ್ಮಚಾರೀ ಸಮಾಹಿತಃ ॥ ೬೦ ॥

ಪುಷ್ಯೇ ತು ಛಂದಸಾಂ ಕುರ್ಯಾದ್ಬಹಿರುತ್ಸರ್ಜನಂ ದ್ವಿಜಾಃ ।
ಮಾಘಶುಕ್ಲಸ್ಯ ವಾ ಪ್ರಾಪ್ತೇ ಪೂರ್ವಾಹ್ಣೇ ಪ್ರಥಮೇऽಹನಿ ॥ ೬೧ ॥

ಛಂದಸಾಂ ಪ್ರೀಣನಂ ಕುರ್ಯಾತ್ ಸ್ವೇಷು ಋಕ್ಷೇಷು ವೈ ದ್ವಿಜಾಃ ।
ವೇದಾಂಗಾನಿ ಪುರಾಣಾನಿ ಕೃಷ್ಣಪಕ್ಷೇ ಚ ಮಾನವಃ ॥ ೬೨ ॥

ಇಮಾನ್ನಿತ್ಯಮನಧ್ಯಾಯಾನಧೀಯಾನೋ ವಿವರ್ಜಯೇತ್ ।
ಅಧ್ಯಾಪನಂ ಚ ಕುರ್ವಾಣೋ ಹ್ಯನಧ್ಯಾಯಾನ್ ವಿವರ್ಜಯೇತ್ ॥

---

೬೦. ಬ್ರಹ್ಮಚಾರಿಯು ಗ್ರಾಮನಗರಗಳನ್ನು ಬಿಟ್ಟು ನಾಲ್ಕೂವರೆ ಮಾಸಗಳ ವರೆಗೆ ಶುಚಿಯಾದ ಸ್ಥಳದಲ್ಲಿ ಕುಳಿತುಕೊಂಡು ಸಮಾಧಾನಚಿತ್ತದಿಂದ ವೇದಾಧ್ಯಯನವನ್ನು ಮಾಡಬೇಕು.

೬೧. ದ್ವಿಜರೇ! ಪುಷ್ಯಮಾಸದಲ್ಲಿ ಅಥವಾ ಮಾಘಮಾಸದ ಶುಕ್ಲಪಕ್ಷದಲ್ಲಿ ಮೊದಲನೆಯ ದಿನದ ಪೂರ್ವಾಹ್ಣ ಸಮಯದಲ್ಲಿ ಗ್ರಾಮ-ನಗರಗಳ ಹೊರಗೆ ವೇದೋತ್ಸರ್ಜನವನ್ನು ಆಚರಿಸಬೇಕು.

೬೨. ದ್ವಿಜರೇ! ತಮ್ಮ ನಕ್ಷತ್ರಗಳಲ್ಲಿ ಛಂದೋದೇವತೆಗಳಿಗೆ ತರ್ಪಣವನ್ನು ಮಾಡಬೇಕು. ಮಾನವನು ವೇದಾಂಗ-ಪುರಾಣಗಳನ್ನು ಕೃಷ್ಣಪಕ್ಷದಲ್ಲಿ ಅಧ್ಯಯನ ಮಾಡಬೇಕು.

೬೩. ಅಧ್ಯಯನಮಾಡುವವನು ಮುಂದೆ ಹೇಳುವ ಅನಧ್ಯಾಯ ದಿವಸಗಳನ್ನು ಯಾವಾಗಲೂ ಬಿಡಬೇಕು. ವೇದಾಧ್ಯಾಪನವನ್ನು ಮಾಡುವವನು ಈ ಅನಧ್ಯಾಯದಿವಸಗಳನ್ನು ವರ್ಜಿಸಬೇಕು.

ಕರ್ಣಶ್ರವೇಽನಿಲೇ ರಾತ್ರೌ ದಿವಾ ಪಾಂಸುಸಮೂಹನೇ ।
ವಿದ್ಯುತ್ಸ್ತನಿತವರ್ಷೇಷು ಮಹೋಲ್ಕಾನಾಂ ಚ ಸಂಪ್ಲವೇ ॥ ೬೪ ॥

ಆಕಾಲಿಕಮನಧ್ಯಾಯಮೇತೇಷ್ವಾಹ ಪ್ರಜಾಪತಿಃ ।
ನಿರ್ಘಾತೇ ಭೂಮಿಚಲನೇ ಜ್ಯೋತಿಷಾಂ ಚೋಪಸರ್ಜನೇ ॥ ೬೫ ॥

ಏತಾನಾಕಾಲಿಕಾನ್ ವಿದ್ಯಾದನಧ್ಯಾಯಾನೃತಾವಪಿ ।
ಪ್ರಾದುಷ್ಕೃತೇಷ್ವಗ್ನಿಷು ತು ವಿದ್ಯುತ್ಸ್ತನಿತನಿಸ್ವನೇ ॥ ೬೬ ॥

ಸಜ್ಯೋತಿಃ ಸ್ಯಾದನಧ್ಯಾಯಮನೃತೌ ಚಾತ್ರ ದರ್ಶನೇ ।
ನಿತ್ಯಾನಧ್ಯಾಯ ಏವ ಸ್ಯಾದ್ಗ್ರಾಮೇಷು ನಗರೇಷು ಚ ॥ ೬೭ ॥

---

೬೪. ಶ್ರೋತ್ರೇಂದ್ರಿಯಕ್ಕೆಭಾರಿಯಾಗಿಶಬ್ದ ಕೇಳಿಸುವಂತೆ ಗಾಳಿಬೀಸುವ ರಾತ್ರಿ ಸಮಯ, ಹಗಲು ಧೂಳಿ ರಾಶಿ ಏಳುವ ಸಮಯ, ಮಿಂಚು-ಗುಡುಗು ಮಹಾವೃಷ್ಟಿ-ಮತ್ತು ಬೆಂಕಿಯ ಕೊಳ್ಳಿಯಪತನ ಮುಂತಾದ ಪ್ರಸಂಗಗಳು ಅನಧ್ಯಾಯ ನಿಮಿತ್ತವೆಂದು ಸ್ಮರಿಸಲ್ಪಟ್ಟಿವೆ.

೬೫. ಪ್ರಜಾಪತಿಯು ಇಂತಹ ಸಂದರ್ಭಗಳಲ್ಲಿ ಆಕಾಲಿಕವಾದ ಅನಧ್ಯಾಯ ವನ್ನು ಹೇಳಿರುವನು. ಹಾಗು ಸಿಡಿಲು ಬೀಳುವುದು, ಭೂಕಂಪ ಮತ್ತು ಜ್ಯೋತಿ ರ್ಮಂಡಲಕ್ಕೆ ಉಪಸರ್ಗ ಮುಂತಾದುವು ಅನಧ್ಯಾಯಕ್ಕೆ ನಿಮಿತ್ತಗಳು.

೬೬. ಹೀಗೆ ಅಧ್ಯಾಯ ಋತು ಸಮಯಗಳಲ್ಲಿಯೂ ಇವುಗಳನ್ನು ಅಕಾಲಿಕ ಅನಧ್ಯಾಯಗಳೆಂದು ತಿಳಿಯಬೇಕು. ಅಗ್ನಿಯನ್ನು ಪ್ರಾದುಷ್ಕರಣಮಾಡಿದ ಸಮಯ ದಲ್ಲಿಯೂ ಮಿಂಚು ಗುಡುಗುಗಳ ಶಬ್ದವಾಗುವ ಸಮಯದಲ್ಲಿಯೂ ಅನಧ್ಯಾಯ ವೆಂದು ತಿಳಿಯಬೇಕು.

೬೭. ಅಧ್ಯಯನಕ್ಕೆ ವಿಹಿತವಾದ ಋತುವನ್ನು ಬಿಟ್ಟು ಮಿಕ್ಕ ಋತುವಿನಲ್ಲಿ ಜ್ಯೋತಿರ್ದರ್ಶನವಿದ್ದರೂ ಗ್ರಾಮನಗರಗಳಲ್ಲಿ ಜ್ಯೋತಿಯಿಂದ ಕೂಡಿದ ನಿತ್ಯವಾದ ಅನಧ್ಯಾಯವೆಂದು ತಿಳಿಯಬೇಕು.

ಧರ್ಮನೈಪುಣ್ಯಕಾಮಾನಾಂ ಪೂತಿಗಂಧೇನ ನಿತ್ಯಶಃ ।
ಅಂತಃಶವಗತೇ ಗ್ರಾಮೇ ವೃಷಲಸ್ಯ ಚ ಸನ್ನಿಧೌ ॥ ೩೮ ॥

ಅನಧ್ಯಾಯೋ ರುದ್ಯಮಾನೇ ಸಮವಾಯೇ ಜನಸ್ಯ ಚ ।
ಉದಕೇ ಮಧ್ಯರಾತ್ರೇ ಚ ವಿಣ್ಮೂತ್ರೇ ಚ ವಿವರ್ಜಯೇತ್ ॥ ೩೯ ॥

ಉಚ್ಛಿಷ್ಟಃ ಶ್ರಾದ್ಧಭುಕ್ ಚೈವ ಮನಸಾಪಿ ನ ಚಿಂತಯೇತ್ ।
ಪ್ರತಿಗೃಹ್ಯ ದ್ವಿಜೋ ವಿದ್ವಾನೇಕೋದ್ದಿಷ್ಟಸ್ಯ ಕೇತನಮ್ ॥ ೭೦ ॥

ತ್ರ್ಯಹಂ ನ ಕೀರ್ತಯೇದ್ಬ್ರಹ್ಮ ರಾಜ್ಞೋ ರಾಹೋಶ್ಚ ಸೂತಕೇ ।
ಯಾವದೇಕೋಽನುದಿಷ್ಟಸ್ಯ ಸ್ನೇಹೋ ಲೇಪಶ್ಚ ತಿಷ್ಠತಿ ॥ ೭೧ ॥

---

೩೮. ಧರ್ಮಾರ್ಜನದಲ್ಲಿ ಸಮಗ್ರತೆಯನ್ನು ಆಶಿಸುವವರಿಗೆ ಯಾವಾಗಲೂ ದುರ್ಗಂಧವು ಉಂಟಾದ ಸಮಯ, ಗ್ರಾಮದ ಒಳಗೆ ಶವವು ಬಿದ್ದಿರುವ ಸಮಯ ಮತ್ತು ಶೂದ್ರ ಸನ್ನಿಧಿಗಳು ಅಧ್ಯಯನಕ್ಕೆ ವರ್ಜ್ಯವಾದುವುಗಳು.

೩೯. ಹಾಗು ಭೋಜನಮಾಡುವ ಸಮಯ, ಜನಸಂಘವು ಸೇರಿದ ಸ್ಥಳ, ಜಲಾಶಯ, ಮಧ್ಯರಾತ್ರಿ, ಮತ್ತು ಮಲ ಮೂತ್ರ ವಿಸರ್ಜನೆ ಮಾಡುವ ಸಮಯ, ಇವುಗಳನ್ನು ಅಧ್ಯಯನಕ್ಕೆ ನಿಷಿದ್ಧವೆಂದು ತಿಳಿಯಬೇಕು.

೭೦. ಮತ್ತು ಉಚ್ಛಿಷ್ಟನೂ, ಶ್ರಾದ್ಧಾನ್ನವನ್ನು ಭುಂಜಿಸಿದವದೂ ವೇದಗಳನ್ನು ಮನಸ್ಸಿನಲ್ಲಿಯೂ ಚಿಂತಿಸಬಾರದು. ಜ್ಞಾನಿಯಾದ ದ್ವಿಜನು ಏಕೋದಿಷ್ಟ ಪ್ರೇತ ಭೋಜನವನ್ನು ಪ್ರತಿಗ್ರಹಮಾಡಿ ಮೂರು ದಿನಗಳವರೆಗೆ ವೇದಾಧ್ಯಯನವನ್ನು ಬಿಡಬೇಕು.

೭೧. ಚಂದ್ರನಿಗೆ ರಾಹು ಗ್ರಹಣವಾದ ಸಮಯದಲ್ಲಿ ಮೂರು ದಿನಗಳವರೆಗೆ ವೇದಗಳನ್ನು ಪಠಿಸಬಾರದು. ಏಕೋದ್ದಿಷ್ಟ ಭೋಜನದ ಸ್ನೇಹ-ಲೇಪಗಳು ಭೋಜನಾನಂತರದಲ್ಲಿ ಕೆಲವು ದಿನಗಳು ಮುಂದುವರಿಯುವುವು.

ವಿಪ್ರಸ್ಯ ವಿಪುಲೇ ದೇಹೇ ತಾವದ್ಬ್ರಹ್ಮ ನ ಕೀರ್ತಯೇತ್ ।
ಶಯಾನಃ ಪ್ರೌಢಪಾದಶ್ಚ ಕೃತ್ವಾ ವೈ ಚಾವಸಕ್ಥಿಕಾಮ್ ॥ ೬೨ ॥

ನಾಧೀಯೀತಾಮಿಷಂ ಜಗ್ಧ್ವಾ ಸೂತಕಾದ್ಯನ್ನಮೇವ ಚ ।
ನೀಹಾರೇ ಬಾಣಪಾತೇ ಚ ಸಂಧ್ಯಯೋರುಭಯೋರಪಿ ॥ ೬೩ ॥

ಅಮಾವಾಸ್ಯಾಂ ಚತುರ್ದಶ್ಯಾಂ ಪೌರ್ಣಮಾಸ್ಯಷ್ಟಮೀಷು ಚ ।
ಉಪಾಕರ್ಮಣಿ ಚೋತ್ಸರ್ಗೇ ತ್ರಿರಾತ್ರಂ ಕ್ಷಪಣಂ ಸ್ಮೃತಮ್ ॥ ೬೪ ॥

ಅಷ್ಟಕಾಸು ತ್ರ್ಯಹೋರಾತ್ರಮೃತ್ವಂತಾಸು ಚ ರಾತ್ರಿಷು ।
ಮಾರ್ಗಶೀರ್ಷೇ ತಥಾ ಪೌಷೇ ಮಾಘಮಾಸೇ ತಥೈವ ಚ ॥ ೬೫ ॥

---

೬೨. ಬ್ರಾಹ್ಮಣನ ವಿಸ್ತಾರವಾದ ದೇಹದಲ್ಲಿ ಏಕೋದ್ದಿಷ್ಟ ಭೋಜನದ ಸ್ನೇಹ ಲೇಪಗಳು ಇರುವ ವರೆಗೆ ವೇದಗಳನ್ನು ಕಲಿಯಬಾರದು. ಮತ್ತು ಮಲಗಿಕೊಂಡು, ಕಾಲನ್ನು ಚಾಚಿಕೊಂಡು ಅಥವಾ ಕಾಲಿನಮೇಲೆ ಕಾಲನ್ನಿಟ್ಟುಕೊಂಡು ವೇದಾಭ್ಯಾಸವನ್ನು ಮಾಡಬಾರದು.

೬೩. ಮಾಂಸವನ್ನೂ, ಸೂತಕಾದಿ ಅನ್ನವನ್ನೂ ಭುಂಜಿಸಿದ ಮೇಲೆಯೂ ಹಿಮ ಬೀಳುವ ಸಮಯದಲ್ಲಿಯೂ, ಬಾಣ ಬೀಳುವಂತೆ ಮಳೆ ಸುರಿಯುವ ಸಮಯದಲ್ಲಿಯೂ, ಎರಡು ಸಂಧ್ಯಾ ಸಮಯಗಳಲ್ಲಿಯೂ ಅಧ್ಯಯನ ಮಾಡಬಾರದು.

೬೪. ಹಾಗೂ ಅಮಾವಾಸ್ಯೆ, ಚತುರ್ದಶಿ, ಪೂರ್ಣಿಮಾ ಮತ್ತು ಅಷ್ಟಮೀ ತಿಥಿಗಳಲ್ಲಿಯೂ, ಉತ್ಸರ್ಜನ ಉಪಾಕರ್ಮಗಳ ತ್ರಿರಾತ್ರಗಳಲ್ಲಿಯೂ ಅನಧ್ಯಾಯವು ಸ್ಮರಿಸಲ್ಪಟ್ಟಿದೆ.

೬೫. ಮತ್ತು ತಿಸ್ರೋಽಷ್ಟಕಾ ಎಂಬ ತಿಥಿಗಳ ಮೂರು ದಿನಗಳಲ್ಲಿಯೂ ಋತುಗಳ ಅಂತ್ಯದ ರಾತ್ರಿಗಳಲ್ಲಿಯೂ ಅಧ್ಯಯನವು ನಿಷಿದ್ಧವಾಗಿದೆ. ಮಾರ್ಗಶೀರ್ಷ ಪುಷ್ಯ ಮತ್ತು ಮಾಘ ಮಾಸಗಳಲ್ಲಿ ಮೂರು ಅಷ್ಟಕಾತಿಥಿಗಳು ಬರುವುವು.

ತಿಸ್ರೋಽಷ್ಟಕಾಃ ಸಮಾಖ್ಯಾತಾಃ ಕೃಷ್ಣಪಕ್ಷೇ ತು ಸೂರಿಭಿಃ ।
ಶ್ಲೇಷ್ಮಾಂತಕಸ್ಯ ಛಾಯಾಯಾಂ ಶಾಲ್ಮಲೇರ್ಮಧುಕಸ್ಯ ಚ ॥ ೭೬ ॥

ಕದಾಚಿದಪಿ ನಾಧ್ಯೇಯಂ ಕೋವಿದಾರಕಪಿತ್ಥಯೋಃ ।
ಸಮಾನವಿದ್ಯೇ ಚ ಮೃತೇ ತಥಾ ಸಬ್ರಹ್ಮಚಾರಿಣಿ ॥ ೭೭ ॥

ಆಚಾರ್ಯೇ ಸಂಸ್ಥಿತೇ ವಾಪಿ ತ್ರಿರಾತ್ರಂ ಕ್ಷಪಣಂ ಸ್ಮೃತಮ್ ।
ಛಿದ್ರಾಣ್ಯೇತಾನಿ ವಿಪ್ರಾಣಾಂ ಯೇಽನಧ್ಯಾಯಾಃ ಪ್ರಕೀರ್ತಿತಾಃ ॥ ೭೮ ॥

ಹಿಂಸಂತಿ ರಾಕ್ಷಸಾಸ್ತೇಷು ತಸ್ಮಾದೇತಾನ್ ವಿವರ್ಜಯೇತ್ ।
ನೈತ್ಯಕೇ ನಾಸ್ತ್ಯನಧ್ಯಾಯಃ ಸಂಧ್ಯೋಪಾಸನ ಏವ ಚ ॥ ೭೯ ॥

---

೭೬. ವಿದ್ವಾಂಸರಿಂದ ಮಾರ್ಗಶೀರ್ಷ ಮೊದಲಾದ ಮೂರು ಮಾಸಗಳ ಕೃಷ್ಣಪಕ್ಷದ ಅಷ್ಟಮೀ ತಿಥಿಗಳು ತಿಸ್ರೋಽಷ್ಟಕಾ ತಿಥಿ ಎಂದು ಕರೆಯಲ್ಪಟ್ಟಿವೆ. ಶ್ಲೇಷ್ಮಾತಕ, ಶಾಲ್ಮಲೀ ಮತ್ತು ಮಧುಕವೃಕ್ಷಗಳ ಛಾಯೆಯಲ್ಲಿ ಯಾವಾಗಲೂ ಅಧ್ಯಯನ ಮಾಡಬಾರದು.

೭೭. ಮತ್ತು ಕೋವಿದಾರ, ಕಪಿತ್ಥ ಎಂಬ ವೃಕ್ಷ ಛಾಯೆಯಲ್ಲಿ ಯಾವಾಗಲೂ ಅಧ್ಯಯನ ಮಾಡಬಾರದು. ಹಾಗೂ ಸಮಾನ ವಿದ್ಯಾವಂತನೂ ಸಹಪಾಠಿಯೂ ಮರಣಹೊಂದಿದ ಸಮಯದಲ್ಲಿ ಅಧ್ಯಯವನ್ನು ಮಾಡಬಾರದು.

೭೮. ಮತ್ತು ಆಚಾರ್ಯನು ಮೃತನಾದರೆ ಮೂರು ದಿವಸಗಳ ವರೆಗೆ ಅನಧ್ಯಾಯವೆಂದು ಸ್ಮರಿಸಲ್ಪಟ್ಟಿದೆ. ವಿಪ್ರರಿಗೆ ಈ ಅನಧ್ಯಾಯಗಳು ಛಿದ್ರಪ್ರಾಯವೆಂದು ಕೀರ್ತಿಸಲ್ಪಟ್ಟಿವೆ.

೭೯. ಈ ಅನಧ್ಯಾಯಗಳಲ್ಲಿ ರಾಕ್ಷಸರು ಹಿಂಸೆಮಾಡುತ್ತಾರೆ. ಆದುದರಿಂದ ಈ ಅನಧ್ಯಾಯಗಳನ್ನು ಬಿಡಬೇಕು. ನಿತ್ಯ ಕರ್ಮಾನುಷ್ಠಾನದಲ್ಲಿಯೂ, ಸಂಧ್ಯಾವಂ ನದಲ್ಲಿಯೂ ಅನಧ್ಯಾಯವು ಇರುವುದಿಲ್ಲ.

ಉಪಾಕರ್ಮಣಿ ಕರ್ಮಾಂತೇ ಹೋಮಮಂತ್ರೇಷು ಚೈವ ಹಿ ।
ಏಕಾಮೃಚಮಥೈಕಂ ವಾ ಯಜುಃ ಸಾಮಾಥವಾ ಪುನಃ ॥ ೮೦ ॥

ಅಷ್ಟಕಾದ್ಯಾಸ್ವಧೀಯೀತ ಮಾರುತೇ ಚಾತಿವಾಯತಿ ।
ಅನಧ್ಯಾಯಸ್ತು ನಾಂಗೇಷು ನೇತಿಹಾಸಪುರಾಣಯೋಃ ॥ ೮೧ ॥

ನ ಧರ್ಮಶಾಸ್ತ್ರೇಷ್ವನ್ಯೇಷು ಪರ್ವಾಣ್ಯೇತಾನಿ ವರ್ಜಯೇತ್ ।
ಏಷ ಧರ್ಮಃ ಸಮಾಸೇನ ಕೀರ್ತಿತೋ ಬ್ರಹ್ಮಚಾರಿಣಾಮ್ ॥ ೮೨ ॥

ಬ್ರಹ್ಮಣಾಭಿಹಿತಃ ಪೂರ್ವಮೃಷೀಣಾಂ ಭಾವಿತಾತ್ಮನಾಮ್ ।
ಯೋಽನ್ಯತ್ರ ಕುರುತೇ ಯತ್ನಮನಧೀತ್ಯ ಶ್ರುತಿಂ ದ್ವಿಜಾಃ ॥ ೮೩ ॥

---

೮೦. ಉಪಾಕರ್ಮ, ಕರ್ಮಾಂಗಹೋಮ ಮಂತ್ರಗಳಲ್ಲಿ ಅನಧ್ಯಾಯ ದೋಷವು ಇರುವುದಿಲ್ಲ. ಒಂದು ಋಙ್ಮಂತ್ರ ಒಂದು ಯಜುರ್ಮಂತ್ರ ಅಥವ ಒಂದು ಸಾಮವನ್ನು ಅನಧ್ಯಾಯದಲ್ಲಿ ಜಪಿಸಬೇಕು.

೮೧. ಅಷ್ಟಕಾದಿ ತಿಥಿಗಳಲ್ಲಿಯೂ, ವಿಶೇಷವಾಗಿ ಗಾಳಿ ಬೀಸುವ ಸಮಯ ದಲ್ಲಿಯೂ ಒಂದು ಮಂತ್ರವನ್ನು ಮಾತ್ರ ಪಠಿಸಬೇಕು. ವೇದಾಂಗಗಳಲ್ಲಿಯೂ, ಇತಿಹಾಸ ಪುರಾಣಗಳಲ್ಲಿಯೂ ಅನಧ್ಯಾಯವು ಇರುವುದಿಲ್ಲ.

೮೨. ಮಿಕ್ಕ ಧರ್ಮಶಾಸ್ತ್ರ ಮುಂತಾದುವುಗಳಲ್ಲಿಯೂ, ಅನಧ್ಯಾಯವು ಇರುವುದಿಲ್ಲ. ಆದರೆ ಪರ್ವಕಾಲಗಳಲ್ಲಿ ಇವೆಲ್ಲವನ್ನೂ ವರ್ಜಿಸಬೇಕು. ಹೀಗೆ ಬ್ರಹ್ಮಚಾರಿಗಳ ಧರ್ಮವು ಸಂಗ್ರಹವಾಗಿ ಕೀರ್ತಿಸಲ್ಪಟ್ಟಿದೆ.

೮೩. ಈ ವಿಧಿಯು 'ಪವಿತ್ರವಾದ ಅಂತಃಕರಣವುಳ್ಳ ಮಹರ್ಷಿಗಳಿಗೆ ಪೂರ್ವಕಾಲದಲ್ಲಿ ಬ್ರಹ್ಮದೇವನಿಂದ ಹೇಳಲ್ಪಟ್ಟಿದೆ. ದ್ವಿಜರೇ! ವೇದವನ್ನು ಅಭ್ಯಾಸ ಮಾಡದೆ ಬೇರೊಂದರಲ್ಲಿ ಪ್ರಯತ್ನ ತೋರುವುದು ಅಯುಕ್ತವು.

ಸ ಸಂಮೂಢೋ ನ ಸಂಭಾಷ್ಯೋ ವೇದಬಾಹ್ಯೋ ದ್ವಿಜಾತಿಭಿಃ ।
ನ ವೇದಪಾಠಮಾತ್ರೇಣ ಸಂತುಷ್ಟೋ ವೈ ದ್ವಿಜೋತ್ತಮಾಃ ॥ ೮೪ ॥

ಏವಮಾಚಾರಹೀನಸ್ತು ಪಂಕೇ ಗೌರಿವ ಸೀದತಿ ।
ಯೋಽಧೀತ್ಯ ವಿಧಿವದ್ವೇದಂ ವೇದಾರ್ಥಂ ನ ವಿಚಾರಯೇತ್ ॥ ೮೫ ॥

ಸ ಚಾಂಧಃ ಶೂದ್ರಕಲ್ಪಸ್ತು ಪದಾರ್ಥಂ ನ ಪ್ರಪದ್ಯತೇ ।
ಯದಿ ಚಾತ್ಯಂತಿಕಂ ವಾಸಂ ಕರ್ತುಮಿಚ್ಛತಿ ವೈ ಗುರೌ ॥ ೮೬ ॥

ಯುಕ್ತಃ ಪರಿಚರೇದೇನಮಾಶರೀರಾಭಿಘಾತನಾತ್ ।
ಗತ್ವಾ ವನಂ ವಾ ವಿಧಿವಜ್ಜುಹುಯಾಜ್ಜಾತವೇದಸಮ್ ॥ ೮೭ ॥

---

೮೪. ದ್ವಿಜರಿಂದ ವೇದಬಾಹ್ಯನಾದ ಮನುಷ್ಯನು ಮೂಢನಾದುದರಿಂದ ಸಂಭಾಷಣೆಗೆ ಅರ್ಹನಲ್ಲ. ದ್ವಿಜಶ್ರೇಷ್ಠರೇ ! ವೇದದ ಪಾಠಮಾತ್ರದಿಂದ ವಿಪ್ರನು ಸಂತುಷ್ಟನಾಗಬಾರದು.

೮೫. ಹೀಗೆ ಆಚಾರಹೀನನಾದ ಮಾನವನು ಕೆಸರಿನಲ್ಲಿ ಬಿದ್ದ ಹಸುವಿನಂತೆ ನಾಶಹೊಂದುತ್ತಾನೆ. ವಿಧಿವತ್ತಾಗಿ ವೇದವನ್ನು ಅಧ್ಯಯನ ಮಾಡಿದವನು, ವೇದಾರ್ಥವನ್ನು ವಿಚಾರಮಾಡಬೇಕು.

೮೬. ವೇದಾರ್ಥವಿಚಾರವಿಲ್ಲದವನು ಶೂದ್ರನಿಗೆ ಸಮಾನನೂ, ಅಂಧನೂ ಆಗಿ ಪದಾರ್ಥವನ್ನು ತಿಳಿಯಲು ಶಕ್ತನಾಗುವುದಿಲ್ಲ. ಬ್ರಹ್ಮಚಾರಿಯು ಒಂದುವೇಳೆ ಕಡೆಯವರೆಗೂ ಗುರುಕುಲದಲ್ಲಿ ವಾಸಿಸಲು ಇಚ್ಛಿಸಬಹುದು.

೮೭. ಹಾಗಿದ್ದರೆ ದೇಹವು ಬಿದ್ದುಹೋಗುವವರೆಗೂ ಗುರುವನ್ನು ಭಕ್ತಿಯಿಂದ ಸೇವಿಸಬೇಕು. ಅಥವಾ ಅರಣ್ಯಕ್ಕಾದರೂ ಹೋಗಿ ವಿಧಿವತ್ತಾಗಿ ಅಗ್ನಿಯಲ್ಲಿ ಹೋಮ ಮಾಡುತ್ತ ಇರಬೇಕು.

ಅಭ್ಯಸೇತ್ ಸ ತದಾ ನಿತ್ಯಂ ಬ್ರಹ್ಮನಿಷ್ಠಃ ಸಮಾಹಿತಃ ।
ಸಾವಿತ್ರೀಂ ಶತರುದ್ರೀಯಂ ವೇದಾಂಗಾನಿ ವಿಶೇಷತಃ ।
ಅಭ್ಯಸೇತ್ ಸತತಂ ಯುಕ್ತೋ ಭಸ್ಮಸ್ನಾನಪರಾಯಣಃ ॥ ೮೮ ॥

ಏತದ್ವಿಧಾನಂ ಪರಮಂ ಪುರಾಣಂ
ವೇದಾಗಮೇ ಸಮ್ಯಗಿಹೇರಿತಂ ಚ ।
ಪುರಾ ಮಹರ್ಷಿಪ್ರವರಾನುಪೃಷ್ಟಃ
ಸ್ವಾಯಂಭುವೋ ಯನ್ಮನುರಾಹ ದೇವಃ ॥ ೮೯ ॥

ಏವಮೀಶ್ವರಸಮರ್ಪಿತಾಂತರೋ
ಯೋಽನುತಿಷ್ಠತಿ ವಿಧಿಂ ವಿಧಾನವಿತ್ ।
ಮೋಹಜಾಲಮಪಹಾಯ ಸೋಽಮೃತಂ
ಯಾತಿ ತತ್ಪದಮನಾಮಯಂ ಶಿವಮ್ ॥ ೯೦ ॥

ಇತಿ ಶ್ರೀ ಕೂರ್ಮಪುರಾಣೇ ಸಪ್ತಷಷ್ಟಿತಮೋಽಧ್ಯಾಯಃ.

---

೮೮. ಮತ್ತು ಬ್ರಹ್ಮನಿಷ್ಠನೂ, ಚಿತ್ತಸಮಾಧಾನವುಳ್ಳವನೂ, ಭಸ್ಮಸ್ನಾನದಲ್ಲಿ ಆಸಕ್ತನೂ ಮತ್ತು ಯೋಗಿಯೂ, ಆಗಿ ಯಾವಾಗಲೂ ಗಾಯತ್ರೀ, ಶತರುದ್ರೀಯ, ವೇದಾಂಗಗಳನ್ನು ಅಭ್ಯಾಸಮಾಡುತ್ತಿರಬೇಕು.

೮೯. ಸರ್ವೋತ್ತಮವೂ, ಪವಿತ್ರವೂ ಆದ ಈ ವೇದಾಧ್ಯಯನ ವಿಧಿಯು ಇಲ್ಲಿ ಚೆನ್ನಾಗಿ ಹೇಳಲ್ಪಟ್ಟಿದೆ. ಹಿಂದೆ ಶ್ರೇಷ್ಠರಾದ ಮಹರ್ಷಿಗಳಿಂದ ಪ್ರಶ್ನಿಸಲ್ಪಟ್ಟ ಸ್ವಾಯಂಭುವ ಪ್ರಜಾಪತಿಯು ಇದನ್ನು ವಿವರಿಸಿರುವನು.

೯೦. ಹೀಗೆ ಈಶ್ವರನಲ್ಲಿ ಇರಿಸಲ್ಪಟ್ಟ ಅಂತರಂಗವುಳ್ಳವನಾಗಿ ವಿಧಾನವನ್ನರಿತ ಯಾವ ಬ್ರಹ್ಮಚಾರಿಯು ಈ ವಿಧಾನವನ್ನು ಆಚರಿಸುವನೋ ; ಅವನು ಸಮಸ್ತ ಮೋಹಜಾಲವನ್ನು ಕಳೆದುಕೊಂಡು ನಿರುಪದ್ರವವೂ, ಮಂಗಳಕರವೂ, ಮರಣ ರಹಿತವೂ ಆದ ಪರಮಪದವನ್ನು ಹೊಂದುತ್ತಾನೆ.

( ಕೂರ್ಮಪುರಾಣದಲ್ಲಿ ಅರವತ್ತೇಳನೆಯ ಅಧ್ಯಾಯವು ಮುಗಿದುದು. )

ಶ್ರೀಃ

# ಕೂರ್ಮಪುರಾಣಂ

---

## ಅಷ್ಟಷಷ್ಟಿತಮೋಽಧ್ಯಾಯಃ.

**ವ್ಯಾಸ ಉವಾಚ :—**

**ವೇದಂ ವೇದೌ ತಥಾ ವೇದಾನ್ ವಿದ್ಯಾದ್ವಾ ಚತುರೋ ದ್ವಿಜಃ ।**
**ಅಧೀತ್ಯ ಚಾಭಿಗಮ್ಯಾರ್ಥಂ ತತಃ ಸ್ನಾಯಾದ್ದ್ವಿಜೋತ್ತಮಾಃ ॥ ೧ ॥**

**ಗುರವೇ ತು ಧನಂ ದತ್ವಾ ಸ್ನಾಯೀತ ತದನುಜ್ಞಯಾ ।**
**ಚೀರ್ಣವ್ರತೋಽಥ ಯುಕ್ತಾತ್ಮಾ ಸ ಶಕ್ತಃ ಸ್ನಾತುಮರ್ಹತಿ ॥ ೨ ॥**

---

## ಅರವತ್ತೆಂಟನೆಯ ಅಧ್ಯಾಯವು

೧. ವ್ಯಾಸಮುನಿಯು ಹೀಗೆಂದು ಹೇಳಿದನು :—ದ್ವಿಜರೇ ! ಗುರುಕುಲದಲ್ಲಿ ಒಂದು, ಎರಡು, ಮೂರು ಅಥವ ನಾಲ್ಕು ವೇದಗಳನ್ನು ಕಲಿತು ಆ ವೇದಗಳ ಅರ್ಥವನ್ನು ವಿಚಾರಮಾಡಿ ತರುವಾಯ ಗುರುಕುಲದಿಂದ ಸಮಾವರ್ತನವನ್ನು ಹೊಂದಬೇಕು.

೨. ಮೊದಲು ಆಚರಿಸಿದ ವ್ರತಗಳುಳ್ಳವನೂ, ಸ್ಥಿರವಾದ ಅಂತಃಕರಣವುಳ್ಳವನೂ, ಶಕ್ತನೂ ಆದ ಮಾನವನು ಗುರುವಿಗೆ ಗುರುದಕ್ಷಿಣೆಯನ್ನು ಅರ್ಪಿಸಿ ಅವನ ಅನುಜ್ಞೆಯಿಂದ ಸಮಾವರ್ತನಕ್ಕೆ ಅರ್ಹನಾಗುವನು.

ವೈಣವೀಂ ಧಾರಯೇದ್ಯಷ್ಟಿಮಂತರ್ವಾಸಂ ತಥೋತ್ತರಮ್ ।
ಯಜ್ಞೋಪವೀತದ್ವಿತಯಂ ಸೋದಕಂ ಚ ಕಮಂಡಲುಮ್ ॥ ೩ ॥

ಛತ್ರಂ ಚೋಷ್ಣೀಷಮಮಲಂ ಪಾದುಕೇ ಚಾಪ್ಯುಪಾನಹೌ ।
ರೌಕ್ಮೇ ಚ ಕುಂಡಲೇ ವೇದಂ ವ್ಯಪ್ತಕೇಶನಖಃ ಶುಚಿಃ ॥ ೪ ॥

ಸ್ವಾಧ್ಯಾಯೇ ನಿತ್ಯಯುಕ್ತಃ ಸ್ಯಾದ್ಬಹಿರ್ಮಾಲ್ಯಂ ನ ಧಾರಯೇತ್ ।
ಅನ್ಯತ್ರ ಕಾಂಚನಾದ್ವಿಪ್ರೋ ನ ರಕ್ತಾಂ ಬಿಭೃಯಾತ್ ಸ್ರಜಮ್ ॥ ೫ ॥

ಶುಕ್ಲಾಂಬರಧರೋ ನಿತ್ಯಂ ಸುಗಂಧಃ ಪ್ರಿಯದರ್ಶನಃ ।
ನ ಜೀರ್ಣಮಲವದ್ವಾಸಾ ಭವೇದ್ವೈ ವೈಭವೇ ಸತಿ ॥ ೬ ॥

---

೩. ಸಮಾವರ್ತನಹೊಂದಿದ ವಿಪ್ರನು ವೇಣುದಂಡ, ಅಂತರ್ವಾಸ, ಉತ್ತರೀಯವಸ್ತ್ರ, ಎರಡು ಯಜ್ಞೋಪವಿತಗಳು ಮತ್ತು ಜಲದಿಂದ ಪೂರ್ಣವಾದ ಕಮಂಡಲು ಇವುಗಳನ್ನು ಧರಿಸಬೇಕು.

೪. ಮತ್ತು ಕೇಶ-ನಖಗಳನ್ನು ತೆಗೆಸಿದವನೂ, ಪವಿತ್ರನೂ ಆಗಿ ಛತ್ರಿ, ನಿರ್ಮಲವಾದ ರುಮಾಲು, ಪಾದುಕೆ, ಅಥವಾ ಪಾದರಕ್ಷೆ, ಸುವರ್ಣ ಕುಂಡಲ ಮತ್ತು ದರ್ಭಾಸನಗಳನ್ನು ಸಮಾವರ್ತನ ಸಮಯದಲ್ಲಿ ಧರಿಸಬೇಕು.

೫. ಅಂತಹ ಸ್ನಾತಕನು ಯಾವಾಗಲೂ ಸ್ವಾಧ್ಯಾಯ ಜಪದಲ್ಲಿ ಆದರವುಳ್ಳವನಾಗಿರಬೇಕು. ಹೊರಭಾಗದಲ್ಲಿ ಪುಷ್ಪ ಮಾಲ್ಯವನ್ನು ಧರಿಸಬಾರದು. ಸುವರ್ಣವನ್ನು ಬಿಟ್ಟು, ಬೇರೊಂದು ಕೆಂಪು ಬಣ್ಣದ ಮಾಲೆಯನ್ನು ಧರಿಸಿರಬಾರದು.

೬. ಹಾಗೂ ಯಾವಾಗಲೂ ಶುಭ್ರವಾದ ವಸ್ತ್ರ- ಸುಗಂಧಗಳನ್ನು ಧರಿಸಿ ರಮ್ಯವಾದ ದರ್ಶನವುಳ್ಳವನಾಗಿರಬೇಕು. ವೈಭವವು ಸಮೃದ್ಧಿಯಾಗಿದ್ದರೆ ಜೀರ್ಣವೂ, ಕೊಳೆಯೂ ಆದ ವಸ್ತ್ರವನ್ನು ಧರಿಸಬಾರದು.

ನ ರಕ್ತಮುಲ್ಬಣಂ ಚಾನ್ಯಧೃತಂ ವಾಸೋ ನ ಕುಂಡಿಕಾಮ್ ।
ನೋಪಾನಹೌ ಸ್ರಜಂ ವಾಥ ಪಾದುಕೇ ನ ಪ್ರಯೋಜಯೇತ॥

ಉಪವೀತಕರಾನ್ ದರ್ಭಾನ್ ತಥಾ ಕೃಷ್ಣಾಜಿನಾನಿ ಚ ।
ನಾಪಸವ್ಯಂ ಪರೀದಧ್ಯಾದ್ವಾಸೋ ನ ವಿಕೃತಂ ಚ ಯತ್ ॥ ೮ ॥

ಆಸರೇದ್ವಿಧಿವದ್ದಾರಾನ್ ಸದೃಶಾನಾತ್ಮನಃ ಶುಭಾನ್ ।
ರೂಪಲಕ್ಷಣಸಂಯುಕ್ತಾನ್ ಯೋನಿದೋಷವಿವರ್ಜಿತಾನ್ ॥ ೯ ॥

ಅಮಾತೃಗೋತ್ರಪ್ರಭವಾಮಸಮಾನರ್ಷಿಗೋತ್ರಜಾಮ್ ।
ಆಹರೇದ್ಬ್ರಾಹ್ಮಣೋ ಭಾರ್ಯಾಂ ಶೀಲಶೌಚಸಮನ್ವಿತಾಮ್ ॥ ೧೦ ॥

---

೭. ಹಾಗೂ ಸ್ನಾತಕನು ಪರರು ಉಪಯೋಗಿಸಿದ ಪಾದುಕೆ, ಹಾರ, ಪಾದರಕ್ಷೆ, ಕಮಂಡಲುಗಳನ್ನೂ ಕೆಂಪು, ಉಲ್ಬಣವರ್ಣವಾಗಿರುವ, ಪರರಿಂದ ಉಪಯುಕ್ತವೂ ಆದ ವಸ್ತ್ರವನ್ನು ಉಪಯೋಗಿಸಬಾರದು.

೮. ಉಪವೀತವನ್ನೂ, ದರ್ಭೆಗಳನ್ನೂ ಕೃಷ್ಣಾಜಿನವನ್ನೂ ಯಾವಾಗಲೂ ಧರಿಸಬೇಕು. ಮತ್ತು ವಿಕಾರವಾದ ಅಥವಾ ಅಪಸವ್ಯರೂಪವಾದ ವಸ್ತ್ರವನ್ನು ಧರಿಸಬಾರದು.

೯. ತರುವಾಯ ತನಗೆ ಅನುರೂಪಳೂ, ಮಂಗಳಕರಳೂ, ರೂಪ-ಲಕ್ಷಣಗಳಿಂದ ಕೂಡಿದವಳೂ ಮತ್ತು ವಂಶ ದೋಷಗಳಿಂದ ರಹಿತಳೂ ಆದ ಕನ್ಯೆಯನ್ನು ವಿಧಿವತ್ತಾಗಿ ತಂದು ವಿವಾಹಮಾಡಬೇಕು.

೧೦. ಬ್ರಾಹ್ಮಣನು ಮಾತೃ ಗೋತ್ರದಲ್ಲಿ ಜನಿಸದವಳೂ, ಸಮಾನ ಋಷಿ ಗೋತ್ರದಲ್ಲಿ ಜನಿಸದವಳೂ ಮತ್ತು ಶೀಲ-ಶೌಚಗಳಿಂದ ಕೂಡಿದವಳೂ ಆದ ಕನ್ಯೆಯನ್ನು ಭಾರ್ಯೆಯನ್ನಾಗಿ ತರಬೇಕು.

ಋತುಕಾಲಾಭಿಗಾಮೀ ಸ್ಯಾದ್ಯಾವತ್ಪುತ್ರೋಽಭಿಜಾಯತೇ ।
ವರ್ಜಯೇತ್ ಪ್ರತಿಷಿದ್ಧಾನಿ ದಿನಾನಿ ತು ಪ್ರಯತ್ನತಃ ॥ ೧೧ ॥

ಷಷ್ಠ್ಯಷ್ಟಮೀಂ ಪಂಚದಶೀಂ ದ್ವಾದಶೀಂ ಚ ಚತುರ್ದಶೀಮ್ ।
ಬ್ರಹ್ಮಚಾರೀ ಭವೇನ್ನಿತ್ಯಂ ಬ್ರಾಹ್ಮಣಃ ಸಂಯತೇಂದ್ರಿಯಃ ॥ ೧೨ ॥

ಆದಧೀತಾವಸಥ್ಯಾಗ್ನಿಂ ಜುಹುಯಾಜ್ಜಾತವೇದಸಮ್ ।
ವ್ರತಾನಿ ಸ್ನಾತಕೋ ನಿತ್ಯಂ ಪಾವನಾನಿ ಚ ಪಾಲಯೇತ್ ॥ ೧೩ ॥

ವೇದೋದಿತಂ ಸ್ವಕಂ ಕರ್ಮ ನಿತ್ಯಂ ಕುರ್ಯಾದತಂದ್ರಿತಃ ।
ಅಕುರ್ವಾಣಃ ಪತತ್ಯಾಶು ನರಕಾನ್ ಯಾತಿ ಭೀಷಣಾನ್ ॥ ೧೪ ॥

ಅಭ್ಯಸೇತ್ ಪ್ರಯತೋ ವೇದಂ ಮಹಾಯಜ್ಞಾಂಶ್ಚ ಭಾವಯೇತ್ ।
ಕುರ್ಯಾದ್ಗೃಹ್ಯಾಣಿ ಕರ್ಮಾಣಿ ಸಂಧ್ಯೋಪಾಸನಮೇವ ಚ ॥ ೧೫ ॥

---

೧೧. ಅಂತಹ ಗೃಹಸ್ಥನು ಪುತ್ರ ಸಂತತಿಯು ಹುಟ್ಟುವವರೆಗೆ ಋತುಕಾಲದಲ್ಲಿ ಭಾರ್ಯೆಯನ್ನು ಸಂಗಮಾಡಬೇಕು. ಭಾರ್ಯಾಸಂಗಕ್ಕೆ ನಿಷಿದ್ಧವಾದ ದಿನಗಳನ್ನು ಪ್ರಯತ್ನಪೂರ್ವಕವಾಗಿ ವರ್ಜಿಸಬೇಕು.

೧೨. ಬ್ರಾಹ್ಮಣನು ಷಷ್ಠಿ, ಅಷ್ಟಮಿ, ಪೂರ್ಣಿಮಾ, ದ್ವಾದಶಿ, ಚತುರ್ದಶಿ ತಿಥಿಗಳಲ್ಲಿ ಜಿತೇಂದ್ರಿಯನಾಗಿ ಬ್ರಹ್ಮಚರ್ಯವ್ರತವುಳ್ಳವನಾಗಿ ಇರಬೇಕು.

೧೩. ಸ್ನಾತಕನು ಆವಸಥ್ಯ ಎಂಬ ಅಗ್ನಿಯನ್ನು ಆಧಾನಮಾಡಿ ಆ ಅಗ್ನಿಯಲ್ಲಿ ಹೋಮವನ್ನು ಮಾಡಬೇಕು. ಮತ್ತು ಪಾವನವಾದ ವ್ರತಗಳನ್ನು ಯಾವಾಗಲೂ ಆಚರಿಸಬೇಕು.

೧೪. ಮತ್ತು ಆಲಸ್ಯವಿಲ್ಲದೆ ವೇದವಿಹಿತವಾದ ತನ್ನ ನಿತ್ಯಕರ್ಮವನ್ನು ಯಾವಾಗಲೂ ಮಾಡಬೇಕು. ನಿತ್ಯಕರ್ಮವನ್ನು ಆಚರಿಸದವನು ಘೋರವಾದ ನರಕಯಾತನೆಯನ್ನು ಅನುಭವಿಸುತ್ತಾನೆ.

೧೫. ಮತ್ತು ಪವಿತ್ರನಾಗಿ ವೇದವನ್ನು ಪಠಿಸಬೇಕು. ಮಹಾಯಜ್ಞಗಳನ್ನು ಆಚರಿಸಬೇಕು. ಗೃಹ್ಯತಂತ್ರಗಳಲ್ಲಿ ಹೇಳಿದ ಕರ್ಮಗಳನ್ನು ನೆರವೇರಿಸಬೇಕು. ಹಾಗೂ ಸಂಧ್ಯಾವಂದನವನ್ನು ಮಾಡಬೇಕು.

ಸಖ್ಯಂ ಸಮಾಧಿಕೈಃ ಕುರ್ಯಾದರ್ಚಯೇದೀಶ್ವರಂ ಸದಾ ।
ದೈವತಾನ್ಯಧಿಗಚ್ಛೇತ ಕುರ್ಯಾದ್ಭಾರ್ಯಾವಿಭೂಷಣಮ್ ॥ ೧೬ ॥

ನ ಧರ್ಮಂ ಖ್ಯಾಪಯೇದ್ವಿದ್ವಾನ್ ನ ಪಾಪಂ ಗೂಹಯೇದಪಿ ।
ಕುರ್ವೀತಾತ್ಮಹಿತಂ ನಿತ್ಯಂ ಸರ್ವಭೂತಾನುಕಂಪನಮ್ ॥ ೧೭ ॥

ವಯಸಃ ಕರ್ಮಣೋಽರ್ಥಸ್ಯ ಶ್ರುತಸ್ಯಾಭಿಜನಸ್ಯ ಚ ।
ವೇದವಾಗ್ಬುದ್ಧಿಸಾಹಸ್ಯಮಾಚರೇದ್ವಿಹರೇತ್ ಸದಾ ॥ ೧೮ ॥

ಶ್ರುತಿಸ್ಮೃತ್ಯುದಿತಃ ಸಮ್ಯಕ್ ಸಾಧುಭಿರ್ಯಶ್ಚ ಸೇವಿತಃ ।
ತಮಾಚಾರಂ ನಿಷೇವೇತ ನೇಹೇತಾನ್ಯತ್ರ ಕರ್ಹಿಚಿತ್ ॥ ೧೯ ॥

---

೧೬. ಮತ್ತು ತನಗೆ ಸಮಾನರೂ, ಅಧಿಕರೂ ಆದವರ ಸಂಗಡ ಸ್ನೇಹವನ್ನು ಮಾಡಬೇಕು. ಯಾವಾಗಲೂ ಈಶ್ವರನನ್ನು ಅರ್ಚಿಸಬೇಕು. ಮತ್ತು ದೇವತೆಗಳನ್ನು ನಂಬಿ ಪೂಜಿಸಬೇಕು. ಮತ್ತು ಪತ್ನಿಯನ್ನು ಭೂಷಣಾದಿಗಳಿಂದ ಸಂತೋಷ ಪಡಿಸಬೇಕು.

೧೭. ಜ್ಞಾನಿಯು ತಾನು ಮಾಡಿದ ಧರ್ಮವನ್ನು ಪ್ರಖ್ಯಾತಿಗೊಳಿಸಬಾರದು. ಹಾಗು ಪಾಪವನ್ನು ಮರೆಮಾಚಬಾರದು. ಯಾವಾಗಲೂ ಸರ್ವ ಪ್ರಾಣಿಗಳಲ್ಲಿ ದಯೆತೋರುವ ಆತ್ಮಹಿತ ಸಾಧನವಾದ ಕರ್ಮವನ್ನು ಮಾಡಬೇಕು.

೧೮. ವಯಸ್ಸು, ಉದ್ಯೋಗ, ಸಂಪತ್ತು, ವಿದ್ಯೆ, ವಂಶ, ವೇದ, ವಾಕ್, ಬುದ್ಧಿ-ಇವುಗಳಿಗೆ ಅನುಗುಣವಾಗಿ ಯಾವಾಗಲೂ ಆಚಾರ ವಿಹಾರಗಳನ್ನು ನಡೆಸುತ್ತಿರಬೇಕು.

೧೯ ಶ್ರುತಿಸ್ಮೃತಿಗಳಿಂದ, ವಿಧಿಸಲ್ಪಟ್ಟಿರುವ ಸಾಧುಗಳಿಂದ ಚೆನ್ನಾಗಿ ಸೇವಿಸಲ್ಪಟ್ಟಿರುವ ಆಚಾರವನ್ನು ಪ್ರತಿಯೊಂದು ವ್ಯಕ್ತಿಯೂ ಆಚರಿಸಬೇಕು. ಬೇರೊಂದು ಆಚಾರವನ್ನು ಇಚ್ಛಿಸಬಾರದು.

ಯೇನಾಸ್ಯ ಪಿತರೋ ಯಾತಾ ಯೇನ ಯಾತಾಃ ಪಿತಾಮಹಾಃ ।
ತೇನ ಯಾಯಾತ್ ಸತಾಂ ಮಾರ್ಗಂ ತೇನ ಗಚ್ಛನ್ ತರಿಷ್ಯತಿ ॥ ೨೦ ॥

ನಿತ್ಯಂ ಸ್ವಾಧ್ಯಾಯಶೀಲಃ ಸ್ಯಾತ್ ನಿತ್ಯಂ ಯಜ್ಞೋಪವೀತವಾನ್ ।
ಸತ್ಯವಾದೀ ಜಿತಕ್ರೋಧೋ ಬ್ರಹ್ಮಭೂಯಾಯ ಕಲ್ಪತೇ ॥ ೨೧ ॥

ಸಂಧ್ಯಾಸ್ನಾನಪರೋ ನಿತ್ಯಂ ಬ್ರಹ್ಮಯಜ್ಞಪರಾಯಣಃ ।
ಅನಸೂಯೋ ಮೃದುರ್ದಾಂತೋ ಗೃಹಸ್ಥಃ ಪ್ರೇತ್ಯ ವರ್ಧತೇ ॥ ೨೨ ॥

ವೀತರಾಗಭಯಕ್ರೋಧೋ ಲೋಭಮೋಹವಿವರ್ಜಿತಃ ।
ಸಾವಿತ್ರೀಜಾಪನಿರತಃ ಶ್ರಾದ್ಧಕೃನ್ಮುಚ್ಯತೇ ಗೃಹೀ ॥ ೨೩ ॥

---

೨೦. ಮತ್ತು ತನ್ನ ಪಿತೃಗಳು ಯಾವ ಮಾರ್ಗದಲ್ಲಿ ನಡೆದರೋ, ಪಿತಾಮಹರು ಯಾವ ಮಾರ್ಗದಲ್ಲಿ ನಡೆದರೋ, ಆ ಮಾರ್ಗದಲ್ಲಿ ಸಾಧು ಜನರ ಆಚಾರವನ್ನು ಸಂಪಾದಿಸಬೇಕು. ಆ ಮಾರ್ಗದಿಂದ ನಡೆದವನು ಅನರ್ಥದಿಂದ ಪಾರಾಗುವನು.

೨೧. ಯಾವಾಗಲೂ ವೇದಾಧ್ಯಯನ ಶೀಲವುಳ್ಳವನೂ ಯಜ್ಞೋಪವೀತಧಾರಿಯೂ ಸತ್ಯವನ್ನು ನುಡಿಯುವವನೂ ಮತ್ತು ಕ್ರೋಧವನ್ನು ಜಯಿಸಿದವನೂ ಆಗಬೇಕು. ಅಂತಹವನು ಬ್ರಹ್ಮಭಾವವನ್ನು ಹೊಂದಲು ಅರ್ಹನಾಗುತ್ತಾನೆ.

೨೨. ಸಂಧ್ಯಾವಂದನ-ಸ್ನಾನ-ಬ್ರಹ್ಮಯಜ್ಞಾನುಷ್ಠಾನಗಳಲ್ಲಿ ಯಾವಾಗಲೂ ಆಸಕ್ತನಾಗಿರುವವನೂ ಅಸೂಯಾರಹಿತನೂ ಮೃದುವಾದ ಶೀಲವುಳ್ಳವನೂ ಜಿತೇಂದ್ರಿಯನೂ ಆದ ಗೃಹಸ್ಥನು ಮರಣಾನಂತರದಲ್ಲಿ ಸದ್ಗತಿಯನ್ನು ಹೊಂದುತ್ತಾನೆ.

೨೩. ಮತ್ತು ರಾಗ ಭಯ ಕ್ರೋಧ ಲೋಭ ಮೋಹ ಮುಂತಾದ ಮಾನಸ ವೈರಿಗಳಿಂದ ವರ್ಜಿತನೂ ಗಾಯತ್ರೀ ಜಪದಲ್ಲಿ ತತ್ಪರನೂ ಮತ್ತು ಶ್ರಾದ್ಧಕರ್ಮವನ್ನು ಆಚರಿಸುವವನೂ ಆದ ಗೃಹಸ್ಥನು ಮುಕ್ತನಾಗುತ್ತಾನೆ.

ಮಾತಾಪಿತ್ರೋರ್ಹಿತೇ ಯುಕ್ತೋ ಗೋಬ್ರಾಹ್ಮಣಹಿತೇ ರತಃ ।
ದಾಂತೋ ಯಜ್ವಾ ದೇವಭಕ್ತೋ ಬ್ರಹ್ಮಲೋಕೇ ಮಹೀಯತೇ॥೧೪॥

ತ್ರಿವರ್ಗಸೇವೀ ಸತತಂ ದೇವತಾನಾಂ ಚ ಪೂಜನಮ್ ।
ಕುರ್ಯಾದಹರಹರ್ನಿತ್ಯಂ ನಮಸ್ಯೇತ್ ಪ್ರಯತಃ ಸುರಾನ್ ॥ ೧೫ ॥

ವಿಭಾಗಶೀಲಃ ಸತತಂ ಕ್ಷಮಾಯುಕ್ತೋ ದಯಾಲುಕಃ ।
ಗೃಹಸ್ಥಸ್ತು ಸಮಾಖ್ಯಾತೋ ನ ಗೃಹೇಣ ಗೃಹೀ ಭವೇತ್ ॥ ೧೬ ॥

ಕ್ಷಮಾ ದಯಾ ಚ ವಿಜ್ಞಾನಂ ಸತ್ಯಂ ಚೈವ ದಮಃ ಶಮಃ ।
ಅಧ್ಯಾತ್ಮನಿರತಜ್ಞಾನಮೇತದ್ಬ್ರಾಹ್ಮಣಲಕ್ಷಣಮ್ ॥ ೧೭ ॥

---

೧೪. ಮಾತಾಪಿತೃಗಳ ಹಿತದಲ್ಲಿ ತತ್ಪರನೂ, ಗೋ ಬ್ರಾಹ್ಮಣರ ಹಿತದಲ್ಲಿ ನಿರತನೂ, ಜಿತೇಂದ್ರಿಯನೂ, ಯಾಗಾನುಷ್ಠಾನ ಶೀಲನೂ ಮತ್ತು ದೈವಭಕ್ತನೂ ಆದ ಮಾನವನು ಬ್ರಹ್ಮಲೋಕದಲ್ಲಿ ಪೂಜ್ಯನಾಗುತ್ತಾನೆ.

೧೫. ಮತ್ತು ಪ್ರತಿದಿನದಲ್ಲಿಯೂ ಧರ್ಮ ಅರ್ಥ ಕಾಮಗಳೆಂಬ ತ್ರಿವರ್ಗವನ್ನು ಸೇವಿಸುತ್ತ ದೇವತೆಗಳ ಅರ್ಚನೆಯನ್ನು ಮಾಡುತ್ತಾ ಪವಿತ್ರನಾಗಿ ದೇವತೆಗಳನ್ನು ಯಾವಾಗಲೂ ನಮಸ್ಕರಿಸಬೇಕು.

೧೬. ದ್ರವ್ಯವನ್ನು ವಿತರಣಮಾಡುವ ಶೀಲವುಳ್ಳವನೂ, ಸಂತತವಾಗಿ ಕ್ಷಮೆಯಿಂದ ಕೂಡಿದವನೂ, ದಯಾಮಯನೂ ಆದ ಮಾನವನು ಗೃಹಸ್ಥನೆಂದು ಹೇಳಲ್ಪಡುವನು. ಪತ್ನೀ ಪಾಣಿಗ್ರಹಣಮಾತ್ರದಿಂದ ಗೃಹಸ್ಥನಾಗುವುದಿಲ್ಲ.

೧೭. ಕ್ಷಮೆ, ದಯೆ, ಶಾಸ್ತ್ರಾರ್ಥಜ್ಞಾನ, ಸತ್ಯ, ಇಂದ್ರಿಯನಿಗ್ರಹ, ಶಾಂತಿ ಅಧ್ಯಾತ್ಮ ಜ್ಞಾನದಲ್ಲಿ ನಿಷ್ಠೆ ಎಂಬ ಗುಣಗಳು ಬ್ರಾಹ್ಮಣನಾಗಿರುವುದಕ್ಕೆ ಲಕ್ಷಣಗಳೆಂದು ಭಾವಿಸಬೇಕು.

ಏತಸ್ಮಾನ್ನ ಪ್ರಮಾದ್ಯೇತ ವಿಶೇಷೇಣ ದ್ವಿಜೋತ್ತಮಃ ।
ಯಥಾಶಕ್ತಿ ಚರೇತ್ ಕರ್ಮ ನಿಂದಿತಾನಿ ವಿವರ್ಜಯೇತ್ ॥ ೨೮ ॥

ವಿಧೂಯ ಮೋಹಕಲಿಲಂ ಲಬ್ಧ್ವಾ ಯೋಗಮನುತ್ತಮಮ್ ।
ಗೃಹಸ್ಥೋ ಮುಚ್ಯತೇ ಬಂಧಾನ್ನಾತ್ರ ಕಾರ್ಯಾ ವಿಚಾರಣಾ ॥ ೨೯ ॥

ವಿಗರ್ಹಾತಿಕ್ರಮಾಕ್ಷೇಪಹಿಂಸಾಬಂಧವಧಾತ್ಮನಾಮ್ ।
ಅನ್ಯಮನ್ಯುಸಮುತ್ಥಾನಾಂ ದೋಷಾಣಾಂ ಮರ್ಷಣಂ ಕ್ಷಮಾ ॥ ೩೦ ॥

ಸ್ವದುಃಖೇಷ್ವಿವ ಕಾರುಣ್ಯಂ ಪರದುಃಖೇಷು ಸೌಹೃದಾತ್ ।
ದಯೇತಿ ಮುನಯಃ ಪ್ರಾಹುಃ ಸಾಕ್ಷಾದ್ಧರ್ಮಸ್ಯ ಸಾಧನಮ್ ॥ ೩೧ ॥

---

೨೮. ದ್ವಿಜೋತ್ತಮನು ವಿಶೇಷವಾಗಿ ಈ ಕರ್ಮಜಾಲಗಳಿಂದ ಪ್ರಮಾದವನ್ನು ಹೊಂದಬಾರದು. ಇವುಗಳನ್ನು ಯಥಾಶಕ್ತಿಯಾಗಿ ಅನುಷ್ಠಾನಮಾಡಬೇಕು ಮತ್ತು ನಿಷಿದ್ಧ ಕರ್ಮಗಳನ್ನು ವರ್ಜಿಸಬೇಕು.

೨೯. ಮೋಹವೆಂಬ ಕಲ್ಮಶವನ್ನು ದೂರಮಾಡಿ ನಿರುಪಮವಾದ ಯೋಗವಿಧಿಯನ್ನು ಅವಲಂಬಿಸಿರುವ ಗೃಹಸ್ಥನು ಬಂಧನದಿಂದ ಮುಕ್ತನಾಗುವನು ಈ ವಿಷಯದಲ್ಲಿ ಸಂಶಯ ಪಡಬಾರದು.

೩೦. ನಿಂದೆ, ಕರ್ತವ್ಯಾತಿಕ್ರಮ, ಆಕ್ಷೇಪ, ಹಿಂಸೆ, ಬಂಧನ ಮತ್ತು ವಧ. ಮುಂತಾದ ಪರರ ಕೋಪಾವೇಶದಿಂದ ನಡೆಯುವ ದೋಷಗಳನ್ನು ಸಹಿಸುವುದು ಕ್ಷಮೆ ಎಂಬ ಉತ್ತಮವಾದ ಗುಣವು.

೩೧. ತನಗೆ ದುಃಖವು ಪ್ರಾಪ್ತವಾದಂತೆ ಸ್ನೇಹಾತಿರೇಕದಿಂದ ಪರರ ದುಃಖಗಳಲ್ಲಿ ಮನಸ್ಸಿನ ದ್ರವತ್ವವೆಂಬ ಕರುಣಾವೃತ್ತಿಯನ್ನು ಸಾಕ್ಷಾತ್ತಾಗಿ ಧರ್ಮಕ್ಕೆ ಸಾಧನವಾದ ದಯೆ ಎಂದು ಮುನಿಗಳು ಹೇಳುವರು.

ಚತುರ್ದಶಾನಾಂ ವಿದ್ಯಾನಾಂ ಧಾರಣಂ ಹಿ ಯಥಾರ್ಥತಃ ।
ವಿಜ್ಞಾನಮಿತಿ ತದ್ವಿದ್ಯಾದ್ಯೇನ ಧರ್ಮೋ ವಿವರ್ಧತೇ ॥ ೩೨ ॥

ಅಧೀತ್ಯ ವಿಧಿವದ್ವೇದಾನರ್ಥಂ ಚೈವೋಪಲಭ್ಯ ತು ।
ಧರ್ಮಕಾರ್ಯಾನ್ನಿವೃತ್ತಶ್ಚೇನ್ನ ತದ್ವಿಜ್ಞಾನಮಿಷ್ಯತೇ ॥ ೩೩ ॥

ಸತ್ಯೇನ ಲೋಕಾನ್ ಜಯತಿ ಸತ್ಯಂ ತತ್ಪರಮಂ ಪದಮ್ ।
ಯಥಾಭೂತಪ್ರವಾದಂ ತು ಸತ್ಯಮಾಹುರ್ಮನೀಷಿಣಃ ॥ ೩೪ ॥

ದಮಃ ಶರೀರೋಪರಮಃ ಶಮಃ ಪ್ರಜ್ಞಾಪ್ರಸಾದಜಃ ।
ಅಧ್ಯಾತ್ಮಮಕ್ಷರಂ ವಿದ್ಯಾದ್ಯತ್ರ ಗತ್ವಾ ನ ಶೋಚತಿ ॥ ೩೫ ॥

---

೩೨. ಹದಿನಾಲ್ಕು ವಿದ್ಯೆಗಳ ಅರ್ಥವನ್ನು ಯಥಾರ್ಥವಾಗಿ ಗ್ರಹಿಸಿ ಧರಿಸುವುದನ್ನು ವಿಜ್ಞಾನವೆಂದು ತಿಳಿಯಬೇಕು. ಅಂತಹ ವಿಜ್ಞಾನದಿಂದ ಧರ್ಮವು ಅಭಿವೃದ್ಧಿಯಾಗುವುದು.

೩೩. ಯಥಾವಿಧಿಯಾಗಿ ವೇದಗಳನ್ನು ಅಭ್ಯಾಸಮಾಡಿ ಆ ವೇದಗಳ ಅರ್ಥವನ್ನು ತಿಳಿದು ಧರ್ಮಕಾರ್ಯದ ಆಚರಣೆಯಿಂದ ಮಾತ್ರ ನಿವೃತ್ತನಾದರೆ ಅದು ವಿಜ್ಞಾನವೆಂದು ಸಮ್ಮತವಲ್ಲ.

೩೪. ಸತ್ಯದಿಂದ ಸಮಸ್ತಲೋಕಗಳನ್ನು ಗೆಲ್ಲುತ್ತಾನೆ. ಸತ್ಯವು ಉನ್ನತವಾದ ಪದವಿಯು. ತಾತ್ವಿಕವಾಗಿರುವ ವಿಷಯವನ್ನು ಹಾಗೆಯೇ ನುಡಿಯುವುದು ಸತ್ಯವೆಂದು ಜ್ಞಾನಿಗಳು ಹೇಳುತ್ತಾರೆ.

೩೫. ಶರೀರದ ಸ್ವೇಚ್ಛಾಪ್ರವೃತ್ತಿಯನ್ನು ತಡೆದು ನಿಗ್ರಹಿಸುವುದು ದಮವು. ಪ್ರಜ್ಞೆಯ ನೈರ್ಮಲ್ಯದಿಂದ ಹುಟ್ಟುವ ವಿಕಾಸವು ಶಮವು. ಶಾಶ್ವತವಾದ ಬ್ರಹ್ಮವಸ್ತುವು ಅಧ್ಯಾತ್ಮವು. ಅಂತಹ ಅಧ್ಯಾತ್ಮವನ್ನು ತಿಳಿದವನು ಶೋಕಿಸುವುದಿಲ್ಲ.

ಯಯಾ ಸ ದೇವೋ ಭಗವಾನ್ ವಿದ್ಯಯಾ ವೇದ್ಯತೇ ಪರಃ ।
ಸಾಕ್ಷಾದ್ದೇವೋ ಮಹಾದೇವಸ್ತಜ್ಞ್ಯಾನಮಿತಿ ಕೀರ್ತಿತಮ್ ॥ ೩೬ ॥

ತನ್ನಿಷ್ಠಸ್ತತ್ಪರೋ ವಿದ್ವಾನ್ ನಿತ್ಯಮಕ್ರೋಧನಃ ಶುಚಿಃ ।
ಮಹಾಯಜ್ಞಪರೋ ವಿದ್ವಾನ್ನ ಭವೇತ್ತದನುತ್ತಮಮ್ ॥ ೩೭ ॥

ಧರ್ಮಸ್ಯಾಯತನಂ ಯತ್ನಾಚ್ಛರೀರಂ ಪ್ರತಿಪಾಲಯೇತ್ ।
ನ ಚ ದೇಹಂ ವಿನಾ ರುದ್ರೋ ವಿದ್ಯತೇ ಪುರುಷೈಃ ಪರಃ ॥ ೩೮ ॥

ನಿತ್ಯಧರ್ಮಾರ್ಥಕಾಮೇಷು ಯುಜ್ಯೇತ ನಿಯತೋ ದ್ವಿಜಃ ।
ನ ಧರ್ಮವರ್ಜಿತಂ ಕಾಮಮರ್ಥಂ ವಾ ಮನಸಾ ಸ್ಮರೇತ್ ॥ ೩೯ ॥

---

೩೬. ಯಾವ ಅಕ್ಷರ ವಿದ್ಯೆಯಿಂದ ಪೂಜ್ಯನೂ ಪರನೂ ಆದ ಮಹಾದೇವನು ಸಾಕ್ಷಾತ್ತಾಗಿ ತಿಳಿಯಲ್ಪಡುವನೋ, ಅಂತಹ ವಿದ್ಯೆಯು ಜ್ಞಾನವೆಂದು ಕೀರ್ತಿಸಲ್ಪಟ್ಟಿದೆ.

೩೭. ಅಂತಹ ಪರಬ್ರಹ್ಮವಸ್ತುವಿನಲ್ಲಿ ನಿಷ್ಠೆಯುಳ್ಳವನೂ ತತ್ಪರನೂ ಯಾವಾಗಲೂ ಕ್ರೋಧಶೀಲವಿಲ್ಲದವನೂ ಪವಿತ್ರನೂ ಮತ್ತು ಮಹಾಯಜ್ಞಗಳ ಅನುಷ್ಠಾನದಲ್ಲಿ ಶ್ರದ್ಧೆಯುಳ್ಳವನೂ ಆದ ಜ್ಞಾನಿಯು ಅಂತಹ ಉತ್ತಮವಾದ ತತ್ತ್ವವನ್ನು ಹೊಂದುತ್ತಾನೆ.

೩೮. ಯಾವಾಗಲೂ ಧರ್ಮಕ್ಕೆ ಆಸ್ಪದವಾದ ಶರೀರವನ್ನು ಯತ್ನಪೂರ್ವಕವಾಗಿ ರಕ್ಷಿಸಬೇಕು. ದೇಹವಿಲ್ಲದೆ ಪುರುಷರಿಂದ ಪರಮಾತ್ಮನಾದ ರುದ್ರಮೂರ್ತಿಯು ತಿಳಿಯಲ್ಪಡುವುದಿಲ್ಲ.

೩೯. ದ್ವಿಜನು ಯಾವಾಗಲೂ ಧರ್ಮ ಅರ್ಥ ಕಾಮಗಳಲ್ಲಿ ತತ್ಪರನಾಗಿರಬೇಕು. ಆದರೆ ಧರ್ಮದಿಂದ ವರ್ಜಿತವಾದ ಕಾಮವನ್ನಾಗಲಿ ಅರ್ಥವನ್ನಾಗಲಿ ಮನಸ್ಸಿನಲ್ಲಿಯೂ ಚಿಂತಿಸಬಾರದು.

ಸೀದನ್ನಪಿ ಹಿ ಧರ್ಮೇಣ ನ ತ್ವಧರ್ಮಂ ಸಮಾಚರೇತ್ ।
ಧರ್ಮೋ ಹಿ ಭಗವಾನ್ ದೇವೋ ಗತಿಃ ಸರ್ವೇಷು ಜಂತುಷು ॥ ೪೦ ॥

ಭೂತಾನಾಂ ಪ್ರಿಯಕಾರೀ ಸ್ಯಾನ್ನ ಪರದ್ರೋಹಕರ್ಮಧೀಃ ।
ನ ವೇದದೇವತಾನಿಂದಾಂ ಕುರ್ಯಾತ್ತೈಶ್ಚ ನ ಸಂವದೇತ್ ॥ ೪೧ ॥

ಯಸ್ತ್ವಿಮಂ ನಿಯತಂ ವಿಪ್ರೋ ಧರ್ಮಾಧ್ಯಾಯಂ ಪಠೇಚ್ಛುಚಿಃ ।
ಅಧ್ಯಾಪಯೇಚ್ಛ್ರಾವಯೇದ್ವಾ ಬ್ರಹ್ಮಲೋಕೇ ಮಹೀಯತೇ ॥ ೪೨ ॥

ಇತಿ ಶ್ರೀ ಕೂರ್ಮಪುರಾಣೇ ಅಷ್ಟಷಷ್ಟಿತಮೋಽಧ್ಯಾಯಃ.

---

೪೦. ಧರ್ಮಾಚರಣೆಯಿಂದ ವಿಷಾದ ಪ್ರಾಪ್ತವಾದರೂ ಅಧರ್ಮವನ್ನು ಮಾತ್ರ ಆಚರಿಸಬಾರದು. ಪೂಜ್ಯವಾದ ಧರ್ಮದೇವತೆಯು ಸರ್ವಪ್ರಾಣಿಗಳಲ್ಲಿಯೂ ಪರಮಗತಿರೂಪವಾಗಿರುವುದು.

೪೧ ಮತ್ತು ಪ್ರಾಣಿಗಳಿಗೆ ಪ್ರಿಯವನ್ನು ಮಾಡುತ್ತಿರಬೇಕು. ಪರರಿಗೆ ದ್ರೋಹಕರವಾದ ಕರ್ಮವನ್ನು ಚಿಂತಿಸಬಾರದು. ವೇದ ಮತ್ತು ದೇವತೆಗಳ ನಿಂದೆಯನ್ನು ಮಾಡಬಾರದು. ಹಾಗೆ ನಿಂದಿಸುವವರ ಸಂಗಡ ಸಂಭಾಷಣೆಯನ್ನು ಮಾಡಬಾರದು.

೪೨. ಯಾವ ವಿಪ್ರನು ಪವಿತ್ರನಾಗಿ ಈ ಧರ್ಮಾಧ್ಯಾಯವನ್ನು ತಪ್ಪದೆ ಪಠನಮಾಡುವನೋ ಅಥವಾ ಮತ್ತೊಬ್ಬರಿಂದ ಅಧ್ಯಯನಮಾಡಿಸುವನೋ ಅಥವಾ ಬೇರೊಬ್ಬರಿಂದ ಶ್ರವಣಮಾಡಿಸುವನೋ ಅವನು ಬ್ರಹ್ಮಲೋಕದಲ್ಲಿ ಪೂಜ್ಯನಾಗುತ್ತಾನೆ.

ಕೂರ್ಮಪುರಾಣದಲ್ಲಿ ಅರವತ್ತೆಂಟನೆಯ ಅಧ್ಯಾಯವು ಸಮಾಪ್ತವು.

---

ಶ್ರೀಃ

# ಕೂರ್ಮಪುರಾಣಂ



## ಏಕೋನಸಪ್ತತಿತಮೋಽಧ್ಯಾಯಃ.

ವ್ಯಾಸ ಉವಾಚ :—

ನ ಹಿಂಸ್ಯಾತ್ ಸರ್ವಭೂತಾನಿ ನಾನೃತಂ ವಾ ವದೇತ್ ಕ್ವಚಿತ್ ।
ನಾಹಿತಂ ನಾಪ್ರಿಯಂ ಬ್ರೂಯಾನ್ನ ಸ್ತೇನಃ ಸ್ಯಾತ್ ಕದಾಚನ ॥ ೧ ॥

ತೃಣಂ ವಾ ಯದಿ ವಾ ಶಾಕಂ ಮೃದಂ ವಾ ಜಲಮೇವ ಚ ।
ಪರಸ್ಯಾಪಹರನ್ ಜಂತುರ್ನರಕಂ ಪ್ರತಿಪದ್ಯತೇ ॥ ೨ ॥

---

## ಅರವತ್ತೊಂಭತ್ತನೆಯ ಅಧ್ಯಾಯವು

೧. ವ್ಯಾಸಮುನಿಯು ಹೀಗೆಂದು ಹೇಳಿದನು:- ಸರ್ವಪ್ರಾಣಿಗಳನ್ನೂ ಹಿಂಸಿಸಬಾರದು. ಅನೃತವನ್ನು ಯಾವಾಗಲೂ ನುಡಿಯಬಾರದು. ಅಹಿತ ಅಪ್ರಿಯಗಳಾದ ವಚನವನ್ನು ಆಡಬಾರದು ಮತ್ತು ಯಾವಾಗಲೂ ಚೋರ ನಾಗಬಾರದು.

೨. ಹುಲ್ಲುಕಡ್ಡಿ-ಕಾಯಿಪಲ್ಯ- ಮೃತ್ತಿಕೆ ಅಥವಾ ಜಲ ಮುಂತಾದ ಪರ ಸ್ವತ್ತನ್ನು ಅಪಹರಿಸಿದ ಜಂತುವು ನರಕಯಾತನೆಯನ್ನು ಅನುಭವಿಸುತ್ತಾನೆ.

ನ ರಾಜ್ಞಃ ಪ್ರತಿಗೃಹ್ಣೀಯಾನ್ನ ಶೂದ್ರಾತ್ ಪತಿತಾದಪಿ ।
ನಾನ್ಯಸ್ಮಾದ್ಯಾಚಕತ್ವಂ ಚ ನಿಂದಿತಾದ್ವರ್ಜಯೇದ್ಬುಧಃ ॥ ೩ ॥

ನಿತ್ಯಂ ಯಾಚನಕೋ ನ ಸ್ಯಾತ್ ಪುನಸ್ತತ್ರೈವ ಯಾಚಯೇತ್ ।
ಪ್ರಾಣಾನಪಹರತ್ಯೇಷ ಯಾಚಕಸ್ತಸ್ಯ ದುರ್ಮತಿಃ ॥ ೪ ॥

ನ ದೇವದ್ರವ್ಯಹಾರೀ ಸ್ಯಾದ್ವಿಶೇಷೇಣ ದ್ವಿಜೋತ್ತಮಃ ।
ಬ್ರಹ್ಮಸ್ವಂ ವಾ ನಾಪಹರೇದಾಪದ್ಯಪಿ ಕದಾ ಚನ ॥ ೫ ॥

ನ ವಿಷಂ ವಿಷಮಿತ್ಯಾಹುರ್ಬ್ರಹ್ಮಸ್ವಂ ವಿಷಮುಚ್ಯತೇ ।
ದೇವಸ್ವಂ ಚಾಪಿ ಯತ್ನೇನ ಸದಾ ಪರಿಹರೇತ್ತತಃ ॥ ೬ ॥

---

೩. ರಾಜನಿಂದಲೂ ಶೂದ್ರನಿಂದಲೂ ಅಥವಾ ಪತಿತನಿಂದಲೂ ದಾನವನ್ನು ಪ್ರತಿಗ್ರಹಿಸಬಾರದು. ವಿದ್ವಾಂಸನು ಮತ್ತಾವ ನಿಂದಿತ ವ್ಯಕ್ತಿಯಿಂದಲೂ ಪ್ರತಿಗ್ರಹವನ್ನು ಹೊಂದಬಾರದು.

೪. ಯಾವಾಗಲೂ ಒಬ್ಬನಲ್ಲಿ ಯಾಚನೆಯಿಂದ ವೃತ್ತಿಯನ್ನು ಹೊಂದಿದವನು ಮತ್ತೆ ಅವನಲ್ಲಿಯೇ ಯಾಚನೆಯನ್ನು ಮಾಡಬಾರದು. ಅಂತಹ ಅವಿವೇಕಿಯಾದ ಯಾಚಕನು ಅವನ ಪ್ರಾಣಗಳನ್ನು ಅಪಹರಿಸುತ್ತಾನೆ.

೫. ದ್ವಿಜೋತ್ತಮನು ವಿಶೇಷವಾಗಿ ದೇವತಾದ್ರವ್ಯವನ್ನು ಅಪಹರಿಸುವವನಾಗಬಾರದು. ಎಂತಹ ಆಪತ್ಕಾಲದಲ್ಲಿಯೂ ಬ್ರಹ್ಮಸ್ವವನ್ನು ಯಾವಾಗಲೂ ಅಪಹರಿಸಬಾರದು.

೬. ವಿಷವನ್ನು ನಿಜವಾಗಿ ವಿಷವೆಂದು ಹೇಳುವ ಹಾಗಿಲ್ಲ. ಬ್ರಹ್ಮಸ್ವವು ವಿಷವೆಂದು ಹೇಳಲ್ಪಡುತ್ತದೆ. ಹಾಗೆ ದೇವತಾಸ್ವತ್ತನ್ನೂ ಯತ್ನಪೂರ್ವಕವಾಗಿ ಯಾವಾಗಲೂ ವರ್ಜಿಸಬೇಕು.

ಪುಷ್ಪೇ ಶಾಕೋದಕೇ ಕಾಷ್ಠೇ ತಥಾ ಮೂಲೇ ತೃಣೇ ಫಲೇ ।
ಅದತ್ತಾದಾನಮಸ್ತೇಯಂ ಮನುಃ ಪ್ರಾಹ ಪ್ರಜಾಪತಿಃ ॥ ೭ ॥

ಗೃಹೀತವ್ಯಾನಿ ಪುಷ್ಪಾಣಿ ದೇವಾರ್ಚನವಿಧೌ ದ್ವಿಜಾಃ ।
ನೈಕಸ್ಮಾದೇವ ನಿಯತಮನನುಜ್ಞಾಯ ಕೇವಲಮ್ ॥ ೮ ॥

ತೃಣಂ ಕಾಷ್ಠಂ ಫಲಂ ಪುಷ್ಪಂ ಪ್ರಕಾಶಂ ನೈ ಹರೇದ್ಬುಧಃ ।
ಧರ್ಮಾರ್ಥಂ ಕೇವಲಂ ಗ್ರಾಹ್ಯಮನ್ಯಥಾ ಪತಿತೋ ಭವೇತ್ ॥ ೯ ॥

ತಿಲಮುದ್ಗಯವಾದೀನಾಂ ಮುಷ್ಟಿರ್ಗ್ರಾಹ್ಯಾ ಪಥಿ ಸ್ಥಿತೈಃ ।
ಕ್ಷುಧಾರ್ತೈರ್ನಾನ್ಯಥಾ ವಿಪ್ರಾ ಧರ್ಮವಿದ್ಭಿರಿತಿ ಸ್ಥಿತಿಃ ॥ ೧೦ ॥

---

೭. ಪುಷ್ಪ ಕಾಯಿಪಲ್ಯ ಜಲ ಕಾಷ್ಠ ಮೂಲ ತೃಣ ಮತ್ತು ಫಲ ಇವುಗಳ ವಿಷಯದಲ್ಲಿ ಒಬ್ಬರಿಂದ ಕೊಡಲ್ಪಡದಿರುವುದನ್ನು ತೆಗೆದುಕೊಳ್ಳುವುದು ಅಸ್ತೇಯ ವೆಂದು ಮನುಪ್ರಜಾಪತಿಯು ಹೇಳಿರುತ್ತಾನೆ.

೮. ದ್ವಿಜರೇ ! ದೇವತಾರ್ಚನ ವಿಧಿಗೋಸ್ಕರ ಪ್ರಭುವಿನ ಅನುಮತಿಯಿಲ್ಲದೆ ಯಾವಾಗಲೂ ಒಬ್ಬನಿಂದಲೇ ಪುಷ್ಪಗಳನ್ನು ಸಂಗ್ರಹಿಸಬಾರದು.

೯. ತೃಣ ಕಾಷ್ಠ ಫಲ ಮತ್ತು ಪುಷ್ಪಗಳನ್ನು ವಿದ್ವಾಂಸನು ಧರ್ಮಮಾತ್ರ ಕ್ಕೋಸ್ಕರ ಪ್ರಕಾಶವಾಗಿ ತೆಗೆದುಕೊಳ್ಳಬಹುದು. ಮತ್ತಾವ ನಿಮಿತ್ತದಿಂದಲೂ ತೃಣಾದಿಗಳನ್ನು ಅಪಹರಿಸಿದರೆ ಪತಿತನಾಗುವನು.

೧೦. ದಾರಿ ನಡೆಯುವ ಪಥಿಕರು ಹಸಿವಿನಿಂದ ಪೀಡಿತರಾದಾಗ ಎಳ್ಳು ಹೆಸರು ಮತ್ತು ಯವ ಧಾನ್ಯಗಳಲ್ಲಿ ಒಂದು ಮುಷ್ಟಿಯನ್ನು ಮಾತ್ರ ತೆಗೆದುಕೊಳ್ಳ ಬಹುದು. ವಿಪ್ರರೇ ! ಧರ್ಮಜ್ಞರಿಂದ ಬೇರೆ ಸಂದರ್ಭಗಳಲ್ಲಿ ತೆಗೆದುಕೊಳ್ಳಲ್ಪಡ ಬಾರದು ಎಂದು ಧಾರ್ಮಿಕ ಮರ್ಯಾದೆಯು.

ನ ಧರ್ಮಸ್ಯಾಪದೇಶೇನ ಪಾಪಂ ಕೃತ್ವಾ ವ್ರತಂ ಚರೇತ್ ।
ವ್ರತೇನ ಪಾಪಂ ಪ್ರಚ್ಛಾದ್ಯ ಕುರ್ವನ್ ಸ್ತ್ರೀಶೂದ್ರಲಂಬನಮ್ ॥ ೧೧ ॥

ಪ್ರೇತ್ಯೇಹ ಚೇದೃಶೋ ವಿಪ್ರೋ ಗರ್ಹ್ಯತೇ ಬ್ರಹ್ಮವಾದಿಭಿಃ ।
ಛದ್ಮನಾ ಚರಿತಂ ಯಚ್ಚ ವ್ರತಂ ರಕ್ಷಾಂಸಿ ಗಚ್ಛತಿ ॥ ೧೨ ॥

ಅಲಿಂಗೀ ಲಿಂಗಿವೇಷೇಣ ಯೋ ವೃತ್ತಿಮುಪಜೀವತಿ ।
ಸ ಲಿಂಗಿನಾಂ ಹರೇದೇನಸ್ತಿರ್ಯಗ್ಯೋನೌ ಚ ಜಾಯತೇ ೧೩ ॥

ಬೈಡಾಲವ್ರತಿನಃ ಪಾಪಾ ಲೋಕೇ ಧರ್ಮವಿನಾಶಕಾಃ ।
ಸದ್ಯಃ ಪತಂತಿ ಪಾಪೇನ ಕರ್ಮಣಸ್ತಸ್ಯ ತತ್ ಫಲಮ್ ॥ ೧೪ ॥

---

೧೧. ಧರ್ಮದ ನೆಪದಿಂದ ಪಾಪವನ್ನು ಮಾಡಿ ಆ ವ್ರತವನ್ನು ಆಚರಿಸ ಬಾರದು. ವ್ರತದಿಂದ ಪಾಪವನ್ನು ಮರೆಮಾಚಿ ಕರ್ಮಮಾಡುವುದು, ಮತ್ತು ಸ್ತ್ರೀ ಶೂದ್ರರನ್ನು ಸೇವಿಸಿ ಜೀವಿಸುವುದು ಅಯುಕ್ತವು.

೧೨. ಇಂತಹ ವಿಪ್ರನು ಮರಣಹೊಂದಿದರೂ ಬ್ರಹ್ಮವಾದಿಗಳಿಂದ ನಿಂದಿಸ ಲ್ಪಡುತ್ತಾನೆ. ವಂಚನೆಯಿಂದ ಮಾಡಿದ ವ್ರತವು ರಾಕ್ಷಸರ ಭಾಗವಾಗಿ ಅವರನ್ನು ಸೇರುತ್ತದೆ.

೧೩. ಲಿಂಗರಹಿತನು ಲಿಂಗಿಯ ವೇಷವನ್ನು ಧರಿಸಿ ಜೀವಿಕೆಯನ್ನು ಹೊಂದಿದರೆ ಅಂತಹ ಮನುಷ್ಯನು ಲಿಂಗಿಗಳಲ್ಲಿರುವ ಪಾಪವನ್ನು ಹೊಂದುತ್ತಾನೆ ಮತ್ತು ಪಶು-ಪಕ್ಷಿಗಳ ಯೋನಿಯಲ್ಲಿ ಜನ್ಮವೆತ್ತುತ್ತಾನೆ.

೧೪. ಮಾರ್ಜಾಲದಂತೆ ಕಪಟವ್ರತಗಳುಳ್ಳ ಪಾಪಿಗಳು ಲೋಕದಲ್ಲಿ ಧರ್ಮ ನಾಶಕರಾಗಿರುವರು. ಅವರು ಕೂಡಲೇ ಅನರ್ಥಗಳಲ್ಲಿ ಬೀಳುತ್ತಾರೆ. ಅವರು ಮಾಡಿದ ಕರ್ಮಕ್ಕೆ ಅದೇ ಅನರ್ಥಫಲವು.

ಪಾಖಂಡಿನೋ ವಿಕರ್ಮಸ್ಥಾನ್ ವಾಮಾಚಾರಾಂಸ್ತಥೈವ ಚ ।
ಪಂಚರಾತ್ರಾನ್ ಪಾಶುಪತಾನ್ ವಾಙ್ಮಾತ್ರೇಣಾಪಿ ನಾರ್ಚಯೇತ್ ॥

ವೇದನಿಂದಾರತಾನ್ ಮರ್ತ್ಯಾನ್ ದೇವನಿಂದಾರತಾಂಸ್ತಥಾ ।
ದ್ವಿಜನಿಂದಾರತಾಂಶ್ಚೈವ ಮನಸಾಪಿ ನ ಚಿಂತಯೇತ್ ॥ ೧೬ ॥

ಯಾಜನಂ ಯೋನಿಸಂಬಂಧಂ ಸಹವಾಸಂ ಚ ಭಾಷಣಮ್ ।
ಕುರ್ವಾಣಃ ಪತತೇ ಜಂತುಸ್ತಸ್ಮಾದ್ಯತ್ನೇನ ವರ್ಜಯೇತ್ ॥ ೧೭ ॥

ದೇವದ್ರೋಹಾದ್ಗುರುದ್ರೋಹಃ ಕೋಟಿಕೋಟಿಗುಣಾಧಿಕಃ ।
ಜ್ಞಾನಾಪವಾದೋ ನಾಸ್ತಿಕ್ಯಂ ತಸ್ಮಾತ್ ಕೋಟಿಗುಣಾಧಿಕಮ್ ॥ ೧೮ ॥

---

೧೫. ಪಾಖಂಡಿ ವಿರುದ್ಧಕರ್ಮಾಚಾರಿ ವಾಮಾಚರದವನು ಪಾಂಚರಾತ್ರ ಪಾಶುಪತ ಮುಂತಾದ ವೇದಬಾಹ್ಯ ಮತಾವಲಂಬಿ ಇವರನ್ನು ವಚನಮಾತ್ರ ದಿಂದಲೂ ಸತ್ಕರಿಸಬಾರದು.

೧೬. ವೇದಗಳನ್ನು ನಿಂದಿಸುವುದರಲ್ಲಿ ತತ್ಪರರೂ ದೇವತೆಗಳನ್ನು ನಿಂದಿಸು ವುದರಲ್ಲಿ ನಿರತರೂ ಮತ್ತು ಬ್ರಾಹ್ಮಣ ನಿಂದಾಪರರೂ ಆದ ಮನುಷ್ಯರನ್ನು ಮನಸ್ಸಿನಲ್ಲಿಯೂ ಧ್ಯಾನಿಸಬಾರದು.

೧೭. ಅಂತಹ ಪಾಪಿಗಳೊಡನೆ ಯಾಗಮಾಡಿಸುವುದು ಯೋನಿ ಸಂಬಂಧ ಸಹವಾಸ ಮತ್ತು ಸಂಭಾಷಣಗಳನ್ನು ಮಾಡಿದ ಮಾನವನು ಪತಿತನಾಗುತ್ತಾನೆ. ಆದ್ದರಿಂದ ಅದನ್ನು ಯತ್ನಪೂರ್ವಕವಾಗಿ ಬಿಡಬೇಕು.

೧೮. ದೇವತಾದ್ರೋಹಕ್ಕಿಂತಲೂ ಗುರುದ್ರೋಹವು ಕೋಟಿಕೋಟಿಯಷ್ಟು ಅಧಿಕವಾದ ಅವರ್ಥವಾಗಿರುವುದು. ಜ್ಞಾನಶೂನ್ಯತೆಗಿಂತಲೂ ನಾಸ್ತಿಕ್ಯವು ಕೋಟಿ ಸಂಖ್ಯೆಯಷ್ಟು ಅಧಿಕವಾಗಿರುವುದು.

ಗೋಭಿಶ್ಚ ದೈವತೈರ್ವಿಪ್ರೈಃ ಕೃಷ್ಯಾ ರಾಜೋಪಸೇವಯಾ ।
ಕುಲಾನ್ಯಕುಲತಾಂ ಯಾಂತಿ ಯಾನಿ ಹೀನಾನಿ ಧರ್ಮತಃ ॥ ೧೯ ॥

ಕುವಿವಾಹೈಃ ಕ್ರಿಯಾಲೋಪೈರ್ವೇದಾನಧ್ಯಯನೇನ ಚ ।
ಕುಲಾನ್ಯಕುಲತಾಂ ಯಾಂತಿ ಬ್ರಾಹ್ಮಣಾತಿಕ್ರಮೇಣ ಚ ॥ ೨೦ ॥

ಅನೃತಾತ್ಪಾರದಾರ್ಯಾಚ್ಚ ತಥಾಽಭಕ್ಷ್ಯಸ್ಯ ಭಕ್ಷಣಾತ್ ।
ಅಶ್ರೌತಧರ್ಮಾಚರಣಾತ್ ಕ್ಷಿಪ್ರಂ ನಶ್ಯತಿ ವೈ ಕುಲಮ್ ॥ ೨೧ ॥

ಅಶ್ರೋತ್ರಿಯೇಷು ವೈ ದಾನಾದ್ವೃಷಲೇಷು ತಥೈವ ಚ ।
ವಿಹಿತಾಚಾರಹೀನೇಷು ಕ್ಷಿಪ್ರಂ ನಶ್ಯತಿ ವೈ ಕುಲಮ್ ॥ ೨೨ ॥

ನಾಧಾರ್ಮಿಕೈರ್ವೃತೇ ಗ್ರಾಮೇ ನ ವ್ಯಾಧಿಬಹುಲೇ ಭೃಶಮ್ ।
ನ ಶೂದ್ರರಾಜ್ಯೇ ನಿವಸೇನ್ನ ಪಾಖಂಡಜನೈರ್ವೃತೇ ॥ ೨೩ ॥

---

೧೯. ಗೋವು ದೇವತೆ ಬ್ರಾಹ್ಮಣ ಕೃಷಿ ಮತ್ತು ರಾಜಸೇವೆಗಳ ವಿಷಯದಲ್ಲಿ ಧರ್ಮದಿಂದ ಚ್ಯುತನಾಗಿ ನಡೆದರೆ ಸದ್ವಂಶವು ದುಷ್ಕುಲತ್ವವನ್ನು ಹೊಂದುತ್ತದೆ.

೨೦. ನಿಷಿದ್ಧವಿವಾಹಗಳಿಂದಲೂ ಕ್ರಿಯಾಲೋಪಗಳಿಂದಲೂ ವೇದಾಧ್ಯಯನ ತ್ಯಾಗದಿಂದಲೂ ಮತ್ತು ಬ್ರಾಹ್ಮಣ ತಿರಸ್ಕಾರದಿಂದಲೂ ಸತ್ಕುಲಗಳು ದೋಷಕ್ಕೆ ಭಾಗಿಯಾಗುತ್ತವೆ.

೨೧. ಅನೃತವಚನ ಪರಸ್ತ್ರೀಸಂಗ ನಿಷಿದ್ಧಭಕ್ಷಣ ಅವೈದಿಕ ಧರ್ಮಾನುಷ್ಠಾನ ಎಂಬುವ ಪಾತಕಗಳಿಂದ ಸದ್ವಂಶವು ಕ್ಷಿಪ್ರದಲ್ಲಿ ನಾಶಹೊಂದುತ್ತದೆ.

೨೨. ಶ್ರೋತ್ರಿಯರಲ್ಲದವರಲ್ಲಿಯೂ ಶೂದ್ರರಲ್ಲಿಯೂ ಮತ್ತು ವಿಹಿತವಾದ ಆಚಾರಭ್ರಷ್ಟರಲ್ಲಿಯೂ ಕುಲವು ಕ್ಷಿಪ್ರದಲ್ಲಿ ನಾಶಹೊಂದುತ್ತದೆ.

೨೩. ಅಧಾರ್ಮಿಕ ಜನರಿಂದ ತುಂಬಿದ ಗ್ರಾಮದಲ್ಲಿಯೂ ವ್ಯಾಧಿ ಹರಡಿರುವ ಪ್ರದೇಶದಲ್ಲಿಯೂ ಶೂದ್ರನಾಳುವ ರಾಜ್ಯದಲ್ಲಿಯೂ ಮತ್ತು ಪಾಖಂಡಿ ಜನರಿಂದ ವ್ಯಾಪ್ತವಾದ ಸ್ಥಳದಲ್ಲಿಯೂ ವಾಸಮಾಡಬಾರದು.

ಹಿಮವದ್ವಿಂಧ್ಯಯೋರ್ಮಧ್ಯೇ ಪೂರ್ವಪಶ್ಚಿಮಯೋಃ ಶುಭಮ್ ।
ಮುಕ್ತ್ವಾ ಸಮುದ್ರಯೋರ್ದೇಶಂ ನಾನ್ಯತ್ರ ನಿವಸೇದ್ದ್ವಿಜಃ ॥ ೨೪ ॥

ಕೃಷ್ಣೋ ವಾ ಯತ್ರ ಚರತಿ ಮೃಗೋ ನಿತ್ಯಂ ಸ್ವಭಾವತಃ ।
ಪುಣ್ಯಾಶ್ಚ ವಿಶ್ರುತಾ ನದ್ಯಸ್ತತ್ರ ವಾ ನಿವಸೇದ್ದ್ವಿಜಃ ॥ ೨೫ ॥

ಅರ್ಧಕ್ರೋಶಾನ್ನದೀಕೂಲಂ ವರ್ಜಯಿತ್ವಾ ದ್ವಿಜೋತ್ತಮಃ ।
ನಾನ್ಯತ್ರ ನಿವಸೇತ್ ಪುಣ್ಯಾಂ ನಾಂತ್ಯಜಗ್ರಾಮಸನ್ನಿಧೌ ॥ ೨೬ ॥

ನ ಸಂವಸೇಚ್ಚ ಪತಿತೈರ್ನ ಚಂಡಾಲೈರ್ನ ಪುಕ್ಕಸೈಃ ।
ನ ಮೂರ್ಖೈರ್ನಾವಲಿಪ್ತೈಶ್ಚ ನಾಂತ್ಯೈರ್ನಾಂತ್ಯಾವಸಾಯಿಭಿಃ ॥ ೨೭ ॥

---

೨೪. ದ್ವಿಜನು ಹಿಮಾಚಲ ಮತ್ತು ವಿಂಧ್ಯಪರ್ವತಗಳ ಮಧ್ಯದಲ್ಲಿಯೂ ಪೂರ್ವ ಮತ್ತು ಪಶ್ಚಿಮ ಸಮುದ್ರಗಳ ಮಧ್ಯದಲ್ಲಿಯೂ ಇರುವ ಮಂಗಳಕರವಾದ ದೇಶವನ್ನು ಬಿಟ್ಟು ಬೇರೊಂದು ಕಡೆಯಲ್ಲಿ ವಾಸಮಾಡಬಾರದು.

೨೫. ದ್ವಿಜನು ಸ್ವಾಭಾವಿಕವಾಗಿ ಕೃಷ್ಣಮೃಗವು ಯಾವಾಗಲೂ ಸಂಚರಿಸುವ ದೇಶದಲ್ಲಿಯೂ ಪವಿತ್ರವಾದ ನದಿಗಳು ಹರಿಯುವ ಸ್ಥಳದಲ್ಲಿಯೂ ವಾಸ ಮಾಡಬೇಕು.

೨೬. ದ್ವಿಜೋತ್ತಮನು ಒಂದು ಅರ್ಧಹರದಾರಿಗಿಂತ ದೂರಪ್ರಮಾಣದಲ್ಲಿ ನದೀತೀರವನ್ನು ಬಿಟ್ಟು ಬೇರೊಂದು ಸ್ಥಳದಲ್ಲಿಯೂ ಅಂತ್ಯಜರ ಗ್ರಾಮದ ಸನ್ನಿಧಿಯಲ್ಲಿಯೂ ವಾಸಮಾಡಬಾರದು.

೨೭. ಪತಿತ ಚಂಡಾಲ, ಪುಲ್ಕಸ, ಮೂರ್ಖ, ಅಹಂಕಾರಿ, ಅಂತ್ಯಜ ಮತ್ತು ಅಂತಾವಸಾಯಿ ಮುಂತಾದ ನಿಷಿದ್ಧ ಜನಾಂಗದೊಡನೆ ವಾಸಮಾಡಬಾರದು.

ಏಕಶಯ್ಯಾಸನಂ ಪಂಕ್ತಿರ್ಭಾಂಡಪಕ್ವಾನ್ನಮಿಶ್ರಣಮ್ ।
ಯಾಜನಾಧ್ಯಾಪನಂ ಯೋನಿಸ್ತಥೈವ ಸಹಭೋಜನಮ್ ॥ ೨೮ ॥

ಸಹಾಧ್ಯಾಯಸ್ತು ದಶಮಃ ಸಹಯಾಜನಮೇವ ಚ ।
ಏಕಾದಶೈತೇ ನಿರ್ದಿಷ್ಟಾ ದೋಷಾಃ ಸಾಂಕರ್ಯಸಂಜ್ಞಿತಾಃ ॥ ೨೯ ॥

ಸಮೀಪೇ ವಾಪ್ಯವಸ್ಥಾನಾತ್ ಪಾಪಂ ಸಂಕ್ರಮತೇ ನೃಣಾಮ್ ।
ತಸ್ಮಾತ್ ಸರ್ವಪ್ರಯತ್ನೇನ ಸಂಕರಂ ವರ್ಜಯೇದ್ಬುಧಃ ॥ ೩೦ ॥

ಏಕಪಂಕ್ತ್ಯುಪವಿಷ್ಟಾ ಯೇ ನ ಸ್ಪೃಶಂತಿ ಪರಸ್ಪರಮ್ ।
ಭಸ್ಮನಾ ಕೃತಮರ್ಯಾದಾ ನ ತೇಷಾಂ ಸಂಕರೋ ಭವೇತ್ ॥ ೩೧ ॥

---

೨೮. ಏಕಶಯ್ಯೆ, ಏಕಾಸನ, ಏಕಪಂಕ್ತಿಭೋಜನ, ಏಕಪಾತ್ರಮಿಶ್ರಿತವಾದ ಏಕಾನ್ನ, ಯಜ್ಞಮಾಡಿಸುವುದು ಅಧ್ಯಯನ ಮಾಡಿಸುವುದು, ಯೋನಿ ಸಂಬಂಧ ಮತ್ತು ಸಹಭೋಜಗಳು ಸಾಂಕರ್ಯವನ್ನುಂಟು ಮಾಡುವುವು.

೨೯. ಹಾಗು ಸಹಾಧ್ಯಯನ, ಸಹಯಾಜನ ಎಂಬ ಈ ಹನ್ನೊಂದು ದೋಷಗಳು ಸಾಂಕರ್ಯವನ್ನುಂಟುಮಾಡುವ ದೋಷಗಳೆಂದು ನಿರ್ದೇಶಿಸಲ್ಪಟ್ಟಿವೆ.

೩೦. ದುಷ್ಟರ ಸಮೀಪದಲ್ಲಿ ವಾಸಮಾಡುವುದರಿಂದಲೂ ಮನುಷ್ಯರಲ್ಲಿ ಪಾಪವು ಸಂಕ್ರಮಿಸುತ್ತದೆ. ಆದ್ದರಿಂದ ಬುಧನು ಸರ್ವಪ್ರಯತ್ನಗಳಿಂದಲೂ ಸಾಂಕರ್ಯವನ್ನು ಬಿಡಬೇಕು.

೩೧. ಒಂದೇ ಪಂಕ್ತಿಯಲ್ಲಿ ಕುಳಿತು ಭಸ್ಮರೇಖೆಯಿಂದ ಎಲ್ಲೆಯನ್ನು ತೋರಿಸಲ್ಪಟ್ಟ ಮನುಷ್ಯರು ಪರಸ್ಪರವಾಗಿ ಸ್ಪರ್ಶಮಾಡಿಕೊಳ್ಳದಿದ್ದರೆ ಅವರಿಗೆ ಸ್ಪರ್ಶದೋಷವು ಸಂಬಂಧಿಸುವುದಿಲ್ಲ.

ಅಗ್ನಿನಾ ಭಸ್ಮನಾ ಚೈವ ಸಲಿಲೇನ ವಿಶೇಷತಃ ।
ದ್ವಾರೇಣ ಸ್ತಂಭಮಾರ್ಗೇಣ ಷಡ್ಭಿಃ ಪಂಕ್ತಿರ್ವಿಭಿದ್ಯತೇ ॥ ೩೨ ॥

ನ ಕುರ್ಯಾದ್ದುಃಖವೈರಾಣಿ ವಿವಾದಂ ಚೈವ ಪೈಶುನಮ್ ।
ಪರಕ್ಷೇತ್ರೇ ಗಾಂ ಚರಂತೀಂ ನ ಚಾಚಕ್ಷೀತ ಕಸ್ಯಚಿತ್ ॥ ೩೩ ॥

ನ ಸಂವಸೇತ್ ಸೂತಕಿನಾ ನ ಕಂಚಿನ್ಮರ್ಮಣಿ ಸ್ಪೃಶೇತ್ ।
ನ ಸೂರ್ಯಪರಿವೇಷಂ ವಾ ನೇಂದ್ರಚಾಪಂ ಶವಾಗ್ನಿಕಮ್ ॥ ೩೪ ॥

ಪರಸ್ಮೈ ಕಥಯೇದ್ವಿದ್ವಾನ್ ಶಶಿನಂ ವಾ ಕದಾಚನ ।
ನ ಕುರ್ಯಾದ್ಬಹುಭಿಃ ಸಾರ್ಧಂ ವಿರೋಧಂ ವಾ ಕದಾಚನ । ॥ ೩೫ ॥

---

೩೨. ಅಗ್ನಿ, ಭಸ್ಮ, ಜಲಧಾರೆ, ದ್ವಾರಸ್ತಂಭ ಮತ್ತು ಮಾರ್ಗವೆಂಬ ಆರು ಸಾಧನಗಳಿಂದ ದೀರ್ಘವಾದ ಪಂಕ್ತಿಯು ಮಧ್ಯದಲ್ಲಿ ಭೇದಿಸಲ್ಪಟ್ಟು ಬೇರೆಯಾಗುವುದು.

೩೩. ದುಃಖವನ್ನುಂಟುಮಾಡುವ ವೈರವನ್ನು, ವಿವಾದವನ್ನು ಮತ್ತು ಚಾಡಿಕೋರತನವನ್ನು ಮಾಡಬಾರದು. ಮತ್ತೊಬ್ಬನ ಕ್ಷೇತ್ರದಲ್ಲಿ ಮೇಯುತ್ತಿರುವ ಗೋವನ್ನು ಬೇರೊಬ್ಬನಿಗೆ ತಿಳಿಸಬಾರದು.

೩೪. ಆಶೌಚವಂತನೊಡನೆ ವಾಸಮಾಡಬಾರದು. ಮರ್ಮಸ್ಥಾನವಲ್ಲಿ ಯಾರನ್ನೂ ಸ್ಪರ್ಶಿಸಕೂಡದು. ಸೂರ್ಯಬಿಂಬದ ಸುತ್ತಲೂ ಇರುವ ಮಂಡಲ, ಕಾಮನಬಿಲ್ಲು, ಶವಾಗ್ನಿ ಇವುಗಳನ್ನು ಬೇರೊಬ್ಬನಿಗೆ ಹೇಳಿ ತಿಳಿಸಬಾರದು.

೩೫. ಹಾಗೂ ಜ್ಞಾನಿಯು ಯಾವಾಗಲೂ ಚಂದ್ರನಿಗುಂಟಾದ ರೇಖಾಮಂಡಲವನ್ನು ಮತ್ತೊಬ್ಬನಿಗೆ ತಿಳಿಸಬಾರದು. ಮತ್ತು ಬಹುಜನರೊಡನೆ ಯಾವಾಗಲೂ ವಿರೋಧವನ್ನು ಮಾಡಬಾರದು.

ಆತ್ಮನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್ ।
ತಿಥಿಂ ಪಕ್ಷಸ್ಯ ನ ಬ್ರೂಯಾನ್ನಕ್ಷತ್ರಾಣಿ ವಿನಿರ್ದಿಶೇತ್ ॥ ೩೬ ॥

ನೋದಕ್ಯಾಮಭಿಭಾಷೇತ ನಾಶುಚಿಂ ವಾ ದ್ವಿಜೋತ್ತಮಃ ।
ನ ದೇವಗುರುವಿಪ್ರಾಣಾಂ ದೀಯಮಾನಂ ತು ವಾರಯೇತ್ ॥ ೩೭ ॥

ನ ಚಾತ್ಮಾನಂ ಪ್ರಶಂಸೇದ್ವಾ ಪರನಿಂದಾಂ ಚ ವರ್ಜಯೇತ್ ।
ವೇದನಿಂದಾಂ ದೇವನಿಂದಾಂ ಪ್ರಯತ್ನೇನ ವಿವರ್ಜಯೇತ್ ॥ ೩೮ ॥

ಯಸ್ತು ದೇವಾನೃಷೀನ್ ವಿಪ್ರಾನ್ ವೇದಾನ್ ವಾ ನಿಂದತಿ ದ್ವಿಜಃ ।
ನ ತಸ್ಯ ನಿಷ್ಕೃತಿರ್ದೃಷ್ಟಾ ಶಾಸ್ತ್ರೇಷ್ವಿಹ ಮುನೀಶ್ವರಾಃ ॥ ೩೯ ॥

ನಿಂದಯೇದ್ವೈ ಗುರೂನ್ ದೇವಾನ್ ವೇದಂ ವಾ ಸೋಪಬೃಹಂಣಮ್।
ಕಲ್ಪಕೋಟಿಶತಂ ಸಾಗ್ರಂ ರೌರವೇ ಪಚ್ಯತೇ ನರಃ ॥ ೪೦ ॥

---

೩೬. ತನಗೆ ಪ್ರತಿಕೂಲವಾದುದನ್ನು ಬೇರೆಯವರಿಗೆ ಮಾಡಬಾರದು. ಪಕ್ಷದ ತಿಥಿಯನ್ನು ಹೇಳಬಾರದು. ನಕ್ಷತ್ರಗಳನ್ನು ಮಾತ್ರ ನಿರ್ದೇಶಿಸಬೇಕು.

೩೭. ದ್ವಿಜೋತ್ತಮನು ರಜಸ್ವಲೆಯೊಡನೆಯೂ, ಅಶುಚಿಯೊಡನೆಯೂ ಭಾಷಣಮಾಡಬಾರದು. ಮತ್ತು ದೇವತೆ ಗುರು-ವಿಪ್ರರಿಗೆ ಕೊಡುತ್ತಿದ್ದ ದಾನವನ್ನು ನಿಷೇಧಿಸಬಾರದು.

೩೮. ತನ್ನನ್ನು ತಾನು ಪ್ರಶಂಸೆಮಾಡಬಾರದು. ಪರನಿಂದೆಯನ್ನು ವರ್ಜಿಸಬೇಕು. ಹಾಗೂ ವೇದಗಳ ಮತ್ತು ದೇವತೆಗಳ ನಿಂದೆಯನ್ನು ಪ್ರಯತ್ನಪೂರ್ವಕವಾಗಿ ಬಿಡಬೇಕು.

೩೯. ಮುನಿಶ್ರೇಷ್ಠರೇ! ಯಾವ ದ್ವಿಜನು ದೇವತೆಗಳನ್ನು, ಋಷಿಗಳನ್ನು, ವಿಪ್ರರನ್ನು ಅಥವಾ ವೇದಗಳನ್ನು ನಿಂದಿಸುವನೋ, ಅವನಿಗೆ ಶಾಸ್ತ್ರಗಳಲ್ಲಿ ಎಲ್ಲಿಯೂ ಪ್ರಾಯಶ್ಚಿತ್ತವು ವಿಹಿತವಾಗಿರುವುದಿಲ್ಲ.

೪೦. ಗುರು. ದೇವತೆ ಮತ್ತು ಇತಿಹಾಸ ಪುರಾಣಾದಿಗಳಿಂದ ಕೂಡಿದ ವೇದ ಇವುಗಳನ್ನು ನಿಂದಿಸಿದ ಮಾನವನು ಒಂದುನೂರು ಕಲ್ಪಕಾಲ ಸಂಪೂರ್ಣವಾಗಿ ರೌರವನರಕದಲ್ಲಿ ಯಾತನೆಯನ್ನು ಅನುಭವಿಸುತ್ತಾನೆ.

ತೂಷ್ಣೀಮಾಸೀತ ನಿಂದಾಯಾಂ ನ ಬ್ರೂಯಾತ್ ಕಿಂಚಿದುತ್ತರಮ್ ।
ಕರ್ಣೌ ಪಿಧಾಯ ಗಂತವ್ಯಂ ನ ಚೈತಾನವಲೋಕಯೇತ್ ॥ ೪೧ ॥

ವರ್ಜಯೇದ್ವೈ ರಹಸ್ಯಂ ಚ ಪರೇಷಾಂ ಗೂಹಯೇದ್ಬುಧಃ ।
ವಿವಾದಂ ಸ್ವಜನೈಃ ಸಾರ್ಧಂ ನ ಕುರ್ಯಾದ್ವೈ ಕದಾಚನ ॥ ೪೨ ॥

ನ ಪಾಪಂ ಪಾಪಿನಂ ಬ್ರೂಯಾದಪಾಪಂ ವಾ ದ್ವಿಜೋತ್ತಮಾಃ ।
ಸ ತೇನ ತುಲ್ಯದೋಷಃ ಸ್ಯಾನ್ಮಿಥ್ಯಾದಿದೋಷವಾನ್ ಭವೇತ್ ॥ ೪೩ ॥

ಯಾನಿ ಮಿಥ್ಯಾಭಿಶಸ್ತಾನಾಂ ಪತಂತ್ಯಶ್ರೂಣಿ ರೋದನಾತ್ ।
ತಾನಿ ಪುತ್ರಾನ್ ಪಶೂನ್ ಘ್ನಂತಿ ತೇಷಾಂ ಮಿಥ್ಯಾಭಿಶಂಸಿನಾಮ್ ॥

---

೪೧. ಗುರು ಮುಂತಾದವರ ನಿಂದಾಪ್ರಸಂಗದಲ್ಲಿ ತಾನು ಸುಮ್ಮನೆ ಇರಬೇಕು. ಒಂದು ಉತ್ತರವನ್ನೂ ಹೇಳಬಾರದು. ಕಿವಿಗಳನ್ನು ಮುಚ್ಚಿಕೊಂಡು ಬೇರೆಕಡೆಗೆ ಹೋಗಬೇಕು. ಹಾಗೆ ನಿಂದಿಸುವವರನ್ನು ನೋಡಬಾರದು.

೪೨. ಮತ್ತು ಯಾವಾಗಲೂ ರಹಸ್ಯ ಸಂಗತಿಗಳನ್ನು ಬಿಡಬೇಕು. ಪರರ ರಹಸ್ಯಗಳನ್ನು ರಕ್ಷಿಸಬೇಕು. ಸ್ವಜನರ ಸಂಗಡ ಯಾವಾಗಲೂ ವಿವಾದವನ್ನು ಮಾಡಬಾರದು.

೪೩. ದ್ವಿಜೋತ್ತಮರೆ! ಪಾಪಿಯನ್ನು ನೋಡಿ ಪಾಪಿಯೆಂದು ಹೇಳಬಾರದು. ಹಾಗು ಅಪಾಪಿಯನ್ನು ಪಾಪಿಯೆನ್ನಬಾರದು. ಹಾಗೆ ಹೇಳುವುದರಿಂದ ನಿಜವಾದ ಪಾಪಿಗೆ ತುಲ್ಯವಾದ ಪಾಪದೋಷಕ್ಕೆ ಭಾಗಿಯೂ, ಅಪಾಪಿಗೆ ಮಿಥ್ಯಾಪಾಪವನ್ನು ಆರೋಪಿಸಿದ ಪಾಪಕ್ಕೆ ಭಾಗಿಯೂ ಆಗುತ್ತಾನೆ.

೪೪. ಮಿಥ್ಯಾಪವಾದವನ್ನು ಹೊರಿಸಿದವರ ರೋದನದಿಂದ ಯಾವ ಕಣ್ಣೀರು ಬಿಂದುಗಳು ಬೀಳುವುವೋ, ಆ ಬಿಂದುಗಳು ಮಿಥ್ಯಾಪವಾದವನ್ನು ಹೊರಿಸಿದವರ ಪಶು-ಪುತ್ರರನ್ನು ಧ್ವಂಸಮಾಡುವುವು.

ಬ್ರಹ್ಮಹತ್ಯಾಸುರಾಪಾನೇ ಸ್ತೇಯಗುರ್ವಂಗನಾಗಮೇ ।
ದೃಷ್ಟಂ ವಿಶೋಧನಂ ಸದ್ಭಿರ್ನಾಸ್ತಿ ಮಿಥ್ಯಾಭಿಶಂಸನೇ ॥ ೪೫ ॥

ನೇಕ್ಷೇತೋದ್ಯಂತಮಾದಿತ್ಯಂ ಶಶಿನಂ ಚಾನಿಮಿತ್ತತಃ ।
ನಾಸ್ತಂ ಯಾಂತಂ ನ ವಾರಿಸ್ಥಂ ನೋಪಸೃಷ್ಟಂ ನ ಮಧ್ಯಗಮ್ ॥ ೪೬ ॥

ತಿರೋಹಿತಂ ವಾಸಸಾ ವಾ ನಾದರ್ಶಾಂತರಗಾಮಿನಮ್ ।
ನ ನಗ್ನಾಂ ಸ್ತ್ರಿಯಮೀಕ್ಷೇತ ಪುರುಷಂ ವಾ ಕದಾಚನ ॥ ೪೭ ॥

ನ ಚ ಮೂತ್ರಂ ಪುರೀಷಂ ವಾ ನ ಚ ಸಂಸ್ಪೃಷ್ಟಮೈಥುನಮ್ ।
ನಾಶುಚಿಃ ಸೂರ್ಯಸೋಮಾದೀನ್ ಗ್ರಹಾನಾಲೋಕಯೇದ್ಬುಧಃ ॥

---

೪೫. ಬ್ರಹ್ಮಹತ್ಯೆ, ಸುರಾಪಾನ, ಸ್ತೇಯ, ಗುರುಪತ್ನೀ ಸಮಾಗಮ—ಎಂಬ ಮಹಾಪಾತಕಗಳಲ್ಲಿ ಪ್ರಾಯಶ್ಚಿತ್ತವು ಸಾಧುಗಳಿಂದ ತೋರಿಸಲ್ಪಟ್ಟಿದೆ. ಮಿಥ್ಯಾಪವಾದದಲ್ಲಿ ಮಾತ್ರ ಪ್ರಾಯಶ್ಚಿತ್ತವು ಹೇಳಲ್ಪಡಲಿಲ್ಲ.

೪೬. ಉದಯಿಸುತ್ತಿರುವ, ಅಸ್ತಮಯಹೊಂದುವ, ಜಲದಲ್ಲಿ ಪ್ರತಿಬಿಂಬಿಸಿದ, ಉಪರಾಗ ಹಿಡಿದಿರುವ ಮತ್ತು ಗಗನಮಧ್ಯದಲ್ಲಿರುವ ಸೂರ್ಯನನ್ನೂ ಚಂದ್ರನನ್ನೂ ನಿಮಿತ್ತವಿಲ್ಲದೆ ನೋಡಬಾರದು.

೪೭. ಅಥವಾ ವಸ್ತ್ರದಿಂದ ಮರೆಮಾಡಿರುವ ಮತ್ತು ಕನ್ನಡಿಯಲ್ಲಿ ಪ್ರತಿಬಿಂಬಿಸಿರುವ ಸೂರ್ಯನನ್ನು ನೋಡಬಾರದು. ಮತ್ತು ನಗ್ನಳಾದ ಸ್ತ್ರೀಯನ್ನೂ ನಗ್ನನಾದ ಪುರುಷನನ್ನೂ ಯಾವಾಗಲೂ ನೋಡಬಾರದು.

೪೮. ವಿದ್ವಾಂಸನು ಮೂತ್ರ-ಮಲಗಳನ್ನೂ, ದಂಪತಿಗಳು ಸೇರಿಕೊಂಡಿರುವ ಮೈಥುನ ಕರ್ಮವನ್ನೂ ನೋಡಬಾರದು. ಮತ್ತು ಅಪವಿತ್ರನಾಗಿರುವ ಸಮಯದಲ್ಲಿ ಸೂರ್ಯ-ಚಂದ್ರ ಮುಂತಾದ ಗ್ರಹಗಳನ್ನು ನೋಡಬಾರದು.

ಪತಿತವ್ಯಂಗ್ಯಚಂಡಾಲಾನುಚ್ಛಿಷ್ಟಾನ್ನಾವಲೋಕಯೇತ್ ।
ನಾಭಿಭಾಷೇತ ಚ ಪರಮುಚ್ಛಿಷ್ಟೋ ವಾಪ ಗರ್ವಿತಃ ॥ ೪೯ ॥

ನ ಸ್ಪೃಶೇತ್ ಪ್ರೇತಸಂಸ್ಪರ್ಶಂ ನ ಕ್ರುದ್ಧಸ್ಯ ಗುರೋರ್ಮುಖಮ್ ।
ನ ತೈಲೋದಕಯೋಶ್ಛಾಯಾಂ ನ ಪತ್ನೀಂ ಭೋಜನೇ ಸತಿ ॥ ೫೦ ॥

ನಿಯುಕ್ತಬಂಧನಾಂಗಾಂ ವಾ ನೋನ್ಮತ್ತಂ ಮತ್ತಮೇವ ವಾ ।
ನಾಶ್ನೀಯಾದ್ಭಾರ್ಯಯಾ ಸಾರ್ಧಂ ನೈನಾಮೀಕ್ಷೇತ ಮೋಹನೀಮ್ ।
ಕ್ಷುವಂತೀಂ ಜೃಂಭಮಾಣಾಂ ವಾ ನಾಸನಸ್ಥಾಂ ಯಥಾಸುಖಮ್ ॥೫೧॥

ನೋದಕೇ ಚಾತ್ಮನೋ ರೂಪಂ ನ ಕೂಲಂ ಶ್ವಭ್ರಮೇವ ವಾ ।
ನ ಲಂಘಯೇಚ್ಚ ಮೂತ್ರಂ ವಾ ನಾಧಿತಿಷ್ಠೇತ್ ಕದಾಚನ ॥ ೫೨ ॥

---

೪೯. ಪತಿತ, ಊನಾಂಗ, ಚಂಡಾಲ, ಉಚ್ಛಿಷ್ಟ ಜನರನ್ನು ನೋಡಬಾರದು ಮತ್ತು ತಾನು ಉಚ್ಛಿಷ್ಟನೂ ಆವರಣದಿಂದ ಮುಚ್ಚಿರುವವನೂ ಆಗಿದ್ದು ಪರನನ್ನು ಕುರಿತು ಸಂಭಾಷಿಸಬಾರದು.

೫೦. ಪ್ರೇತಸ್ಪರ್ಶಮಾಡಿದವನನ್ನು ಸ್ಪರ್ಶಮಾಡಬಾರದು. ಕ್ರುದ್ಧನಾಗಿರುವ ಗುರುವಿನ ಮುಖವನ್ನು ನೋಡಬಾರದು. ತೈಲ-ಜಲಗಳಲ್ಲಿ ಪ್ರತಿಬಿಂಬವನ್ನು ನೋಡಬಾರದು. ಭುಂಜಿಸುತ್ತಿರುವ ಪತ್ನಿಯನ್ನು ನೋಡಬಾರದು. ಕೂಪಾರಾದಿ ಬಂಧನಮುಕ್ತವಾದ ಅಂಗವುಳ್ಳವಳನ್ನೂ, ಮತ್ತೋನ್ಮತ್ತರನ್ನೂ ನೋಡಬಾರದು.

೫೧. ಪತ್ನಿಯೊಡನೆ ಭೋಜನಮಾಡಬಾರದು. ಅಶುಚಿಯಾಗಿರುವ ಭಾರ್ಯೆಯನ್ನು ನೋಡಬಾರದು. ಸೀನು, ಆವಳಿಕೆಗಳಿಂದ ಕೂಡಿರುವವಳನ್ನೂ ಯಥಾಸುಖವಾಗಿ ಆಸನದಲ್ಲಿ ಕುಳಿತಿರುವವಳನ್ನೂ ನೋಡಬಾರದು.

೫೨. ಜಲದಲ್ಲಿ ತನ್ನ ರೂಪವನ್ನು ನೋಡಬಾರದು. ಜಲಾಶಯದ ಕೂಲವನ್ನೂ ಶ್ವಭ್ರವನ್ನೂ ಲಂಘಿಸಬಾರದು. ಮತ್ತು ಮೂತ್ರಪ್ರದೇಶವನ್ನು ಆಸನಾದಿಗಳಿಗೆ ಉಪಯೋಗಿಸಬಾರದು.

ನ ಶೂದ್ರಾಯ ಮತಿಂ ದದ್ಯಾತ್ ಕೃಶರಂ ಪಾಯಸಂ ದಧಿ ।
ನೋಚ್ಛಿಷ್ಟಂ ವಾ ಘೃತಮಧು ನ ಚ ಕೃಷ್ಣಾಜಿನಂ ಹವಿಃ ॥ ೫೩ ॥

ನ ಚೈವಾಸ್ಮೈ ವ್ರತಂ ದದ್ಯಾನ್ನ ಚ ಧರ್ಮಂ ವದೇದ್ಬುಧಃ ।
ನ ಚ ಕ್ರೋಧವಶಂ ಗಚ್ಛೇದ್ದ್ವೇಷಂ ರಾಗಂ ಚ ವರ್ಜಯೇತ್॥ ೫೪ ॥

ಲೋಭಂ ದಂಭಂ ತಥಾ ವರ್ಜ್ಯಂ ಯತ್ನಾದ್ವಿಜ್ಞಾನಕುತ್ಸನಮ್ ।
ಮಾನಂ ಮೋಹಂ ತಥಾ ಕ್ರೋಧಂ ದ್ವೇಷಂ ಚ ಪರಿವರ್ಜಯೇತ್ ॥

ನ ಕುರ್ಯಾತ್ ಕಸ್ಯ ಚಿತ್ಪೀಡಾಂ ಸುತಂ ಶಿಷ್ಯಂ ಚ ತಾಡಯೇತ್ ।
ನ ಹೀನಾನುಪಸೇವೇತ ನ ಚ ತೀಕ್ಷ್ಣಮತೀನ್ ಕ್ವಚಿತ್ ॥ ೫೬ ॥

ನಾತ್ಮಾನಂ ಚಾವಮನ್ಯೇತ ದೈನ್ಯಂ ಯತ್ನೇನ ವರ್ಜಯೇತ್ ।
ನ ಚಾಶಿಷ್ಟಂ ನ ಸತ್ಕುರ್ಯಾನ್ನಾತ್ಮಾನಂ ಶಂಸಯೇದ್ಬುಧಃ ॥ ೫೭ ॥

---

೫೩. ಶೂದ್ರನಿಗೆ ಶಾಸ್ತ್ರಾರ್ಥವಿವೇಕೋಪದೇಶ, ಕೃಶರ, ಪಾಯಸ, ದಧಿ, ಉಚ್ಛಿಷ್ಟ, ಘೃತ, ಮಧು, ಕೃಷ್ಣಾಜಿನ ಮತ್ತು ಹವಿಸ್ಸುಗಳನ್ನು ಕೊಡಬಾರದು.

೫೪. ಬುಧನ ಶೂದ್ರನಿಗೆ ವ್ರತೋಪದೇಶವನ್ನೂ ಧರ್ಮೋಪದೇಶವನ್ನೂ ಕೊಡಬಾರದು. ಅಧಿಕವಾಗಿ ಕ್ರೋಧ-ರಾಗ-ದ್ವೇಷಗಳ ಆವೇಶವನ್ನು ಹೊಂದಬಾರದು. ಅವುಗಳನ್ನು ವರ್ಜಿಸಬೇಕು.

೫೫. ಲೋಭ, ದಂಭ, ಈರ್ಷ್ಯೆ, ವಿಜ್ಞಾನನಿಂದೆ, ಮಾನ, ಮೋಹ, ಕ್ರೋಧ, ಮತ್ತು ದ್ವೇಷಗಳೆಂಬ ದೋಷಗಳನ್ನು ಯತ್ನದಿಂದ ವರ್ಜಿಸಬೇಕು.

೫೬. ಯಾವ ವ್ಯಕ್ತಿಗೂ ಪೀಡೆಯನ್ನು ಮಾಡಬಾರದು. ಪುತ್ರ ಮತ್ತು ಶಿಷ್ಯರನ್ನು ಶಿಕ್ಷಿಸಬೇಕು. ಹೀನಜನರನ್ನೂ, ಉಗ್ರಮತಿಯುಳ್ಳವರನ್ನೂ ಯಾವಾಗಲೂ ಸೇವಿಸಬಾರದು.

೫೭. ಬುಧನು, ತನ್ನನ್ನು ಅವಮಾನದಿಂದ ನೋಡಬಾರದು. ಹಾಗು ದೈನ್ಯವನ್ನು ಯತ್ನದಿಂದ ವರ್ಜಿಸಬೇಕು. ಶಿಷ್ಟನಲ್ಲದವನನ್ನು ಸತ್ಕರಿಸಬಾರದು. ಮತ್ತು ತನ್ನನ್ನು ಶ್ಲಾಘಿಸಬಾರದು.

ನ ನಖೈರ್ವಿಲಿಖೇದ್ಭೂಮಿಂ ಗಾಂ ಚ ಸಂವೇಶಯೇನ್ನ ಹಿ ।
ನ ನದೀಷು ನದೀಂ ಬ್ರೂಯಾತ್ಪರ್ವತೇ ನ ಚ ಪರ್ವತಾನ್ ॥ ೫೮ ॥

ಆವಸೇತ್ತೇನ ನೈವಾಪಿ ನ ತ್ಯಜೇತ್ ಸಹಯಾಯಿನಮ್ ।
ನಾವಗಾಹೇದಪೋ ನಗ್ನೋ ವಹ್ನಿಂ ಚಾಪಿ ವ್ರಜೇತ್ಪದಾ ॥ ೫೯ ॥

ಶಿರೋಽಭ್ಯಂಗಾವಶಿಷ್ಟೇನ ತೈಲೇನಾಂಗಂ ನ ಲೇಪಯೇತ್ ।
ನ ಶಸ್ತ್ರಸರ್ಪೈಃ ಕ್ರೀಡೇತ ಸ್ವಾನಿ ಖಾನಿ ಚ ನ ಸ್ಪೃಶೇತ್ ॥ ೬೦ ॥

ರೋಮಾಣಿ ಚ ರಹಸ್ಯಾನಿ ನಾಶಿಷ್ಟೇನ ಸಹ ವ್ರಜೇತ್ ।
ನ ಪಾಣಿಪಾದಾವಗ್ನೌ ಚ ಚಾಪಲಾನಿ ಸಮಾಶ್ರಯೇತ್ ॥ ೬೧ ॥

---

೫೮. ಉಗುರಿನಿಂದ ಭೂಮಿಯನ್ನು ಗೀಚಬಾರದು, ಹಸುವನ್ನು ಶಯನ ಮಾಡಿಸಬಾರದು, ಒಂದು ನದೀಸಮೀಪದಲ್ಲಿ ಮತ್ತೊಂದು ನದಿಯನ್ನೂ ಒಂದು ಪರ್ವತ ಸಮೀಪದಲ್ಲಿ ಮತ್ತೊಂದು ಪರ್ವತವನ್ನೂ ಕೀರ್ತಿಸಬಾರದು.

೫೯. ನದೀ-ಪರ್ವತಗಳನ್ನು ಅತಿಕ್ರಮಿಸುವವನ ಸಂಗಡ ಸಹವಾಸ ಮಾಡಬಾರದು, ಸಹಾಯಕನನ್ನು ಬಿಡಬಾರದು, ನಗ್ನನಾಗಿ ಜಲವನ್ನು ಪ್ರವೇಶಿಸ ಬಾರದು. ಮತ್ತು ಅಗ್ನಿಯನ್ನು ಪಾದದಿಂದ ಸ್ಪರ್ಶಮಾಡಬಾರದು.

೬೦. ಶಿರಸ್ಸಿಗೆ ಒತ್ತಿ ಮಿಕ್ಕಿದ ತೈಲದಿಂದ ಶರೀರವನ್ನು ಲೇಪಿಸಬಾರದು. ಶಸ್ತ್ರಗಳನ್ನೂ ಸರ್ಪಗಳನ್ನೂ ಹಿಡಿದು ಕ್ರೀಡಿಸಬಾರದು. ತನ್ನ ಇಂದ್ರಿಯಗಳನ್ನು ಸ್ಪರ್ಶಿಸಬಾರದು.

೬೧. ರೋಮ-ರಹಸ್ಯಾವಯವಗಳನ್ನು ಸ್ಪರ್ಶ ಮಾಡಬಾರದು, ಅಶಿಷ್ಟ ನೊಡನೆ ನಡೆಯಬಾರದು, ಹಸ್ತಪಾದಗಳ ಚಾಪಲವನ್ನು ಅಗ್ನಿಸಮೀಪದಲ್ಲಿ ಮಾಡ ಬಾರದು.

ನ ಶಿಶ್ನೋದರಯೋರ್ನಿತ್ಯಂ ನ ಚ ಶ್ರವಣಯೋಃ ಕ್ವಚಿತ್ ।
ನ ಚಾಂಗನಖವಾದಂ ವೈ ಕುರ್ಯಾನ್ನಾಂಜಲಿನಾ ಪಿಬೇತ್ ॥ ೬೨ ॥

ನಾಭಿಹನ್ಯಾಜ್ಜಲಂ ಪದ್ಭ್ಯಾಂ ಪಾಣಿನಾ ವಾ ಕದಾಚನ ।
ನ ಶಾತಯೇದಿಷ್ಟಕಾಭಿಃ ಫಲಾನಿ ಸಫಲಾನಿ ಚ ॥ ೬೩ ॥

ನ ಮ್ಲೇಚ್ಛಭಾಷಣಂ ಶಿಕ್ಷೇನ್ನಾಕರ್ಷೇಚ್ಚ ಪದಾಸನಮ್ ।
ನ ಭೇದನಮಥಿಸ್ಫೋಟಂ ಛೇದನಂ ವಾ ವಿಲೇಖನಮ್ ॥ ೬೪ ॥

ಕುರ್ಯಾದ್ವಿಮರ್ದನಂ ಧೀಮಾನ್ ನಾಕಸ್ಮಾದೇವ ನಿಷ್ಫಲಮ್ ।
ನೋತ್ಸಂಗೇ ಭಕ್ಷಯೇದ್ಭಕ್ಷ್ಯಾನ್ ವೃಥಾ ಚೇಷ್ಟಾಂ ಚ ನಾಚರೇತ್ ॥

---

೬೨. ಶಿಶ್ನೇಂದ್ರಿಯ, ಉದರ ಮತ್ತು ಶ್ರವಣೇಂದ್ರಿಯಗಳ ಚಾಪಲವನ್ನು ಬಿಡಬೇಕು. ಹಾಗು ಅಂಗ-ನಖಗಳ ಶಬ್ದವನ್ನು ಮಾಡಬಾರದು. ಮತ್ತು ಅಂಜಲಿಯಿಂದ ಪಾನಮಾಡಬಾರದು.

೬೩. ಜಲವನ್ನು ಕಾಲಿನಿಂದಾಗಲಿ ಕೈಯಿಂದಾಗಲಿ ಯಾವಾಗಲೂ ಹೊಡೆಯಬಾರದು, ಇಟ್ಟಿಗೆಯ ಚೂರುಗಳಿಂದ ಫಲ-ಸಫಲವಾದ ಕುಸುಮ ಮುಂತಾದುದನ್ನು ಬೀಳಿಸಬಾರದು.

೬೪. ಮ್ಲೇಚ್ಛ ಭಾಷೆಯನ್ನು ಅಭ್ಯಾಸ ಮಾಡಬಾರದು. ಆಸನವನ್ನು ಪಾದವಿಂದ ಸೆಳೆಯಬಾರದು. ಭೇದನ, ಚಿಟಿಕೆಯನ್ನು ಹೊಡೆಯುವುದು, ಛೇದನ ಮತ್ತು ಗೀರುವುದು ಮುಂತಾದ ವ್ಯಾಪಾರಗಳನ್ನು ಬಿಡಬೇಕು.

೬೫. ಜ್ಞಾನಿಯು ಆಕಸ್ಮಿಕವಾಗಿ ನಿಷ್ಫಲವಾದ ವಿಮರ್ದನವನ್ನು ಮಾಡಬಾರದು. ತೊಡೆಯಲ್ಲಿಟ್ಟುಕೊಂಡು ತಿಂಡಿಯನ್ನು ತಿನ್ನಬಾರದು, ಹಾಗು ವ್ಯರ್ಥ ಚೇಷ್ಟೆಯನ್ನು ಮಾಡಬಾರದು.

ನ ನೃತ್ಯೇದಥವಾ ಗಾಯೇನ್ನ ವಾದಿತ್ರಾಣಿ ವಾದಯೇತ್ ।
ನ ಸಂಹತಾಭ್ಯಾಂ ಪಾಣಿಭ್ಯಾಂ ಕಂಡೂಯೇದಾತ್ಮನಃ ಶಿರಃ ॥ ೬೬ ॥

ನ ಲೌಕಿಕೈಃ ಸ್ತವೈರ್ದೇವಾಂಸ್ತೋಷಯೇದ್ಭೇಷಜೈರಪಿ ।
ನಾಕ್ಷೈಃ ಕ್ರೀಡೇನ್ನ ಧಾವೇತ ನಾಪ್ಸು ವಿಣ್ಮೂತ್ರಮಾಚರೇತ್ ॥ ೬೭ ॥

ನೋಚ್ಛಿಷ್ಟಃ ಸಂವಿಶೇನ್ನಿತ್ಯಂ ನ ನಗ್ನಃ ಸ್ನಾನಮಾಚರೇತ್ ।
ನ ಗಚ್ಛನ್ನ ಪಠೇದ್ವಾಪಿ ನ ಚೈವ ಸ್ವಶಿರಃ ಸ್ಪೃಶೇತ್ ॥ ೬೮ ॥

ನ ದಂತೈರ್ನಖರೋಮಾಣಿ ಛಿಂದ್ಯಾತ್ಸುಪ್ತಂ ನ ಬೋಧಯೇತ್ ।
ನ ಬಾಲಾತಪಮಾಸೇವೇತ್ ಪ್ರೇತಧೂಮಂ ವಿವರ್ಜಯೇತ್ ॥ ೬೯ ॥

---

೬೬. ನೃತ್ಯವನ್ನೂ ಗೀತವನ್ನೂ ಮತ್ತು ವಾದ್ಯಗಳನ್ನು ಬಾರಿಸುವುದನ್ನೂ ಮಾಡಬಾರದು, ಹಾಗು ಸೇರಿಸಿದ ಎರಡು ಹಸ್ತಗಳಿಂದ ಶಿರವನ್ನು ಕಂಡೂಯನ ಮಾಡಬಾರದು.

೬೭. ಲೌಕಿಕವಾದ ಸ್ತೋತ್ರಗಳಿಂದಲೂ, ಬಾಹ್ಯವಾದಗಳಿಂದಲೂ ದೇವತೆಗಳನ್ನು ಸಂತೋಷಪಡಿಸಬಾರದು. ಪಗಡೆ-ದಾಳಗಳಿಂದ ಕ್ರೀಡಿಸಬಾರದು, ಧಾವಿಸಬಾರದು ಮತ್ತು ಜಲದಲ್ಲಿ ಮಲ-ಮೂತ್ರಗಳನ್ನು ವಿಸರ್ಜಿಸಬಾರದು.

೬೮. ಉಚ್ಛಿಷ್ಟನಾಗಿ ಯಾವಾಗಲೂ ಶಯನಮಾಡಲಾಗದು, ನಗ್ನನಾಗಿ ಸ್ನಾನವನ್ನು ಮಾಡಬಾರದು, ನಡೆಯುತ್ತ ಪಠಿಸಬಾರದು. ಮತ್ತು ತನ್ನ ಶಿರವನ್ನು ಸ್ಪರ್ಶಿಸಬಾರದು.

೬೯. ದಂತಗಳಿಂದ ನಖ-ರೋಮಗಳನ್ನು ಛೇದಿಸಬಾರದು, ನಿದ್ರೆಮಾಡುತ್ತಿದ್ದವನನ್ನು ಎಚ್ಚರಮಾಡಬಾರದು, ಪ್ರಾತಃಕಾಲದ ಬಿಸಿಲನ್ನು ಸೇವಿಸಬಾರದು, ಪ್ರೇತಧೂಮವನ್ನು ದೂರಮಾಡಬೇಕು.

ನೈಕಃ ಸುಪ್ಯಾಚ್ಛೂನ್ಯಗೃಹೇ ಸ್ವಯಂ ನೋಪಾನಹೌ ಹರೇತ್ ।
ನಾಕಾರಣಾದ್ವಾ ನಿಷ್ಠೀವೇನ್ನ ಬಾಹುಭ್ಯಾಂ ನದೀಂ ತರೇತ್ ॥ ೭೦ ॥

ನ ಪಾದಕ್ಷಾಲನಂ ಕುರ್ಯಾತ್ ಪಾದೇನೈವ ಕದಾಚನ ।
ನಾಗ್ನೌ ಪ್ರತಾಪಯೇತ್ಪಾದೌ ನ ಕಾಂಸ್ಯೇ ಧಾವಯೇದ್ಬುಧಃ ॥ ೭೧ ॥

ನಾತಿಪ್ರಸಾರಯೇದ್ದೇವಂ ಬ್ರಾಹ್ಮಣಾನ್ ಗಾಮಥಾಪಿ ವಾ ।
ವಾಯ್ವಗ್ನಿಗುರುವಿಪ್ರಾನ್ ವಾ ಸೂರ್ಯಂ ವಾ ಶಶಿನಂ ಪ್ರತಿ ॥ ೭೨ ॥

ಅಶುದ್ಧಃ ಶಯನಂ ಯಾನಂ ಸ್ವಾಧ್ಯಾಯಂ ಸ್ನಾನಭೋಜನಮ್ ।
ಬಹಿರ್ನಿಷ್ಕ್ರಮಣಂ ಚೈವ ನ ಕುರ್ವೀತ ಕಥಂ ಚನ ॥ ೭೩ ॥

---

೭೦. ಶೂನ್ಯ ಗೃಹದಲ್ಲಿ ಏಕಾಕಿಯಾಗಿ ನಿದ್ರಿಸಬಾರದು ತಾನೇ ಪಾದುಕೆಗಳನ್ನು ಒಯ್ಯಬಾರದು, ನಿಷ್ಕಾರಣವಾಗಿ ಉಗುಳಬಾರದು ಮತ್ತು ಬಾಹುಗಳಿಂದ ಈಜುತ ನದಿಯನ್ನು ದಾಟಬಾರದು.

೭೧. ಪಾದದಿಂದ ಪಾದವನ್ನು ಯಾವಾಗಲೂ ಉಜ್ಜಿ ತೊಳೆಯಬಾರದು. ಅಗ್ನಿಯಲ್ಲಿ ಪಾದಗಳನ್ನು ತಪಿಸಬಾರದು ಮತ್ತು ಕಾಂಸ್ಯಪಾತ್ರದಲ್ಲಿ ಪಾದಗಳನ್ನು ಕ್ಷಾಲನಮಾಡಬಾರದು.

೭೨. ಬ್ರಾಹ್ಮಣ, ಗೋವು, ದೇವತೆ, ವಾಯು, ಗುರು, ಅಗ್ನಿ, ಸೂರ್ಯ, ಮತ್ತು ಚಂದ್ರ-ಮುಂತಾದ ಪೂಜ್ಯವಸ್ತುಗಳ ಎದುರಾಗಿ ಪಾದಗಳನ್ನು ಚಾಚಿಕೊಂಡು ಇರಬಾರದು.

೭೩. ಅಶುದ್ಧನಾಗಿ ಶಯನ, ಪ್ರಯಾಣ, ಸ್ವಾಧ್ಯಾಯ, ಸ್ನಾನ, ಭೋಜನ ಮತ್ತು ಬಾಹ್ಯಾಟನ ವ್ಯಾಪಾರಗಳನ್ನು ಯಾವಾಗಲೂ ಎಂತಹ ನಿಮಿತ್ತದಿಂದಲೂ ಆಚರಿಸಬಾರದು.

ಸ್ವಪ್ನಮಧ್ಯಯನಂ ಯಾನಮುಚ್ಚಾರಂ ಭೋಜನಂ ಗತಿಮ್ ।
ಉಭಯೋಃ ಸಂಧ್ಯಯೋರ್ನಿತ್ಯಂ ಮಧ್ಯಾಹ್ನೇ ತು ವಿವರ್ಜಯೇತ್ ॥

ನ ಸ್ಪೃಶೇತ್ ಪಾಣಿನೋಚ್ಛಿಷ್ಟೋ ವಿಪ್ರೋ ಗೋಬ್ರಾಹ್ಮಣಾನಲಾನ್ ।
ನ ಚೈವಾನ್ನಂ ಪದಾ ವಾಪಿ ನ ದೇವಪ್ರತಿಮಾಂ ಸ್ಪೃಶೇತ್ ॥ ೭೫ ॥

ನಾಶುದ್ಧೋಽಗ್ನಿಂ ಪರಿಚರೇನ್ನ ದೇವಾನ್ ಕೀರ್ತಯೇದೃಷೀನ್ ।
ನಾವಗಾಹೇದಗಾಧಾಂಬು ಧಾರಯೇನ್ನಾಗ್ನಿಮೇಕತಃ ॥ ೭೬ ॥

ನ ವಾಮಹಸ್ತೇನೋದ್ಧೃತ್ಯ ಪಿಬೇದ್ವಕ್ತ್ರೇಣ ವಾ ಜಲಮ್ ।
ನೋತ್ತರೇದನುಪಸ್ಪೃಶ್ಯ ನಾಪ್ಸು ರೇತಃ ಸಮುತ್ಸೃಜೇತ್ ॥ ೭೭ ॥

---

೭೪. ಸ್ವಪ್ನ, ಅಧ್ಯಯನ, ಯಾನ, ಮಲ-ಮೂತ್ರೋತ್ಸರ್ಗ, ಭೋಜನ ಗಮನ, ಮುಂತಾದ ಕಾರ್ಯಗಳನ್ನು ಎರಡು ಸಂಧ್ಯಾಸಮಯಗಳಲ್ಲಿಯೂ ನಡು ಮಧ್ಯಾಹ್ನಸಮಯದಲ್ಲಿಯೂ ವರ್ಜಿಸಬೇಕು.

೭೫. ವಿಪ್ರನು ಉಚ್ಛಿಷ್ಟನಾಗಿ ಗೋವು-ಬ್ರಾಹ್ಮಣ-ಅಗ್ನಿಗಳನ್ನು ಹಸ್ತದಿಂದ ಸ್ಪರ್ಶಿಸಬಾರದು, ಹಾಗು ಅನ್ನ, ದೇವಪ್ರತಿಮೆಗಳನ್ನು ಪಾದದಿಂದ ಸ್ಪರ್ಶ ಮಾಡಬಾರದು.

೭೬. ಅಶುದ್ಧನಾಗಿದ್ದು ಅಗ್ನಿಯನ್ನು ಸೇವಿಸಬಾರದು, ಅಶುದ್ಧನಾಗಿ ದೇವತೆ-ಋಷಿಗಳನ್ನು ಕೀರ್ತಿಸಬಾರದು, ಅಗಾಧವಾದ ಜಲವನ್ನು ಪ್ರವೇಶಮಾಡಬಾರದು. ಮತ್ತು ನಿರ್ನಿಮಿತ್ತವಾಗಿ ಅಗ್ನಿಯನ್ನು ಧರಿಸಬಾರದು.

೭೭. ವಾಮಹಸ್ತದಿಂದ ಎತ್ತಿ ಜಲವನ್ನು ಪಾನಮಾಡಬಾರದು, ಮುಖದಿಂದಲೆ ತೆಗೆದುಕೊಂಡು ಪಾನಮಾಡಬಾರದು, ಆಚಮನಮಾಡದೆ ಜಲರಾಶಿಯನ್ನು ದಾಟಬಾರದು ಮತ್ತು ಜಲದಲ್ಲಿ ರೇತಸ್ಸನ್ನು ಬಿಡಬಾರದು.

ಅಮೇಧ್ಯಲಿಪ್ತಮನ್ಯದ್ವಾ ಲೋಹಿತಂ ವಾ ವಿಷಾಣಿ ವಾ ।
ವ್ಯತಿಕ್ರಮೇನ್ನ ಸ್ರವಂತೀಂ ನಾಪ್ಸು ಮೈಥುನಮಾಚರೇತ್ ॥ ೭೮ ॥

ಚೈತ್ಯಂ ವೃಕ್ಷಂ ನ ವೈ ಛಿಂದ್ಯಾನ್ನಾಪ್ಸು ಷ್ಠೀವನಮುತ್ಸೃಜೇತ್ ।
ನಾಸ್ಥಿಭಸ್ಮಕಪಾಲಾನಿ ನ ಕೇಶಾನ್ನ ಚ ಕಂಟಕಾನ್ ॥ ೭೯ ॥

ತುಷಾಂಗಾರಕರೀಷಂ ವಾ ನಾಧಿತಿಷ್ಠೇತ್ ಕದಾಚನ । ॥೮೦॥

ನ ಚಾಗ್ನಿಂ ಲಂಘಯೇದ್ಧೀಮಾನ್ ನೋಪದಧ್ಯಾದಧಃ ಕ್ವಚಿತ್
ನ ಚೈನಂ ಪಾದತಃ ಕುರ್ಯಾನ್ಮುಖೇನ ನ ಧಮೇದ್ಬುಧಃ । ॥ ೮೧ ॥

ನ ಕೂಪಮವರೋಹೇತ ನಾಚಕ್ಷೀತಾಶುಚಿಃ ಕ್ವಚಿತ್
ಅಗ್ನೌ ನ ಪ್ರಕ್ಷಿಪೇದಗ್ನಿಂ ನಾದ್ಭಿಃ ಪ್ರಶಮಯೇತ್ತಥಾ । ॥ ೮೨ ॥

---

೭೮. ಅಮೇಧ್ಯದಿಂದ ಲಿಪ್ತವಾದ ಮತ್ತೊಂದು ವಸ್ತುವನ್ನೂ, ರಕ್ತವನ್ನೂ ಕೊಂಬುಳ್ಳ ಪ್ರಾಣಿಯನ್ನೂ ಸ್ಪರ್ಶಿಸಬಾರದು. ನಿಷ್ಕಾರಣವಾಗಿ ನದಿಯನ್ನು ಅತಿಕ್ರಮಿಸಬಾರದು ಮತ್ತು ಜಲದಲ್ಲಿ ಮೈಥುನವನ್ನು ಆಚರಿಸಬಾರದು.

೭೯. ಚತುಷ್ಪಥ ವೃಕ್ಷಗಳನ್ನು ಛೇದಿಸಬಾರದು, ಜಲದಲ್ಲಿ ಉಗುಳಬಾರದು, ಅಸ್ಥಿ, ಭಸ್ಮ, ಕಪಾಲ ಕೇಶ, ಮತ್ತು ಕಂಟಕಗಳ ಮೇಲೇರಿ ನಿಂತಿರಬಾರದು.

೮೦. ಹಾಗು ದಹಿಸುವ ಅಂಗಾರವನ್ನೂ ಶುಷ್ಕ ಗೋಮಯವನ್ನೂ ಕೂಡ ಯಾವಾಗಲೂ ಏರಿಕೊಂಡು ಸ್ಥಿತಿ-ಗತಿಗಳನ್ನು ವರ್ಜಿಸಬೇಕು.

೮೧. ಅಗ್ನಿಯನ್ನು ಲಂಘಿಸಬಾರದು ಅಗ್ನಿಯನ್ನು ಉಪಧಾನ ಸ್ಥಳದಲ್ಲಿಟ್ಟುಕೊಳ್ಳಬಾರದು. ಮತ್ತು ಪಾದಭಾಗದಲ್ಲಿಡಬಾರದು ಹಾಗು ಅಗ್ನಿಯನ್ನು ಮುಖದಿಂದ ಗಾಳಿಹಾಕಿ ಪ್ರಜ್ವಲಿಸಬಾರದು.

೮೨. ಬಾವಿಗೆ ಇಳಿಯಬಾರದು, ಅಶುಚಿಯಾಗಿ ಮಾತನಾಡಬಾರದು, ಅಗ್ನಿಯಲ್ಲಿ ಅಗ್ನಿಯನ್ನು ಹಾಕಬಾರದು, ಮತ್ತು ಜಲವನ್ನು ಸುರಿದು ಅಗ್ನಿಯನ್ನು ಆರಿಸಬಾರದು.

**ಸುಹೃನ್ಮರಣಮಾರ್ತಿಂ ವಾ ನ ಸ್ವಯಂ ಶ್ರಾವಯೇತ್ಪರಾನ್ ।**
**ಅಪಣ್ಯಮಥ ಪಣ್ಯಂ ವಾ ವಿಕ್ರಯೇ ನ ಪ್ರಯೋಜಯೇತ್ ॥ ೮೩ ॥**

**ನ ವಹ್ನಿಂ ಮುಖನಿಶ್ವಾಸೈರ್ಜ್ವಾಲಯೇನ್ನಾಶುಚಿರ್ಬುಧಃ ।**
**ಪುಣ್ಯಸ್ನಾನೋದಕಸ್ನಾನೇ ಸೀಮಾಂತಂ ವಾ ಕೃಷೇನ್ನ ತು ॥ ೮೪ ॥**

**ನ ಭಿಂದ್ಯಾತ್ ಪೂರ್ವಸಮಯಂ ಸತ್ಯೋಪೇತಂ ಕದಾ ಚನ ।**
**ಪರಸ್ಪರಂ ಪಶೂನ್ ವ್ಯಾಲಾನ್ ಪಕ್ಷಿಣೋ ನಾವಬೋಧಯೇತ್ ॥ ೮೫ ॥**

**ಪರಬಾಧಾಂ ನ ಕುರ್ವೀತ ಜಲಪಾನಾಯನಾದಿಭಿಃ ।**
**ಕಾರಯಿತ್ವಾ ಸುಕರ್ಮಾಣಿ ಕಾರೂನ್ ಪಶ್ಚಾನ್ನ ವರ್ಜಯೇತ್ ॥ ೮೬ ॥**

---

೮೩. ಮಿತ್ರನ ಮರಣ ಮತ್ತು ಪೀಡಾ ವೃತ್ತಾಂತಗಳನ್ನು ತಾನಾಗಿ ಪರರಿಗೆ ತಿಳಿಸಬಾರದು, ವಿಕ್ರಯ ವ್ಯವಹಾರದಲ್ಲಿ ಅನರ್ಹವಸ್ತು ವಿಕ್ರಯವನ್ನೂ ಮಾಯೆಯಿಂದ ವಸ್ತು ವಿಕ್ರಯವನ್ನೂ ಬಿಡಬೇಕು.

೮೪. ಬುಧನು ಅಶುಚಿಯಾಗಿ ಮುಖನಿಶ್ವಾಸಗಳಿಂದ ಅಗ್ನಿಯನ್ನು ಪ್ರಜ್ವಲನ ಮಾಡಬಾರದು, ಪುಣ್ಯಸ್ನಾನ, ಉದಕಸ್ನಾನ ಮತ್ತು ಸೀಮಾಭಾಗಗಳನ್ನು ಅತಿಕ್ರಮಿಸಿ ನಡೆಯಬಾರದು.

೮೫. ಸತ್ಯದಿಂದ ಕೂಡಿದ ಪೂರ್ವದಲ್ಲಿ ಮಾಡಿದ ಶಪಥ ಬಂಧವನ್ನು ಯಾವಾಗಲೂ ಭೇದಿಸಬಾರದು, ಪಶು, ದುಷ್ಟಗಜ, ಪಕ್ಷಿ ಮುಂತಾದುವುಗಳಲ್ಲಿ ಒಂದರನ್ನೊಂದನ್ನು ಬಿಡಬಾರದು.

೮೬. ಜಲಪಾನ, ಗಮನಾದಿಗಳಿಂದ ಪರರಿಗೆ ಬಾಧೆಯನ್ನು ಉಂಟುಮಾಡಬಾರದು, ಶಿಲ್ಪಕಾರರಿಂದ ಕಾರ್ಯಗಳನ್ನು ಮಾಡಿಸಿಕೊಂಡು ಅನಂತರದಲ್ಲಿ ಹಾಗೆ ಅವರನ್ನು ವರ್ಜಿಸಬಾರದು.

ಸಾಯಂ ಪ್ರಾತರ್ಗೃಹದ್ವಾರಾನ್ ಭಿಕ್ಷಾರ್ಥಂ ನಾವಘಾಟಯೇತ್ ।
ಬಹಿರ್ಮಾಲ್ಯಂ ಬಹಿರ್ಗಂಧಂ ಭಾರ್ಯಯಾ ಸಹಭೋಜನಮ್ ।
ವಿಗೃಹ್ಯವಾದಂ ಕುದ್ವಾರಪ್ರವೇಶಂ ಚ ವಿವರ್ಜಯೇತ್ ॥ ೮೭ ॥

ನ ಖಾದನ್ ಬ್ರಾಹ್ಮಣಸ್ತಿಷ್ಠೇನ್ನ ಜಲ್ಪನ್ ನ ಹಸನ್ ಬುಧಃ ।
ಸ್ವಮಗ್ನಿಂ ನೈವ ಹಸ್ತೇನ ಸ್ಪೃಶ್ಯೇನ್ನಾಪ್ಸು ಚಿರಂ ವಸೇತ್ ॥ ೮೮ ॥

ನ ಪಕ್ಷಕೇಣೋಪಧಮೇನ್ ನ ಶೂರ್ಪೇಣ ನ ಪಾಣಿನಾ ।
ಮುಖೇ ನೈವ ಧಮೇದಗ್ನಿಂ ಮುಖಾದಗ್ನಿರಜಾಯತಃ ॥ ೮೯ ॥

ಪರಸ್ತ್ರಿಯಂ ನ ಭಾಷೇತ ನಾಯಾಜ್ಯಂ ಯಾಜಯೇದ್ದ್ವಿಜಃ ।
ನೈಕಶ್ಚರೇನ್ ಸಭಾಂ ವಿಪ್ರಸಮವಾಯಂ ಚ ವರ್ಜಯೇತ್ ॥ ೯೦ ॥

---

೮೭. ಭಿಕ್ಷುಕರು ಭಿಕ್ಷೆಗೆ ಬರುವರೆಂಬ ಆತಂಕದಿಂದ ಸಾಯಂಕಾಲ ಪ್ರಾತಃ ಕಾಲಗಳಲ್ಲಿ ಮನೆಗಳ ಬಾಗಿಲನ್ನು ಮುಚ್ಚಿಕೊಂಡಿರಬಾರದು.

೮೮. ಹೊರಗೆ ಕಾಣಿಸುವಂತೆ ಗಂಧ ಮಾಲ್ಯಧಾರಣ, ಭಾರ್ಯೆಯೊಡನೆ ಸಹ ಭೋಜನ, ಜಗಳವಾಡುತ್ತ ವಾದ ಮತ್ತು ದ್ವಾರವಲ್ಲದ ಸ್ಥಳದಿಂದ ಪ್ರವೇಶಿಸುವುದು ಇವುಗಳನ್ನು ವರ್ಜಿಸಬೇಕು.

೮೯. ಬುಧನು ತಿನ್ನುತ್ತ ನಿಂತಿರಬಾರದು. ನಗುತ್ತ ಜಪಮಾಡಬಾರದು. ಮತ್ತು ಅಗ್ನಿಯನ್ನು ಹಸ್ತದಿಂದ ಸ್ಪರ್ಶಮಾಡಬಾರದು ಮತ್ತು ಜಲದಲ್ಲಿ ಬಹಳ ಹೊತ್ತು ವಾಸಮಾಡಬಾರದು. ಅಗ್ನಿಯನ್ನು ಪಾರ್ಶ್ವ ಪ್ರಾಂತದಿಂದಲೂ ಮತ್ತು ಶೂರ್ಪದಿಂದಲೂ ಹಸ್ತದಿಂದಲೂ ಪ್ರಜ್ವಲಿಸಬಾರದು, ಮುಖದಿಂದ ಮಾತ್ರ ಅಗ್ನಿಯನ್ನು ಪ್ರಜ್ವಲಿಸಬೇಕು. ಮುಖದಿಂದ ಅಗ್ನಿಯು ಹುಟ್ಟಿರುವುದು.

೯೦. ದ್ವಿಜನು ಪರಸ್ತ್ರೀಯೊಡನೆ ಸಂಭಾಷಿಸಬಾರದು, ಯಾಗಾನರ್ಹನಿಗೆ ಯಾಗಮಾಡಿಸಬಾರದು, ಏಕಾಕಿಯಾಗಿ ಸಭೆಯನ್ನು ಕುರಿತು ಹೋಗಬಾರದು. ವಿಪ್ರಸಂಘವನ್ನು ವರ್ಜಿಸಬೇಕು.

ದೇವತಾಯತನಂ ಗಚ್ಛೇತ್ ಕದಾಚಿನ್ನಾಪ್ರದಕ್ಷಿಣಮ್ । ॥ ೯೧ ॥

ನ ವೀಜಯೇದ್ವಾ ವಸ್ತ್ರೇಣ ನ ದೇವಾಯತನೇ ಸ್ವಪೇತ್ ।
ನೈಕೋಽಧ್ವಾನಂ ಪ್ರಪದ್ಯೇತ ನಾಧಾರ್ಮಿಕಜನೈಃ ಸಹ ॥ ೯೨ ॥

ನ ವ್ಯಾಧಿದೂಷಿತೈರ್ವಾಪಿ ನ ಶೂದ್ರೈಃ ಪತಿತೈರ್ನ ವಾ ।
ನೋಪಾನದ್ವರ್ಜಿತೋಽಧ್ವಾನಂ ಜಲಾದಿರಹಿತಸ್ತಥಾ ॥ ೯೩ ॥

ನ ರಾತ್ರಾವರಿಣಾ ಸಾರ್ಧಂ ನ ವಿನಾ ಚ ಕಮಂಡಲುಮ್ ।
ನಾಗ್ನಿಗೋಬ್ರಾಹ್ಮಣಾದೀನಾಮಂತರೇಣ ವ್ರಜೇತ್ ಕ್ವಚಿತ್ ॥ ೯೪ ॥

ನಿವತ್ಸ್ಯಂತೀಂ ನ ವನಿತಾಮತಿಕ್ರಾಮೇದ್ದ್ವಿಜೋತ್ತಮಾಃ
ನ ನಿಂದೇದ್ಯೋಗಿನಃ ಸಿದ್ಧಾ ಗುಣಿನೋ ವಾ ಯತೀಂಸ್ತಥಾ ॥ ೯೫ ॥

---

೯೧. ನಡೆಯುವಾಗ ಮಾರ್ಗದಲ್ಲಿರುವ ದೇವಾಲಯವನ್ನು ಯಾವಾಗಲೂ ಅಪ್ರದಕ್ಷಿಣಾಕಾರವಾಗಿ ಬರುವಂತೆ ನಡೆಯಬಾರದು.

೯೨. ವಸ್ತ್ರದಿಂದ ಗಾಳಿಹಾಕಬಾರದು. ದೇವಾಲಯದಲ್ಲಿ ನಿದ್ರಿಸಬಾರದು. ಏಕಾಕಿಯಾಗಿ ದಾರಿ ನಡೆಯಬಾರದು, ಮತ್ತು ಅಧಾರ್ಮಿಕ ಜನರೊಡನೆ ಸಂಚರಿಸ ಬಾರದು.

೯೩. ಹಾಗು ರೋಗದೋಷದಿಂದ ಗ್ರಸ್ತರಾದವರು ಶೂದ್ರರು ಮತ್ತು ಪತಿತರೊಡನೆ ದಾರಿ ನಡೆಯಬಾರದು, ಪಾದರಕ್ಷೆಗಳನ್ನು ಧರಿಸದೆಯೂ ಜಲಾದಿ ಉಪಕರಣಗಳನ್ನು ಇಟ್ಟುಕೊಳ್ಳದೆಯೂ ಪ್ರಯಾಣಮಾಡಬಾರದು.

೯೪. ರಾತ್ರಿ ವೇಳೆಯಲ್ಲಿ ಶತ್ರುವಿನೊಡನೆಯೂ ಜಲಪಾತ್ರವನ್ನು ಧರಿಸದೆಯೂ ಪ್ರಯಾಣ ಮಾಡಬಾರದು. ಅಗ್ನಿ, ಗೋವು, ಬ್ರಾಹ್ಮಣರ ಮಧ್ಯದಲ್ಲಿ ಯಾವಾಗಲೂ ಹೋಗಬಾರದು.

೯೫. ದ್ವಿಜೋತ್ತಮರೇ! ವಾಸ ಮಾಡುತ್ತಿದ್ದ ವನಿತೆಯನ್ನು ಯಾವಾಗಲೂ ಅತಿಕ್ರಮಿಸಬಾರದು, ಯೋಗಿ, ಸಿದ್ಧ, ಗುಣವಂತ, ಮತ್ತು ಯತಿ ಮುಂತಾದ ಮಾನ್ಯಜನರನ್ನು ಯಾವಾಗಲೂ ನಿಂದಿಸಬಾರದು.

ದೇವತಾಯತನೇ ಪ್ರಾಜ್ಞೋ ನ ದೇವಾನಾಂ ಸನ್ನಿಧೌ
ನಾಕ್ರಾಮೇತ್ಕಾಮತಶ್ಛಾಯಾಂ ಬ್ರಾಹ್ಮಣಾನಾಂ ಗವಾಮಪಿ ॥ ೯೬ ॥

ಸ್ವಾಂ ತು ನಾಕ್ರಮಯೇಚ್ಛಾಯಾಂ ಪತಿತಾದ್ಯೈರ್ನ ರೋಗಿಭಿಃ
ನಾಂಗಾರಭಸ್ಮಕೇಶಾದಿಷ್ವಧಿತಿಷ್ಠೇತ್ ಕದಾಚನ ॥ ೯೭ ॥

ವರ್ಜಯೇನ್ಮಾರ್ಜನೀರೇಣುಂ ಸ್ನಾನವಸ್ತ್ರಘಟೋದಕಮ್ ।
ನ ಭಕ್ಷಯೇದಭಕ್ಷ್ಯಾಣಿ ನಾಪೇಯಂ ಚ ಪಿಬೇದ್ದ್ವಿಜಾಃ ॥ ೯೮ ॥

ಇತಿ ಶ್ರೀ ಕೂರ್ಮಪುರಾಣೇ ಏಕೋನಸಪ್ತತಿತಮೋಽಧ್ಯಾಯಃ.

---

೯೬. ಪ್ರಾಜ್ಞನು ದೇವಾಲಯದಲ್ಲಿಯೂ ದೇವತಾ ಸನ್ನಿಧಿಯಲ್ಲಿಯೂ ಗೋವು ಬ್ರಾಹ್ಮಣರ ಛಾಯೆಯನ್ನು ಇಚ್ಛಾಪೂರ್ವಕವಾಗಿ ಅತಿ ಕ್ರಮಿಸಿ ನಡೆಯಬಾರದು.

೯೭. ಪತಿತ-ರೋಗಿ ಮುಂತಾದವರಿಂದ ತನ್ನ ಛಾಯೆಯನ್ನು ಆಕ್ರಮಣ ಮಾಡಿಸಲು ಅವಕಾಶವೀಯಬಾರದು. ಅಂಗಾರ, ಭಸ್ಮ, ಕೇಶಾದಿಗಳನ್ನು ಏರಿ ಯಾವಾಗಲೂ ಇರಬಾರದು.

೯೮. ಮಾರ್ಜನಿಯ ರೇಣುವನ್ನೂ ಸ್ನಾನವಸ್ತ್ರವನ್ನೂ ಘಟದಲ್ಲಿರುವ ಜಲವನ್ನೂ ವರ್ಜಿಸಬೇಕು. ದ್ವಿಜರೆ! ಅಭಕ್ಷ್ಯವನ್ನು ಭಕ್ಷಿಸಬಾರದು ಮತ್ತು ನಿಷಿದ್ಧವಾದ ಪಾನೀಯವನ್ನು ಪಾನಮಾಡಬಾರದು.

ಕೂರ್ಮಪುರಾಣದಲ್ಲಿ ಅರವತ್ತೊಂಭತ್ತನೆಯ ಅಧ್ಯಾಯವು ಮುಗಿದುದು



ಶ್ರೀಃ

# ಕೂರ್ಮಪುರಾಣಂ

---

## ಸಪ್ತತಿತಮೋಽಧ್ಯಾಯಃ.

**ವ್ಯಾಸ ಉವಾಚ :—**

ನಾದ್ಯಾಚ್ಛೂದ್ರಸ್ಯ ವಿಪ್ರೋಽನ್ನಂ ಮೋಹಾದ್ವಾ ಯದಿ ವಾನ್ಯತಃ ।
ಸ ಶೂದ್ರಯೋನಿಂ ವ್ರಜತಿ ಯಸ್ತು ಭುಂಕ್ತೇ ಹ್ಯನಾಪದಿ ॥ ೧ ॥

ಷಣ್ಮಾಸಾನ್ ಯೋ ದ್ವಿಜೋ ಭುಂಕ್ತೇ ಶೂದ್ರಸ್ಯಾನ್ನಂ ವಿಗರ್ಹಿತಮ್।
ಜೀವನ್ನೇವ ಭವೇಚ್ಛೂದ್ರೋ ಮೃತ ಶ್ವಾಭಿಜಾಯತೇ ॥ ೨ ॥

---

## ಎಪ್ಪತ್ತನೆಯ ಅಧ್ಯಾಯವು

೧. ವ್ಯಾಸಮುನಿಯು ಹೀಗೆಂದು ಹೇಳಿದನು :—ವಿಪ್ರನು ಮೋಹ ಅಥವಾ ಲೋಭಾದಿ ಯಾವ ಕಾರಣದಿಂದಲೂ ಶೂದ್ರನ ಅನ್ನವನ್ನು ಭುಂಜಿಸಬಾರದು ಆಪತ್ತು ಇಲ್ಲದ ಸಮಯದಲ್ಲಿಯೂ ಶೂದ್ರಾನ್ನವನ್ನು ಭುಂಜಿಸಿದವನು ಶೂದ್ರ ಯೋನಿಯಲ್ಲಿ ಹುಟ್ಟುತ್ತಾನೆ.

೨. ಯಾವ ದ್ವಿಜನು ಆರುಮಾಸಗಳವರೆಗೆ ನಿಂದ್ಯವಾದ ಶೂದ್ರಾನ್ನವನ್ನು ಭುಂಜಿಸುವನೊ, ಅವನು ಜೀವಂತನಾಗಿರುವಾಗಲೆ ಶೂದ್ರತ್ವವನ್ನು ಹೊಂದುತ್ತಾನೆ ಮರಣಾನಂತರದಲ್ಲಿ ಮತ್ತೆ ಶೂದ್ರನಾಗಿ ಜನಿಸುತ್ತಾನೆ.

ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಸ್ಯ ಚ ಮುನೀಶ್ವರಾಃ ।
ಯಸ್ಯಾನ್ನೇನೋದರಸ್ಥೇನ ಮೃತಸ್ತದ್ಯೋನಿಮಾಪ್ನುಯಾತ್ - ॥ ೩ ॥

ನಟಾನ್ನಂ ನರ್ತಕಾನ್ನಂ ಚ ತಕ್ಷ್ಣೋಽನ್ನಂ ಕರ್ಮಕಾರಿಣಃ ।
ಗಣಾನ್ನಂ ಗಣಿಕಾನ್ನಂ ಚ ಷಡನ್ನಾನಿ ಚ ವರ್ಜಯೇತ್ ॥ ೪ ॥

ಚಕ್ರೋಪಜೀವಿರಜಕತಸ್ಕರಧ್ವಜಿನಾಂ ತಥಾ ।
ಗಂಧರ್ವಲೋಹಕಾರಾನ್ನಂ ಸೂತಕಾನ್ನಂ ಚ ವರ್ಜಯೇತ್ ॥ ೫ ॥

ಕುಲಾಲಚಿತ್ರಕರ್ಮಾನ್ನಂ ವಾರ್ಧುಷೇಃ ಪತಿತಸ್ಯ ಚ ।
ಸುವರ್ಣಕಾರಶೈಲೂಷವ್ಯಾಧಬುದ್ಧಾತುರಸ್ಯ ಚ ॥ ೬ ॥

ಚಿಕಿತ್ಸಕಸ್ಯ ಚೈವಾನ್ನಂ ಪುಂಶ್ಚಲ್ಯಾ ದಂಡಕಸ್ಯ ಚ ।
ಸ್ತೇನನಾಸ್ತಿಕಯೋರನ್ನಂ ದೇವತಾನಿಂದಕಸ್ಯ ಚ ॥ ೭ ॥

---

೩. ಮುನೀಶ್ವರರೆ! ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರಲ್ಲಿ ಯಾವ ವರ್ಣದವನ ಅನ್ನವು ಉದರದಲ್ಲಿರುವಾಗ ಮರಣ ಹೊಂದುವನೊ; ಅವನು ಮರಣ ಹೊಂದಿದ ಮೇಲೆ ಮತ್ತೆ ಆಯಾಯ ಯೋನಿಯಲ್ಲಿ ಜನಿಸುತ್ತಾನೆ.

೪. ನಟ, ನರ್ತಕ, ತಕ್ಷಕ, ಚರ್ಮಕಾರ, ಗಣಕ ಮತ್ತು ಗಣಿಕೆ ಈ ಆರುಮಂದಿಯ ಅನ್ನವನ್ನು ಭುಂಜಿಸದೇ ವರ್ಜಿಸಬೇಕು.

೫. ಚಕ್ರೋಪಜೀವಿ, ರಜಕ, ತಸ್ಕರ, ಧ್ವಜೀ, ಗಾಯಕ, ಮತ್ತು ಲೋಹಕಾರ ಮತ್ತು ಸೂತಕಿ—ಇವರುಗಳ ಅನ್ನವನ್ನು ಭುಂಜಿಸಬಾರದು.

೬. ಕುಂಬಾರ, ಚಿತ್ರಕಾರ, ವೃದ್ಧಿಜೀವಿ, ಪತಿತ ಸ್ವರ್ಣಕಾರ, ನಟ, ವ್ಯಾಧ ಬದ್ಧ ಮತ್ತು ಆತುರರ ಅನ್ನವನ್ನು ವರ್ಜಿಸಬೇಕು.

೭. ವೈದ್ಯ, ವ್ಯಭಿಚಾರಿಣೀ, ಶಿಕ್ಷಕ, ಚೋರ, ನಾಸ್ತಿಕ, ಮತ್ತು ದೇವತಾ ನಿಂದಕ–ಇವರ ಅನ್ನವನ್ನು ಭುಂಜಿಸಬಾರದು.

ಸೋಮವಿಕ್ರಯಿಣಶ್ಚಾನ್ನಂ ಶ್ವಪಾಕಸ್ಯ ವಿಶೇಷತಃ ।
ಭಾರ್ಯಾಜಿತಸ್ಯ ಚೈವಾನ್ನಂ ಯಸ್ಯ ಚೋಪಪತಿರ್ಗೃಹೇ ॥ ೮ ॥

ಉಚ್ಛಿಷ್ಟಸ್ಯ ಕದರ್ಯಸ್ಯ ತಥೈವೋಚ್ಛಿಷ್ಟಭೋಜಿನಃ ।
ಅಪಂಕ್ತ್ಯನ್ನಂ ಚ ಸಂಘಾನ್ನಂ ಶಸ್ತ್ರಜೀವಸ್ಯ ಚೈವ ಹಿ ॥ ೯ ॥

ಕ್ಲೀಬಸನ್ನ್ಯಾಸಿನಶ್ಚಾನ್ನಂ ಮತ್ತೋನ್ಮತ್ತಸ್ಯ ಚೈವ ಹಿ ।
ಭೀತಸ್ಯ ರುದಿತಸ್ಯಾನ್ನಮವಕ್ರುಷ್ಟಂ ಪರಿಗ್ರಹಮ್ ॥ ೧೦ ॥

ಬ್ರಹ್ಮದ್ವಿಷಃ ಪಾಪರುಚೇಃ ಶ್ರಾದ್ಧಾನ್ನಂ ಸೂತಕಸ್ಯ ಚ ।
ವೃಥಾಪಾಕಸ್ಯ ಚೈವಾನ್ನಂ ತವಾನ್ನಂ ಚತುರಸ್ಯ ಚ ॥ ೧೧ ॥

---

೮. ಸೋಮ ವಿಕ್ರಯಮಾಡಿದವನು, ಶ್ವಪಾಕ, ಭಾರ್ಯಾಧೀನನಾದವನು ಮತ್ತು ಉಪಪತಿಯನ್ನು ಮನೆಯಲ್ಲಿರಿಸಿಕೊಂಡವನು–ಇವರ ಅನ್ನವನ್ನು ವರ್ಜಿಸಬೇಕು.

೯. ಉಚ್ಛಿಷ್ಟನಾದವನ ಲೋಭಿಯ ಮತ್ತು ಉಚ್ಛಿಷ್ಟಾನ್ನವನ್ನು ಭುಂಜಿಸುವವನ ಅನ್ನವು ಭುಂಜಿಸಲ್ಪಡಬಾರದು. ಹಾಗೂ ಅಪಾಂಕ್ತೇಯನ ಅನ್ನವನ್ನೂ ಸಂಘದ ಅನ್ನವನ್ನೂ, ಶಸ್ತ್ರಜೀವಿಯ ಅನ್ನವನ್ನೂ ವರ್ಜಿಸಬೇಕು.

೧೦. ನಪುಂಸಕ, ಸನ್ಯಾಸಿ ಮತ್ತು ಉನ್ಮತ್ತ ಭಯಗ್ರಸ್ತ, ರೋದನಮಾಡುವವನು, ಈ ಮಂದಿಯ ಅನ್ನವನ್ನೂ ಅಧಮವಾದ ಅನ್ನವನ್ನೂ ದುಷ್ಟವಾದ ಅನ್ನವನ್ನೂ ವರ್ಜಿಸಬೇಕು.

೧೧. ಬ್ರಹ್ಮದ್ವೇಷಿ, ಪಾಪದಲ್ಲಿ ಆಸಕ್ತಿಯುಳ್ಳವನು, ಸೂತಕಿ ವ್ಯರ್ಥವಾಗಿ ಪಾಕ ಮಾಡುವವನು,ವಂಚಕ, ಚತುರ ಇವರ ಅನ್ನವನ್ನೂ ಶ್ರಾದ್ಧದ ಅನ್ನವನ್ನೂ ಭೋಜನ ಮಾಡಬಾರದು.

ಅಪ್ರಜಾನಾಂ ತು ನಾರೀಣಾಂ ಭೃತಕಸ್ಯ ತಥೈವ ಚ ।
ಕಾರುಕಾನ್ನಂ ವಿಶೇಷೇಣ ಶಸ್ತ್ರವಿಕ್ರಯಿಣಸ್ತಥಾ ॥ ೧೨ ॥

ಶೌಂಡಾನ್ನಂ ಘಾತಿಕಾನ್ನಂ ಚ ಭಿಷಜಾಮನ್ನಮೇವ ಚ ।
ವಿದ್ಧಪ್ರಜನನಸ್ಯಾನ್ನಂ ಪರಿವೇತ್ರನ್ನಮೇವ ಚ ॥ ೧೩ ॥

ಪುನರ್ಭುವೋ ವಿಶೇಷೇಣ ತಥೈವ ದಿಧಿಷೂಪತೇಃ ।
ಅವಜ್ಞಾತಂ ಚಾವಧೂತಂ ಸರೋಷಂ ವಿಸ್ಮಯಾನ್ವಿತಮ್ ॥ ೧೪ ॥

ಗುರೋರಪಿ ನ ಭೋಕ್ತವ್ಯಮನ್ನಂ ಸಂಸ್ಕಾರವರ್ಜಿತಮ್ ।
ದುಷ್ಕೃತಂ ಹಿ ಮನುಷ್ಯಸ್ಯ ಸರ್ವಮನ್ನೇ ವ್ಯವಸ್ಥಿತಮ್ ॥ ೧೫ ॥

ಯೋ ಯಸ್ಯಾನ್ನಂ ಸಮಾಶ್ನಾತಿ ಸ ತಸ್ಯಾಶ್ನಾತಿ ಕಿಲ್ಬಿಷಮ್ ।
ಆರ್ಧಿಕಃ ಕುಲಮಿತ್ರಶ್ಚ ಸ್ವಗೋಪಾಲಶ್ಚ ನಾಪಿತಃ ॥ ೧೬ ॥

---

೧೨. ಸಂತತಿಯಿಲ್ಲದ ಸ್ತ್ರೀಯರ ಅನ್ನವನ್ನೂ, ಕೃತಘ್ನನ ಅನ್ನವನ್ನೂ, ಶಿಲ್ಪಿಯ ಅನ್ನವನ್ನೂ ಮತ್ತು ವಿಶೇಷವಾಗಿ ಶಸ್ತ್ರಗಳನ್ನು ವಿಕ್ರಯಿಸುವವನ ಅನ್ನವನ್ನೂ ವರ್ಜಿಸಬೇಕು.

೧೩. ಮತ್ತು ಘಾತುಕ ವೈದ್ಯ ಪ್ರಜನನೇಂದ್ರಿಯ ರೋಗಿ ಮತ್ತು ವಿವಾಹಿತನಾಗದಿರುವವನ ವಿವಾಹಿತನಾದ ಅನುಜ ಇವರ ಅನ್ನವನ್ನು ಭುಂಜಿಸಬಾರದು.

೧೪. ಪುನರ್‌ವಿವಾಹಿತಳಾದ ಸ್ತ್ರೀ ಮತ್ತು ಅಂತಹವಳ ಪತಿ ಇವರ ಅನ್ನವನ್ನು ವಿಶೇಷವಾಗಿ ವರ್ಜಿಸಬೇಕು. ಮತ್ತು ಅವಮಾನ, ತಿರಸ್ಕಾರ, ರೋಷ, ಆಶ್ಚರ್ಯ ಮೂಲಕವಾದ ಅನ್ನವನ್ನು ವರ್ಜಿಸಬೇಕು.

೧೫. ಸಂಸ್ಕಾರಶೂನ್ಯವಾದ ಗುರುವಿನ ಅನ್ನವನ್ನೂ ಕೂಡ ಭುಂಜಿಸಬಾರದು. ಮನುಷ್ಯನಿಗೆ ಸಮಸ್ತ ಪಾಪಪುಂಜವು ಅನ್ನದಲ್ಲಿರುವುದು.

೧೬. ಯಾವ ಮಾನವನು ಯಾರ ಅನ್ನವನ್ನು ಭುಂಜಿಸುವನೋ ಅವನು ಅವನ ಪಾಪವನ್ನು ಹೊಂದುತ್ತಾನೆ. ಪೀಡಾಗ್ರಸ್ತ, ಕುಲಮಿತ್ರ, ತನ್ನ ಗೋವುಗಳ ಪಾಲಕ ಮತ್ತು ನಾಪಿತ ಇವರ ಅನ್ನವನ್ನು ಭುಂಜಿಸಬಾರದು.

ಕುಶೀಲವಃ ಕುಂಭಕಾರಃ ಕ್ಷೇತ್ರಕರ್ಮಕ ಏವ ಚ ।
ಏತೇ ಶೂದ್ರೇಷು ಭೋಜ್ಯಾನ್ನಂ ದತ್ವಾ ಸ್ವಲ್ಪಂ ಪಣಂ ಬುಧೈಃ
ಪಾಯಸಂ ಸ್ನೇಹಪಕ್ವಂ ಯತ್ ಗೋರಸಂ ಚೈವ ಸಕ್ತವಃ । ॥ ೧೭ ॥

ಪಿಣ್ಯಾಕಂ ಚೈವ ತೈಲಂ ಚ ಶೂದ್ರಾದ್ಗ್ರಾಹ್ಯಂ ತಥೈವ ಚ
ವೃಂತಾಕಂ ಜಾಲಿಕಾ ಶಾಕಂ ಕುಸುಂಭಾಶ್ಮಂತಕಂ ತಥಾ । ॥ ೧೮ ॥

ಪಲಾಂಡುಂ ಲಶುನಂ ಸೂಕ್ತಂ ನಿರ್ಯಾಸಂ ಚೈವ ವರ್ಜಯೇತ್
ಛತ್ರಾಕಂ ವಿಡ್ವರಾಹಂ ಚ ಶೇಲಪೀಯೂಷಮೇವ ಚ । ॥ ೧೯ ॥

ವಿಲಯಂ ಸುಮುಖಂ ಚೈವ ಕವಕಾನಿ ಚ ವರ್ಜಯೇತ್
ಗೃಂಜನಂ ಕಿಂಶುಕಂ ಚೈವ ಕುಕ್ಕುಟಂ ಚ ತಥೈವ ಚ । ॥ ೨೦ ॥

ಉದುಂಬರಮಲಾಬುಂ ಚ ಜಗ್ಧ್ವಾ ಪತತಿ ವೈ ದ್ವಿಜಃ
ವೃಥಾಕೃಶರಸಂಯಾವಂ ಪಾಯಸಾಪೂಪಮೇವ ಚ । ॥ ೨೧ ॥

---

೧೭. ಗಾಯಕ, ಕುಂಬಾರ, ಕ್ಷೇತ್ರವನ್ನು ಉಳುವ ರೈತ ಈ ಶೂದ್ರರಲ್ಲಿ ಸಿದ್ಧವಾದ ಅನ್ನದಲ್ಲಿ ಸ್ವಲ್ಪಭಾಗವನ್ನು ಪಣವಾಗಿ ಕೊಟ್ಟು ಪಾಯಸ, ಸ್ನೇಹಪಕ್ವ, ಗೋರಸ ಮತ್ತು ಹಿಟ್ಟು ಇವುಗಳನ್ನು ತೆಗೆದುಕೊಳ್ಳಬಹುದು.

೧೮. ಹಿಂಡಿ ತೈಲಗಳನ್ನೂ ಶೂದ್ರನಿಂದ ದ್ವಿಜರು ಗ್ರಹಿಸಬಹುದು. ವೃತಾಂಕ ಜಾಲಿಕ ಶಾಕ ಕುಸುಂಭ ಅಶ್ಮಂತಕ ಎಂಬ ಶಾಕಗಳನ್ನು ವರ್ಜಿಸಬೇಕು.

೧೯. ಮತ್ತು ಪಲಾಂಡು ಲಶುನ ಸೂಕ್ತ ನಿರ್ಯಾಸ ಛತ್ರಾಕ ವಿಡ್ವರಾಹಶೇಲ, ಪೀಯೂಷ ಇವುಗಳನ್ನು ಭುಂಜಿಸಬಾರದು.

೨೦. ಹಾಗು ವಿಲಯ ಸುಮುಖ ಕವಕ ಗೃಂಜನ ಕಾಶುಕ ಕುಕ್ಕುಟ ಇವುಗಳನ್ನು ಆಹಾರವಾಗಿ ಭುಂಜಿಸಬಾರದು.

೨೧. ಉದುಂಬರ ಅಲಾಬು ಇವುಗಳನ್ನು ಭುಂಜಿಸಿದ ದ್ವಿಜನು ಪತಿತನಾಗುತ್ತಾನೆ. ಹಾಗು ಕೃಶ್ಶರ ಸೈಯ್ಯಾವ ಪಾಯಸ ಅಪೂಪಗಳನ್ನು ವ್ಯರ್ಥವಾಗಿ ಭುಂಜಿಸಬಾರದು.

ಅನುಪಾಕೃತಮಾಂಸಂ ಚ ದೇವಾನ್ನಾನಿ ಹವೀಂಷಿ ಚ ।
ಯವಾಗೂಂ ಮಾತುಲಿಂಗಂ ಚ ಮತ್ಸ್ಯಾನಪ್ಯನುಪಾಕೃತಾನ್ ॥ ೨೨ ॥

ನೀಪಂ ಕಪಿತ್ಥಂ ಪ್ಲಕ್ಷಂ ಚ ಪ್ರಯತ್ನೇನ ವಿವರ್ಜಯೇತ್ ।
ಪಿಣ್ಯಾಕಂ ಚೋದ್ಧೃತಸ್ನೇಹಂ ದಿವಾಧಾನಾಸ್ತಥೈವ ಚ ॥ ೨೩ ॥

ರಾತ್ರೌ ಚ ತಿಲಸಂಬದ್ಧಂ ಪ್ರಯತ್ನೇನ ದಧಿ ತ್ಯಜೇತ್
ನಾಶ್ನೀಯಾತ್ಪಯಸಾ ತಕ್ರಂ ನ ಬೀಜಾನ್ಯುಪಜೀವಯೇತ್ ॥ ೨೪ ॥

ಕ್ರಿಯಾದುಷ್ಟಂ ಭಾವದುಷ್ಟಮಸತ್ಸಂಗಂ ವಿವರ್ಜಯೇತ್ ।
ಕೇಶಕೀಟಾವಪನ್ನಂ ಚ ಸ್ವಭೂರ್ಲೇಖಂ ಚ ನಿತ್ಯಶಃ ॥ ೨೫ ॥

---

೨೨. ಸಂಸ್ಕಾರವಿಲ್ಲದ ಮಾಂಸ, ದೇವತಾಯೋಗ್ಯವಾದ ಅನ್ನ, ಹವಿಸ್ಸು ಯವಾಗುಂ ಮಾತುಲಿಂಗ ಮತ್ತು ಯೋಗ್ಯಸಂಸ್ಕಾರವಿಲ್ಲದ ಮತ್ಸ್ಯ ಇವುಗಳನ್ನು ಭುಂಜಿಸಬಾರದು.

೨೩. ನೀಪ ಕಪಿತ್ಥಪ್ಲಕ್ಷ ಇವುಗಳನ್ನು ಪ್ರಯತ್ನಪೂರ್ವಕವಾಗಿ ವರ್ಜಿಸಬೇಕು. ಹಾಗು ಎಣ್ಣೆಯನ್ನು ತೆಗೆದ ಪಿಣ್ಯಾಕ ದೇವ ಧಾನ್ಯಗಳನ್ನು ವರ್ಜಿಸಬೇಕು.

೨೪. ತಿಲಧಾನ್ಯಕ್ಕೆ ಸಂಬಂಧಪಟ್ಟ ವಸ್ತುವನ್ನೂ ದಧಿಯನ್ನೂ ರಾತ್ರಿಯಲ್ಲಿ ಪ್ರಯತ್ನದಿಂದ ಬಿಡಬೇಕು. ಹಾಲಿನೊಡನೆ ಮಜ್ಜಿಗೆಯನ್ನು ಸೇವಿಸಬಾರದು. ಹಾಗೂ ಬೀಜಧಾನ್ಯಗಳನ್ನು ಭುಂಜಿಸಬಾರದು.

೨೫. ಮತ್ತು ಕ್ರಿಯೆಯಿಂದ ದುಷ್ಟವೂ ಭಾವದಿಂದ ದುಷ್ಟಸಂಗದಿಂದ ದುಷ್ಟವಾದವುಗಳನ್ನು ವರ್ಜಿಸಬೇಕು. ಕೇಶ-ಕ್ರಿಮಿಗಳಿಂದ ದುಷ್ಟವಾದುದನ್ನೂ ತನ್ನ ಭೂಮಿಯ ಸಂಪರ್ಕದಿಂದ ದುಷ್ಟವಾದುದನ್ನೂ ನಿತ್ಯವಾಗಿ ಬಿಡಬೇಕು.

ಶ್ವಾಘ್ರಾತಂ ಚ ಪುನಃಸಿದ್ಧಂ ಚಂಡಾಲಾವೇಕ್ಷಿತಂ ತಥಾ ।
ಉದಕ್ಯಯಾ ಚ ಪತಿತೈರ್ಗವಾ ಚಾಘ್ರಾತಮೇವ ಚ　　॥ ೨೬ ॥

ಅನರ್ಚಿತಂ ಪರ್ಯುಷಿತಂ ಪರ್ಯಾಭ್ರಾಂತಂ ಚ ನಿತ್ಯಶಃ ।
ಕಾಕಕುಕ್ಕುಟಸಂಸ್ಪೃಷ್ಟಂ ಕ್ರಿಮಿಭಿಶ್ಚೈವ ಸಂಯುತಮ್　　॥ ೨೭ ॥

ಮನುಷ್ಯೈರಥವಾ ಘ್ರಾತಂ ಕುಷ್ಠಿನಾ ಸ್ಪೃಷ್ಟಮೇವ ಚ ।
ನ ರಜಸ್ವಲಯಾ ದತ್ತಂ ನ ಪುಂಶ್ಚಲ್ಯಾ ಸರೋಷಕಮ್　　॥ ೨೮ ॥

ಮಲವದ್ವಾಸಸಾ ಚಾಪಿ ಪರಯಾ ಚೋಪಯೋಜಯೇತ್
ವಿವತ್ಸಾಯಾಶ್ಚ ಗೋಃ ಕ್ಷೀರಮೌಷ್ಟ್ರಂ ವಾ ನಿರ್ದಶಸ್ಯ ಚ　　॥ ೨೯ ॥

---

೨೬. ನಾಯಿಯು ಮೂಸಿ ನೋಡಿದ್ದನ್ನೂ ಪುನಃ ಪಾಕದಿಂದ ಸಿದ್ಧವಾದುದನ್ನೂ ಚಂಡಾಲನು ನೋಡಿದುದನ್ನೂ ಮತ್ತು ರಜಸ್ವಲೆ ಪತಿತ ಗೋವುಗಳಿಂದ ಮೂಸಲ್ಪಟ್ಟಿರುವುದನ್ನೂ ವರ್ಜಿಸಬೇಕು.

೨೭. ಅರ್ಚಿಸಲ್ಪಡದಿರುವುದನ್ನೂ ತಂಗಳನ್ನೂ ಅಲ್ಲಲ್ಲಿ ಭ್ರಮಿಸಿರುವುದನ್ನೂ ಕಾಗೆ ಕೋಳಿಗಳಿಂದ ಮುಟ್ಟಲ್ಪಟ್ಟಿರುವುದನ್ನೂ ಕ್ರಿಮಿಗಳಿಂದ ಕೂಡಿರುವುದನ್ನೂ ವರ್ಜಿಸಬೇಕು.

೨೮. ಮನುಷ್ಯರು ಮೂಸಿ ನೋಡಿರುವುದು, ಕುಷ್ಠರೋಗಿಯು ಮುಟ್ಟಿರುವುದು, ರಜಸ್ವಲೆಯು ಕುಟ್ಟಿರುವುದು, ವ್ಯಭಿಚಾರಿಣಿಯು ಕೋಪದಿಂದ ಮುಟ್ಟಿರುವುದು ಇವುಗಳನ್ನು ವರ್ಜಿಸಬೇಕು.

೨೯. ಮತ್ತು ರಜಸ್ವಲೆಯಿಂದಲೂ ಪರಸ್ತ್ರೀಯಿಂದಲೂ ಸಿದ್ಧವಾದುದನ್ನು ಉಪಯೋಗಿಸಬಾರದು. ವತ್ಸವಿಲ್ಲದ ಗೋವಿನ ಕ್ಷೀರವನ್ನು, ಒಂಟೆಯ ಕ್ಷೀರವನ್ನೂ, ಪ್ರಸವಿಸಿ ಹತ್ತು ದಿನಗಳೊಳಗಿನ ಹಸುವಿನ ಕ್ಷೀರವನ್ನೂ ಭುಂಜಿಸಬಾರದು.

ಆವಿಕಂ ಸಂಧಿನೀಕ್ಷೀರಮಪೇಯಂ ಮನುರಬ್ರವೀತ್
ಬಲಾಕಂ ಹಂಸದಾತ್ಯೂಹಂ ಕಲವಿಂಕಂ ಶುಕಂ ತಥಾ । ॥ ೩೦ ॥

ತಥಾ ಕುರರವಲ್ಲೂರಂ ಜಾಲಪಾದಂ ಚ ಕೋಕಿಲಮ್
ಚಾಷಾಂಶ್ಚ ಖಂಜರೀಟಾಂಶ್ಚ ಶ್ಯೇನಂ ಗೃಧ್ರಂ ತಥೈವ ಚ । ॥ ೩೧ ॥

ಉಲೂಕಂ ಚಕ್ರವಾಕಂ ಚ ಭಾಸಂ ಪಾರಾವತಂ ತಥಾ
ಕಪೋತಂ ಟಿಟ್ಟಿಭಂ ಚೈವ ಗ್ರಾಮಕುಕ್ಕುಟಮೇವ ಚ । ॥ ೩೨ ॥

ಸಿಹ್ಮಂ ವ್ಯಾಘ್ರಂ ಚ ಮಾರ್ಜಾರಂ ಶ್ವಾನಂ ಕುಕ್ಕುರಮೇವ ಚ
ಶೃಗಾಲಂ ಮರ್ಕಟಂ ಚೈವ ಗರ್ದಭಂ ಚ ನ ಭಕ್ಷಯೇತ್ । ॥ ೩೩ ॥

ನ ಭಕ್ಷಯೇತ್ ಸರ್ವಮೃಗಾನ್ಪಾನ್ಯಾನ್ ವನಚರಾನ್ ದ್ವಿಜಾನ್
ಜಲೇಚರಾನ್ ಸ್ಥಲಚರಾನ್ ಪ್ರಾಣಿನಶ್ಚೇತಿ ಧಾರಣಾ ॥ ೩೪ ॥

---

೩೦. ಹಾಗು ಕುರಿಯ ಹಾಲನ್ನು ಸಂಧಿನಿಯ ಕ್ಷೀರವನ್ನೂ ಪಾನಮಾಡ ಬಾರದೆಂದು ಮನುವು ಹೇಳಿರುವನು. ಬಲಾಕ,ಹಂಸ,ದಾತ್ಯೂಹ, ಕಲವಿಂಕ.ಶುಕ ಈ ಪಕ್ಷಿಗಳನ್ನು ವರ್ಜಿಸಬೇಕು.

೩೧. ಹಾಗೂ ಕುರರ,ವಲ್ಲೂರ, ಜಾಲಪಾದ, ಕೋಕಿಲ. ಚಾಷ, ಖಂಜರೀಟ, ಶ್ಯೇನ ಮತ್ತು ಗೃಧ್ರ ಎಂಬ ಪಕ್ಷಿಗಳನ್ನು ವರ್ಜಿಸಬೇಕು.

೩೨. ಉಲೂಕ, ಚಕ್ರವಾಕ, ಭಾಸ, ಪಾರಿವಾಳ, ಕಪೋತ, ಟಿಟ್ಟಿಭ ಮತ್ತು ಗ್ರಾಮಕುಕ್ಕುಟ ಇವುಗಳನ್ನು ಭಕ್ಷಿಸಬಾರದು.

೩೩. ಸಿಂಹ, ವ್ಯಾಘ್ರ, ಮಾರ್ಜಾಲ, ಶ್ವಾನ ಕುಕ್ಕುರ, ಶೃಗಾಲ, ಮರ್ಕಟ, ಗರ್ದಭ ಮತ್ತು ವನಚರವಾದ ಬೇರೆ ಯಾವುದೊಂದು ಪ್ರಾಣಿಗಳನ್ನೂ ಪಕ್ಷಿ ಗಳನ್ನೂ ಭುಂಜಿಸಬಾರದು.

೩೪. ಈ ರೀತಿಯಾಗಿ ಜಲಚರ ಮತ್ತು ಸ್ಥಲಚರಗಳಿಂದ ಪ್ರಾಣಿಗಳನ್ನು ಭುಂಜಿಸಬಾರದೆಂದು ಶಾಸ್ತ್ರೀಯವಾದ ನಿರ್ಣಯವು.

ಗೋಧಾ ಕೂರ್ಮಃ ಶಶಃ ಶ್ವಾವಿತ್ ಸಲ್ಲಕೀ ಚೇತಿ ಸತ್ತಮಾಃ
ಭಕ್ಷ್ಯಾಃ ಪಂಚನಖಾ ನಿತ್ಯಂ ಮನುರಾಹ ಪ್ರಜಾಪತಿಃ ॥ ೩೫ ॥

ಮತ್ಸ್ಯಾನ್ ಸಶಲ್ಕಾನ್ ಭುಂಜೀಯಾನ್ಮಾಂಸಂ ರೌರವಮೇವ ಚ॥೩೬॥

ನಿವೇದ್ಯ ದೇವತಾಭ್ಯಸ್ತು ಬ್ರಾಹ್ಮಣೇಭ್ಯಸ್ತು ನಾನ್ಯಥಾ ।
ಮಯೂರಂ ತಿತ್ತಿರಂ ಚೈವ ಕಪಿಂಜಲಕಮೇವ ಚ ॥ ೩೭ ॥

ವಾರ್ಧ್ರೀಣಸಂ ದ್ವೀಪಿನಂ ಚ ಭಕ್ಷ್ಯಾನಾಹ ಪ್ರಜಾಪತಿಃ ।
ರಾಜೀವಾನ್ ಸಿಂಹತುಂಡಾಂಶ್ಚ ತಥಾ ಪಾಠೀನರೋಹಿತೌ ॥ ೩೮ ॥

ಮತ್ಸ್ಯೇಷ್ವೇತೇ ಸಮುದ್ದಿಷ್ಟಾ ಭಕ್ಷಣೀಯಾ ಮುನೀಶ್ವರಾಃ ।
ಪ್ರೋಕ್ಷಿತಂ ಭಕ್ಷಯೇದೇಷಾಂ ಮಾಂಸಂ ಚ ದ್ವಿಜಕಾಮ್ಯಯಾ ॥ ೩೯ ॥

---

೩೫. ಸಾದುಶ್ರೇಷ್ಠರೇ, ಹಾವುರಾಣಿ, ಆಮೆ, ಮೊಲ, ಮುಳ್ಳುಹಂದಿ, ಮತ್ತು ಸಲ್ಲಕಿ ಎಂಬುವು ಐದು ಉಗುರಿನ ಪ್ರಾಣಿಗಳಲ್ಲಿ ಭಕ್ಷ್ಯಾರ್ಹವಾದುವು.

೩೬. ಮನುಪ್ರಜಾಪತಿಯು ಈ ಪಂಚನಖ ಪ್ರಾಣಿಗಳನ್ನು ಮಾತ್ರ ಭಕ್ಷಿಸಬಹುದೆಂದು ಹೇಳಿರುವನು ಶಲ್ಕ (ಮುಳ್ಳು) ಸಹಿತವಾದ ಮೀನುಗಳನ್ನೂ ಜಿಂಕೆಯ ಮಾಂಸವನ್ನೂ ಭುಂಜಿಸಬಹುದು.

೩೭. ಆದರೆ ಈ ಆಹಾರವನ್ನು ದೇವತಾ ಬ್ರಾಹ್ಮಣರಿಗೆ ನಿವೇದಿಸಿ ಭುಂಜಿಸಬಹುದು. ನಿವೇದಿಸದೆ ಭಕ್ಷಿಸುವುದು ನಿಷಿದ್ಧವು. ಪಕ್ಷಿಗಳಲ್ಲಿ ನವಿಲು ತಿತ್ತಿರಿ ಮತ್ತು ಕಪಿಂಜಲ ಎಂಬ ಪಕ್ಷಿಗಳು ಭಕ್ಷಣಾರ್ಹವಾಗಿವೆ.

೩೮. ಹಾಗು ವಾರ್ಧ್ರೀಣ ಸದ್ವೀಪಿ ಪ್ರಾಣಿಗಳು ಭಕ್ಷ್ಯವೆಂದು ಪ್ರಜಾಪತಿಯು ಹೇಳಿರುವನು ಮತ್ಸ್ಯಜಾತಿಯಲ್ಲಿ ರಾಜೀವ ಸಿಂಹ ತುಂಡ ಪಾಠೀಣ ರೋಹಿತ ಎಂಬುವು ಭಕ್ಷಣಾರ್ಹವಾಗಿವೆ.

೩೯. ಮುನೀಶ್ವರರೇ ಮೀನಿನ ಜಾತಿಯಲ್ಲಿ ಇವುಗಳು ಮಾತ್ರ ತಿನ್ನಲು ಅರ್ಹವೆಂದು ಹೇಳಲ್ಪಟ್ಟಿವೆ. ಇವುಗಳ ಮಾಂಸವನ್ನು ಬ್ರಾಹ್ಮಣರ ನಿವೇದನದ ಇಷ್ಟದಿಂದ ಪ್ರೋಕ್ಷಿಸಿ ಭಕ್ಷಿಸಬೇಕು.

ಯಥಾವಿಧಿ ನಿಯುಕ್ತಂ ಚ ಪ್ರಾಣಾನಾಮಪಿ ಚಾತ್ಯಯೇ ।
ಭಕ್ಷಯೇದೇವ ಮಾಂಸಾನಿ ಶೇಷಭೋಜೀ ನ ಲಿಪ್ಯತೇ ॥ ೪೦ ॥

ಔಷಧಾರ್ಥಮಶಕ್ತೌ ವಾ ನಿಯೋಗಾದ್ಯಂ ನ ಕಾರಯೇತ್ ।
ಆಮಂತ್ರಿತಸ್ತು ಯಃ ಶ್ರಾದ್ಧೇ ದೈವೇ ವಾ ಮಾಂಸಮುತ್ಸೃಜೇತ್॥೪೧॥

ಯಾವಂತಿ ಪಶುರೋಮಾಣಿ ತಾವತೋ ನರಕಾನ್ ವ್ರಜೇತ್ ।
ಅಪೇಯಂ ವಾಪ್ಯಪೇಯಂ ಚ ತಥೈವಾಸ್ಪೃಶ್ಯಮೇವ ಚ ॥ ೪೨ ॥

ದ್ವಿಜಾತೀನಾಮನಾಲೋಚ್ಯಂ ನಿತ್ಯಂ ಮದ್ಯಮಿತಿ ಸ್ಥಿತಿಃ ।
ತಸ್ಮಾತ್ ಸರ್ವಪ್ರಯತ್ನೇನ ಮದ್ಯಂ ನಿಂದ್ಯಂ ಚ ವರ್ಜಯೇತ್ ॥೪೩॥

---

೪೦. ಶಾಸ್ತ್ರಾನುಸಾರವಾಗಿ ವಿಧಿಸಲ್ಪಟ್ಟ ಮಾಂಸವನ್ನು ಪ್ರಾಣಾತ್ಯಯ ಕಾಲದಲ್ಲಿ ಇನ್ನಾವ ಮಾಂಸವನ್ನೂ ಯಜ್ಞಶೇಷವಾದ ಮಾಂಸವನ್ನೂ ಭುಂಜಿಸುವವನು ದೋಷಭಾಗಿಯಾಗುವುದಿಲ್ಲ.

೪೧. ಔಷಧ ಸೇವನಕ್ಕೋಸ್ಕರಲೂ ಅಶಕ್ತಿ ಸಮಯದಲ್ಲಿ ಉಪಯೋಗಕ್ಕೋಸ್ಕರವೂ ಶಾಸ್ತ್ರೀಯ ವಿಧಿಯನ್ನು ಅನುಸರಿಸಬೇಕಾಗಿಲ್ಲ. ಶ್ರಾದ್ಧದಲ್ಲಿಯೂ ದೇವತಾ ಕರ್ಮದಲ್ಲಿಯೂ ಆಮಂತ್ರಿಸಲ್ಪಟ್ಟವನಾಗಿ ಮಾಂಸವನ್ನು ತ್ಯಜಿಸಿದವನು ಎಷ್ಟು ಪಶುವಿನಲ್ಲಿ ರೋಮಗಳಿವೆಯೋ ಅಷ್ಟು ಸಂಖ್ಯೆಯ ನರಕಪೀಡೆಯನ್ನು ಅನುಭವಿಸುತ್ತಾನೆ.

೪೨. ಪಾನಾಯೋಗ್ಯವೂ ಭೋಜನಾಯೋಗ್ಯವೂ ಮತ್ತು ಸ್ಪರ್ಶಯೋಗ್ಯವೂ ಆದ ಮದ್ಯವು ಸ್ವಲ್ಪವೂ ವಿಚಾರವಿಲ್ಲದೆ ತ್ರೈವರ್ಣಕರಿಂದ ತ್ಯಜಿಸಲ್ಪಡಬೇಕೆಂಬುದು ಶಾಸ್ತ್ರಮರ್ಯಾದೆಯು.

೪೩. ಆದುದರಿಂದ ಮದ್ಯವನ್ನೂ ನಿಂದಾರ್ಹವಾದ ವಸ್ತುವನ್ನೂ ಸರ್ವ ಪ್ರಯತ್ನಗಳಿಂದಲೂ ಬಿಡಬೇಕು. ಅಂತಹ ಮದ್ಯವನ್ನು ಪಾನಮಾಡಿದವನು ಕರ್ಮದಿಂದ ಭ್ರಷ್ಟನಾಗಿ ಧಾರ್ಮಿಕ ದ್ವಿಜರ ಸಂಗಡ ಸಂಭಾಷಣೆಗೆ ಅನರ್ಹನಾಗುವನು.

ಪೀತ್ವಾ ಪತಿತಃ ಕರ್ಮಭ್ಯೋ ನ ಸಂಭಾಷ್ಯೋ ಭವೇದ್ದ್ವಿಜೈಃ ।
ಭಕ್ಷಯಿತ್ವಾ ಹ್ಯಭಕ್ಷ್ಯಾಣಿ ಪೀತ್ವಾಪೇಯಾನ್ಯಪಿ ದ್ವಿಜಃ ॥ ೪೪ ॥

ನಾಧಿಕಾರೀ ಭವೇತ್ತಾವದ್ಯಾವತ್ತನ್ನ ವ್ರಜತ್ಯಧಃ ।
ತಸ್ಮಾತ್ ಪರಿಹರೇನ್ನಿತ್ಯಮಭಕ್ಷ್ಯಾಣಿ ಪ್ರಯತ್ನತಃ
ಆರೋಪ್ಯ ಯಾತಿ ಚೈವೈಕೋ ತಥಾ ವೈ ಯಾತಿ ರೌರವಮ್ ॥ ೪೫ ॥

ಇತಿ ಶ್ರೀ ಕೂರ್ಮಪುರಾಣೇ ಸಪ್ತತಿತಮೋಽಧ್ಯಾಯಃ.

---

೪೪. ದ್ವಿಜನು ಅಭಕ್ಷ್ಯ ವಸ್ತುಗಳನ್ನು ಭಕ್ಷಿಸಿ ಹಾಗೂ ಅಪೇಯವಾದ ಪಾನೀಯವನ್ನು ಪಾನಮಾಡಿ ಆ ಭುಕ್ತಪೀತಗಳು ಅಧೋಭಾಗಕ್ಕೆ ಹೋಗುವವರೆಗೆ ಕರ್ಮಾನುಷ್ಠಾನಕ್ಕೆ ಅಧಿಕಾರಿಯಾಗುವುದಿಲ್ಲ.

೪೫. ಆದುದರಿಂದ ಅಭಕ್ಷ್ಯ ವಸ್ತುವನ್ನು ಪ್ರಯತ್ನ ಪೂರ್ವಕವಾಗಿ ಯಾವಾಗಲೂ ವರ್ಜಿಸಬೇಕು. ಅಂತಹ ವಸ್ತುವನ್ನು ಉಪಯೋಗಿಸಿದವನು ರೌರವನರಕವನ್ನು ಹೊಂದುತ್ತಾನೆ.

ಕೂರ್ಮಪುರಾಣದಲ್ಲಿ ಎಪ್ಪತ್ತನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಕೂರ್ಮಪುರಾಣಂ

## ಏಕಸಪ್ತತಿತಮೋಽಧ್ಯಾಯಃ.

ಋಷಯ ಊಚುಃ:—

ಅಹನ್ಯಹನಿ ಕರ್ತವ್ಯಂ ಬ್ರಾಹ್ಮಣಾನಾಂ ಮಹಾಮುನೇ ।
ತದಾಚಕ್ಷ್ವಾಖಿಲಂ ಕರ್ಮ ಯೇನ ಮುಚ್ಯೇತ ಬಂಧನಾತ್ ॥ ೧ ॥

ವ್ಯಾಸ ಉವಾಚ:—

ವಕ್ಷ್ಯೇ ಸಮಾಹಿತಾ ಯೂಯಂ ಶೃಣುಧ್ವಂ ಗದತೋ ಮಮ ।
ಅಹನ್ಯಹನಿ ಕರ್ತವ್ಯಂ ಬ್ರಾಹ್ಮಣಾನಾಂ ಕ್ರಮಾದ್ವಿಧಿಮ್ ॥ ೨ ॥

---

## ಎಪ್ಪತ್ತೊಂದನೆಯ ಅಧ್ಯಾಯವು

೧. ಋಷಿಗಳು ಹೀಗೆಂದರು—ವ್ಯಾಸ ಮಹಾಮುನಿಗೆ ಬ್ರಾಹ್ಮಣರು ಪ್ರತಿನಿತ್ಯವೂ ಆಚರಿಸಬೇಕಾದ ಸಮಗ್ರ ನಿತ್ಯಕರ್ಮಗಳನ್ನು ನಮಗೆ ಹೇಳು. ಅದನ್ನು ಶ್ರವಣಮಾಡಿದ ಮಾನವನು ಬಂಧನದಿಂದ ಮುಕ್ತನಾಗುವನು.

೨. ವ್ಯಾಸಮುನಿಯು ಹೀಗೆಂದು ಹೇಳಿದನು—ಬ್ರಾಹ್ಮಣರು ಪ್ರತಿನಿತ್ಯವೂ ಆಚರಿಸಬೇಕಾದ ನಿತ್ಯಕರ್ಮ ವಿಧಾನವನ್ನು ಕ್ರಮವಾಗಿ ಹೇಳುತ್ತೇನೆ. ನೀವು ಸಮಾಧಾನದಿಂದಿದ್ದು ವ್ಯಾಖ್ಯಾನ ಮಾಡುವ ನನ್ನ ವಚನವನ್ನು ಕೇಳಿರಿ.

ಬ್ರಾಹ್ಮೇ ಮುಹೂರ್ತೇ ತೂತ್ಥಾಯ ಧರ್ಮಮರ್ಥಂ ಚ ಚಿಂತಯೇತ್।
ಕಾಯಕ್ಲೇಶಂ ಚ ಯನ್ಮೂಲಂ ಧ್ಯಾಯೀತ ಮನಸೇಶ್ವರಮ್ ॥ ೩ ॥

ಉಷಃಕಾಲೇ ಚ ಸಂಪ್ರಾಪ್ತೇ ಕೃತ್ವಾ ಚಾವಶ್ಯಕಂ ಬುಧಃ ।
ಸ್ನಾಯೀನ್ನದೀಷು ಶುದ್ಧಾಸು ಶೌಚಂ ಕೃತ್ವಾ ಯಥಾವಿಧಿ ॥ ೪ ॥

ಪ್ರಾತಃಸ್ನಾನೇನ ಪೂಯಂತೇ ಯೇಽಪಿ ಪಾಪಕೃತೋ ಜನಾಃ ।
ತಸ್ಮಾತ್ ಸರ್ವಪ್ರಯತ್ನೇನ ಪ್ರಾತಃ ಸ್ನಾನಂ ಸಮಾಚರೇತ್ ॥ ೫ ॥

ಪ್ರಾತಃ ಸ್ನಾನಂ ಪ್ರಶಂಸಂತಿ ದೃಷ್ಟಾದೃಷ್ಟಕರಂ ಹಿ ತತ್ ।
ಋಷೀಣಾಮೃಷಿತಾ ನಿತ್ಯಂ ಪ್ರಾತಃ ಸ್ನಾನಾನ್ನ ಸಂಶಯಃ ॥ ೬ ॥

---

೩. ಬ್ರಾಹ್ಮಣನು ಬ್ರಹ್ಮಮುಹೂರ್ತದಲ್ಲಿ ಎದ್ದು ಮೊದಲು ಕಾಯ ಕ್ಲೇಶ ಮೂಲಕವಾದ ಧರ್ಮ ಅರ್ಥಗಳನ್ನು ಚಿಂತಿಸಬೇಕು ಮತ್ತು ಜಗತ್ತಿಗೆ ಮೂಲನಾದ ಈಶ್ವರನನ್ನು ಮನಸ್ಸಿನಲ್ಲಿ ಧ್ಯಾನಿಸಬೇಕು.

೪. ಹಾಗು ಬುದನು ಉಷಃಕಾಲವು ಪ್ರಾಪ್ತವಾದ ಬಳಿಕ ಆವಶ್ಯಕ ಕರ್ಮವನ್ನು ನೆರವೇರಿಸಿ ಯಥಾವಿಧಿಯಾಗಿ ಶೌಚವನ್ನು ಮಾಡಿ ಶುದ್ಧವಾದ ನದೀತೀರ್ಥದಲ್ಲಿ ಸ್ನಾನ ಮಾಡಬೇಕು.

೫. ಪಾತಕಗಳನ್ನು ಆಚರಿಸಿದ ಜನರೂಕೂಡ ಪ್ರಾತಃಸ್ನಾನದ ಅನುಷ್ಠಾನದಿಂದ ಪವಿತ್ರರಾಗುವರು. ಆದುದರಿಂದ ಸರ್ವ ಪ್ರಯತ್ನಗಳಿಂದ ಪ್ರಾತಃಸ್ನಾನವನ್ನು ಆಚರಿಸಬೇಕು.

೬. ಪ್ರಾತಃಸ್ನಾನವು ದೃಷ್ಟ ಅದೃಷ್ಟವಾದ ಅನೇಕ ಫಲವನ್ನು ಕೊಡುವುದರಿಂದ ಪ್ರಾತಸ್ನಾನವನ್ನು ಹೆಚ್ಚಾಗಿ ಪ್ರಶಂಸೆ ಮಾಡುತ್ತಾರೆ. ಋಷಿಗಳಿಗೆ ಋಷಿತ್ವ ಪದವಿಯು ತಪ್ಪದೆ ಮಾಡಿದ ಪ್ರಾತಸ್ನಾನದಿಂದಲೇ ಬಂದಿದೆ ಎಂಬುದರಲ್ಲಿ ಸಂಶಯವಿಲ್ಲ.

ಮುಖೇ ಸುಪ್ತಸ್ಯ ಸತತಂ ಲಾಲಾ ಯಾಃ ಸಂಸ್ರವಂತಿ ಹಿ ।
ತತೋ ನೈವಾಚರೇತ್ ಕರ್ಮ ಅಕೃತ್ವಾ ಸ್ನಾನಮಾದಿತಃ ॥ ೭ ॥

ಅಲಕ್ಷ್ಮೀಕೋ ಜಲಂ ಕಿಂಚಿದ್ದುಃಸ್ವಪ್ನಂ ದುರ್ವಿಚಿಂತಿತಮ್ ।
ಪ್ರಾತಃಸ್ನಾನೇನ ಪಾಪಾನಿ ಪೂಯಂತೇ ನಾತ್ರ ಸಂಶಯಃ ॥ ೮ ॥

ಅತಃ ಸ್ನಾನಂ ವಿನಾ ಪುಂಸಾಂ ಪ್ರಭಾತಂ ಕರ್ಮ ನಂಸ್ಮೃತಮ್ ।
ಹೋಮೇ ಜಪ್ಯೇ ವಿಶೇಷೇಣ ತಸ್ಮಾತ್ ಸ್ನಾನಂ ಸಮಾಚರೇತ್ ॥ ೯ ॥

ಅಶಕ್ತಾವಶಿರಸ್ಕಂ ವಾ ಸ್ನಾನಮಸ್ಯ ವಿಧೀಯತೇ ।
ಆರ್ದ್ರೇಣ ವಾಸಸಾ ವಾಥ ಮಾರ್ಜನಂ ಕಾಪಿಲಂ ಸ್ಮೃತಮ್ ॥ ೧೦ ॥

---

೭. ಮಲಗಿದ ಮಾನವನ ಮುಖದಲ್ಲಿ ಸಂತತವಾಗಿ ಲಾಲಾ (ಜೊಲ್ಲು) ಜಲಗಳು ಹರಿಯುತ್ತವಷ್ಟೆ, ಆದ್ದರಿಂದ ಮೊದಲು ಸ್ನಾನವನ್ನು ಮಾಡದೆ ವಿಹಿತ ಕರ್ಮವನ್ನು ಆಚರಿಸಲಾಗದು.

೮. ಅಲಕ್ಷ್ಮೀಕರನಾದ ಯಾವುದೊಂದು ಶರೀರದ್ವಾರದ ಜಲವೂ ದುಸ್ವಪ್ನವೂ ಮತ್ತು ದುರಾಲೋಚನೆಯೂ ಮುಂತಾದ ಪಾಪಗಳು ಪ್ರಾತಃಸ್ನಾನದಿಂದ ಶುದ್ಧವಾಗುವುದರಲ್ಲಿ ಸಂಶಯವಿಲ್ಲ.

೯. ಆದುದರಿಂದ ಮನುಷ್ಯರಿಗೆ ಸ್ನಾನವಿಲ್ಲದೆ ಪ್ರಾತಃಕಾಲದ ಕರ್ಮಾನುಷ್ಠಾನವು ನಿಷಿದ್ಧವಾಗಿ ಸ್ಮರಿಸಲ್ಪಟ್ಟಿವೆ. ಹೋಮ ಜಪ ಮುಂತಾದ ಪ್ರಸಂಗದಲ್ಲಿ ವಿಶೇಷವಾಗಿ ಸ್ನಾನವನ್ನು ಆಚರಿಸಬೇಕು.

೧೦. ಅಶಕ್ತಿ ಸಮಯದಲ್ಲಿ ಶಿರೋವರ್ಜಿತವಾಗಿ ಬ್ರಾಹ್ಮಣನಿಗೆ ಸ್ನಾನವು ವಿಧಿಸಲ್ಪಟ್ಟಿದೆ. ಅಥವಾ ಒದ್ದೆಬಟ್ಟೆಯಿಂದ ಒರಿಸುವುದೆಂಬ ಕಾಪಿಲಸ್ನಾನವು ವಿಧಿಸಲ್ಪಟ್ಟಿದೆ.

ಅಯುಕ್ತೋ ವೈ ಸಮುತ್ಪನ್ನೇ ಸ್ನಾನಮೇವ ಸಮಾಚರೇತ್ ।
ಬ್ರಾಹ್ಮಾದೀನಾಮಥಾಶಕ್ತೌ ಸ್ನಾನಾನ್ಯಾಹುರ್ಮನೀಷಿಣಃ ॥ ೧೧ ॥

ಬ್ರಾಹ್ಮಮಾಗ್ನೇಯಮುದಿಷ್ಟಂ ವಾಯವ್ಯಂ ದಿವ್ಯಮೇವ ಚ ।
ವಾರುಣಂ ಯೌಗಿಕಂ ಯಚ್ಚ ಷೋಢಾ ಸ್ನಾನಂ ಸಮಾಸತಃ ॥ ೧೨ ॥

ಬ್ರಾಹ್ಮಂ ತು ಮಾರ್ಜನಂ ಮಂತ್ರೈಃ ಕುಶೈಃ ಸೋದಕಬಿಂದುಭಿಃ ।
ಆಗ್ನೇಯಂ ಭಸ್ಮನಾ ಪಾದಮಸ್ತಕಾದ್ದೇಹದೂಲನಮ್ ॥ ೧೩ ॥

ಗವಾಂ ಹಿ ರಜಸಾ ಪ್ರೋಕ್ತಂ ವಾಯವ್ಯಂ ಸ್ನಾನಮುತ್ತಮಮ್ ।
ಯತ್ತು ಸಾತಪವರ್ಷೇಣ ಸ್ನಾನಂ ತದ್ದಿವ್ಯಮುಚ್ಯತೇ ॥ ೧೪ ॥

ವಾರುಣಂ ಚಾವಗಾಹಸ್ತು ಮಾನಸಂ ಸ್ವಾತ್ಮವೇದನಮ್ ।
ಯೋಗಿನಾಂ ಸ್ನಾನಮಾಖ್ಯಾತಂ ಯೋಗೇ ವಿಶ್ವಾತ್ಮಚಿಂತನಮ್ ॥ ೧೫ ॥

---

೧೧. ಅಪವಿತ್ರತೆಯು ಉಂಟಾದರೆ ಶುದ್ಧಿಗೋಸ್ಕರ ಸ್ನಾನವನ್ನು ಆಚರಿಸ ಬೇಕು. ಸಾಮರ್ಥ್ಯವಿಲ್ಲದಿರುವಾಗ ಬ್ರಾಹ್ಮ ಮೊದಲಾದ ಅನೇಕ ಗೌಣ ಸ್ನಾನ ಗಳನ್ನು ವಿದ್ವಾಂಸರು ಹೇಳಿರುತ್ತಾರೆ

೧೨. ಆ ಗೌಣಸ್ನಾನಗಳು ಬ್ರಾಹ್ಮ ಆಗ್ನೇಯ ವಾಯವ್ಯ ದಿವ್ಯ ವಾರುಣ ಮತ್ತು ಯೌಗಿಕವೆಂಬುದಾಗಿ ಸಂಗ್ರಹವಾಗಿ ಆರಾಗಿ ಹೇಳಲ್ಪಟ್ಟಿವೆ.

೧೩. ಮಂತ್ರಗಳನ್ನು ಪಠಿಸುತ್ತಾ ದರ್ಭೆಗಳಿಂದ ಜಲಬಿಂದುಗಳನ್ನು ಪ್ರೋಕ್ಷಿಸಿಕೊಳ್ಳುವದು ಬ್ರಾಹ್ಮಸ್ನಾನವಾಗುವುದು. ಪಾದ ಮೊದಲುಗೊಂಡು ಶಿರಸ್ಸಿನ ಪರ್ಯಂತವಾಗಿ ದೇಹದಲ್ಲಿ ಭಸ್ಮೋದ್ಧೂಲನವು ಆಗ್ನೇಯಸ್ನಾನವು.

೧೪. ಗೋವುಗಳ ಧೂಳಿಯಿಂದ ಪ್ರೋಕ್ಷಣವು ಉತ್ತಮವಾದ ವಾಯವ್ಯ ಸ್ನಾನವೆಂದು ಹೇಳಲ್ಪಟ್ಟಿದೆ. ಬಿಸಿಲಿನ ಸಮಯದಲ್ಲಿ ಬೀಳುವ ಮಳೆಯ ನೀರಿನಿಂದಾ ಗುವ ಸ್ನಾನವು ದಿವ್ಯಸ್ನಾನವೆಂದು ಹೇಳಲ್ಪಟ್ಟಿದೆ.

೧೫. ಜಲಾಶಯದಲ್ಲಿ ಮುಳುಗುವುದು ವಾರಣಸ್ನಾನವು. ಮತ್ತು ಮನಸ್ಸನ್ನು ಸ್ವಾತ್ಮದಲ್ಲಿರಿಸಿ ಯೋಗಸಮಯದಲ್ಲಿ ಯೋಗಿಗಳು ಮಾಡುವ ವಿಶ್ವವನ್ನು ಅತಿ ಕ್ರಮಿಸಿದ ಪರಮಾತ್ಮನ ಚಿಂತನಸ್ನಾನವು ಯೌಗಿಕಸ್ನಾನವೆಂದು ಹೇಳಲ್ಪಟ್ಟಿದೆ.

ಆತ್ಮತೀರ್ಥಮಿತಿ ಖ್ಯಾತಂ ಸೇವಿತಂ ಬ್ರಹ್ಮವಾದಿಭಿಃ ।
ಮನಃಶುದ್ಧಿಕರಂ ಪುಂಸಾಂ ನಿತ್ಯಂ ತತ್ ಸ್ನಾನಮಾಚರೇತ್ ॥ ೧೬ ॥

ಶಕ್ತಶ್ಚೇದ್ವಾರುಣಂ ವಿದ್ವಾನ್ ಪ್ರಾಯಶ್ಚಿತ್ತೇ ತಥೈವ ಚ ।
ಪ್ರಕ್ಷಾಲ್ಯ ದಂತಕಾಷ್ಠಂ ವೈ ಭಕ್ಷಯಿತ್ವಾ ವಿಧಾನತಃ ॥ ೧೭ ॥

ಆಚಮ್ಯ ಪ್ರಯತೋ ನಿತ್ಯಂ ಸ್ನಾನಂ ಪ್ರಾತಃ ಸಮಾಚರೇತ್ ।
ಮಧ್ಯಾಂಗುಲಿಸಮಸ್ಥೌಲ್ಯಂ ದ್ವಾದಶಾಂಗುಲಿಸಮ್ಮಿತಮ್ ॥ ೧೮ ॥

ಸತ್ವಚಂ ದಂತಕಾಷ್ಠಂ ಸ್ಯಾತ್ತದಗ್ರೇಣ ತು ಧಾವಯೇತ್ ।
ಕ್ಷೀರವೃಕ್ಷಸಮುದ್ಭೂತಂ ಮಾಲತೀಸಂಭವಂ ಶುಭಮ್ ॥ ೧೯ ॥

---

೧೬. ಈ ಆತ್ಮಚಿಂತೆಯು ಆತ್ಮತೀರ್ಥವೆಂದು ಪ್ರಸಿದ್ಧವಾಗಿದೆ. ಇದನ್ನು ಬ್ರಹ್ಮವಾದಿಗಳು ಸೇವಿಸಿರುವರು. ಈ ತೀರ್ಥವು ಮನುಷ್ಯರಿಗೆ ಮನಶ್ಶುದ್ಧಿಯನ್ನುಂಟುಮಾಡುವುದು. ಆದ್ದರಿಂದ ಆ ಸ್ನಾನವನ್ನು ಮಾಡಬೇಕು.

೧೭. ಜ್ಞಾನಿಯು ಶಕ್ತನಾಗಿದ್ದ ಸಮಯದಲ್ಲಿಯೂ, ಪ್ರಾಯಶ್ಚಿತ್ತ ಸಮಯದಲ್ಲಿಯೂ, ವಾರುಣಸ್ನಾನವನ್ನು ಮಾಡಬೇಕು. ಮೊದಲು ಮುಖವನ್ನು ತೊಳೆದು ಯಥಾವಿಧಿಯಾಗಿ ದಂತಕಾಷ್ಠವನ್ನು ಭಕ್ಷಿಸಬೇಕು.

೧೮. ಆಚಮನದಿಂದ ಪವಿತ್ರನಾಗಿ ಯಾವಾಗಲೂ ಪ್ರಾತಸ್ಸ್ನಾನವನ್ನು ಮಾಡಬೇಕು. ದಂತಕಾಷ್ಠವು ಮಧ್ಯದ ಬೆರಳಿನಷ್ಟು ಸ್ಥೂಲವೂ ಹನ್ನೆರಡು ಅಂಗುಲದಷ್ಟು ದೀರ್ಘವೂ ಇರಬೇಕು.

೧೯. ಮತ್ತು ಸಿಪ್ಪೆಯಿಂದ ಕೂಡಿದ ದಂತಕಾಷ್ಠದ ಅಗ್ರದಿಂದ ದಂತಗಳನ್ನು ಶೋಧಿಸಬೇಕು. ಹಾಲು ಸುರಿಯುವ ವೃಕ್ಷದಿಂದ ಹುಟ್ಟಿದ ಅಥವಾ ಮಾಲತೀಗಿಡದಲ್ಲಿ ಹುಟ್ಟಿದ ದಂತಕಾಷ್ಠವು ಶುಭಕರವು.

ಅಪಾಮಾರ್ಗಂ ಚ ಬಿಲ್ವಂ ಚ ಕರವೀರಂ ವಿಶೇಷತಃ ।
ವರ್ಜಯಿತ್ವಾ ನಿಂದಿತಾನಿ ಗೃಹೀತ್ವೈಕಂ ಯಥೋದಿತಮ್ ॥ ೨೦ ॥

ಪರಿಹೃತ್ಯ ದಿನಂ ಪಾಪಂ ಭಕ್ಷಯೇದ್ವೈ ವಿಧಾನವಿತ್ ।
ನೋತ್ಪಾದಯೇದ್ದಂತಕಾಷ್ಠಂ ನಾಂಗುಲ್ಯಗ್ರೇಣ ಧಾರಯೇತ್ ॥ ೨೧ ॥

ಪ್ರಕ್ಷಾಲ್ಯ ಭಂಕ್ತ್ವಾ ತಜ್ಜಹ್ಯಾಚ್ಛುಚೌ ದೇಶೇ ಸಮಾಹಿತಃ ।
ಸ್ನಾತ್ವಾ ಸಂತರ್ಪಯೇದ್ದೇವಾನೃಷೀನ್ ಪಿತೃಗಣಾಂಸ್ತಥಾ ॥ ೨೨ ॥

ಆಚಮ್ಯ ಮಂತ್ರವಿನ್ನಿತ್ಯಂ ಪುನರಾಚಮ್ಯ ವಾಗ್ಯತಃ ।
ಸಂಮಾರ್ಜ್ಯ ಮಂತ್ರೈರಾತ್ಮಾನಂ ಕುಶೈಃ ಸೋದಕಬಿಂದುಭಿಃ ॥ ೨೩ ॥

---

೨೦. ಮತ್ತು ಅಪಾಮಾರ್ಗ ಬಿಲ್ವ ಕರವೀರ ವೃಕ್ಷಗಳ ದಂತಕಾಷ್ಠವು ವಿಶೇಷವಾಗಿ ಉತ್ತಮವಾದುದು. ನಿಷಿದ್ಧವಾದ ದಂತಕಾಷ್ಠಗಳನ್ನು ವರ್ಜಿಸಿ ಹಿಂದೆ ಹೇಳಿದ ಯಾವುದಾದರೊಂದನ್ನು ತೆಗೆದುಕೊಳ್ಳಬೇಕು.

೨೧. ನಿಷಿದ್ಧ ದಿನವನ್ನು ಬಿಟ್ಟು ವಿಧಾನವನ್ನರಿತವನಾಗಿ ಭಕ್ಷಿಸಬೇಕು. ಆ ದಂತಕಾಷ್ಠವನ್ನು ಕೆಳಕ್ಕೆ ಬೀಳಿಸಬಾರದು. ಮತ್ತು ಬೆರಳುಗಳ ತುದಿಯಿಂದ ಧರಿಸಬಾರದು

೨೨. ಅದನ್ನು ತೊಳೆದು ಮುರಿದು ಶುಚಿಯಾದ ದೇಶದಲ್ಲಿ ಸಮಾಧಾನವಾದ ಮಾನಸವುಳ್ಳವನಾಗಿ ಹಾಕಬೇಕು. ತರುವಾಯ ಸ್ನಾನಮಾಡಿ ದೇವತೆ ಋಷಿ ಪಿತೃಗಣಗಳಿಗೆ ತರ್ಪಣಾಂಜಲಿಯನ್ನು ಬಿಡಬೇಕು.

೨೩. ಮಂತ್ರಜ್ಞನಾದ ಮಾನವನು ಆಚಮನಮಾಡಿ ಮತ್ತೊಂದುಸಲ ಆಚಮನಮಾಡಿ ಯಾವಾಗಲೂ ಮೌನವನ್ನು ಧರಿಸಬೇಕು. ಆಮೇಲೆ ಜಲಬಿಂದುಗಳನ್ನು ಸುರಿಸುವ ದರ್ಭಗಳಿಂದ ತನ್ನನ್ನು ಮಾರ್ಜನಮಾಡಿಕೊಳ್ಳಬೇಕು.

ಆಪೋಹಿಷ್ಠಾವ್ಯಾಹೃತಿಭಿಃ ಸಾವಿತ್ರ್ಯಾ ವಾರುಣೈಃ ಶುಭೈಃ ।
ಓಂಕಾರವ್ಯಾಹೃತಿಯುತಾಂ ಗಾಯತ್ರೀಂ ದೇವಮಾತರಮ್ ॥ ೨೪ ॥

ಜಪ್ತ್ವಾ ಜಲಾಂಜಲಿಂ ದದ್ಯಾದ್ಭಾಸ್ಕರಂ ಪ್ರತಿ ತನ್ಮನಾಃ ।
ಪ್ರಾಕ್ಕೂಲೇಷು ತತಃ ಸ್ಥಿತ್ವಾ ದರ್ಭೇಷು ಸುಸಮಾಹಿತಃ ॥ ೨೫ ॥

ಪ್ರಾಣಾಯಾಮತ್ರಯಂ ಕೃತ್ವಾ ಧ್ಯಾಯೇತ್ ಸಂಧ್ಯಾಮಿತಿ ಸ್ಮೃತಿಃ ।
ಯಾ ಚ ಸಂಧ್ಯಾ ಜಗತ್ಸೂತಿರ್ಮಾಯಾತೀತಾ ಹಿ ನಿಷ್ಕಲಾ ॥ ೨೬ ॥

ಐಶ್ವರೀ ಕೇವಲಾ ಶಕ್ತಿಸ್ತತ್ತ್ವತ್ರಯಸಮುದ್ಭವಾ ।
ಧ್ಯಾತ್ವಾರ್ಕಮಂಡಲಗತಾಂ ಸಾವಿತ್ರೀಂ ವೈ ಜಪೇದ್ಬುಧಃ ॥ ೨೭ ॥

---

೨೪. ಆಪೋಹಿಷ್ಠಾ ವ್ಯಾಹೃತಿ ಗಾಯತ್ರೀ ವರುಣಸೂಕ್ತ ಮುಂತಾದ ಮಂಗಳಕರವಾದ ಮಂತ್ರಗಳನ್ನು ಪಠಿಸುತ್ತಾ ಏಕಾಗ್ರತೆಯುಳ್ಳ ಮಾನಸವುಳ್ಳವನಾಗಿ ಓಂಕಾರ-ವ್ಯಾಹೃತಿಗಳಿಂದ ಕೂಡಿದ ದೇವತೆಗಳ ಜನನಿಯಾದ ಗಾಯತ್ರೀ ಮಂತ್ರವನ್ನು ಜಪಿಸಬೇಕು.

೨೫. ಈ ಮಂತ್ರಗಳನ್ನು ಹೇಳಿ ಸೂರ್ಯನನ್ನು ಕುರಿತು ಅರ್ಘ್ಯದಾನವನ್ನು ಮಾಡಬೇಕು. ಪೂರ್ವಾಗ್ರವಾದ ದರ್ಭಗಳ ಆಸನದಲ್ಲಿ ಕುಳಿತುಕೊಂಡು ಚಿತ್ತ ಸಮಾಧಾನವುಳ್ಳವನಾಗಬೇಕು.

೨೬. ಮೂರು ಪ್ರಾಣಾಯಾಮಗಳನ್ನು ಮಾಡಿ ತರುವಾಯ ಸಂಧ್ಯಾದೇವಿಯನ್ನು ಧ್ಯಾನಿಸಬೇಕೆಂದು ಸ್ಮೃತಿಯು ಹೇಳುವುದು. ಸಂಧ್ಯಾದೇವಿಯು ಜಗತ್ತಿಗೆ ಕಾರಣಳೂ, ಮಾಯೆಯನ್ನು ಮೀರಿದವಳೂ, ನಿರವಯವಳೂ, ಆಗಿರುವಳು.

೨೭. ಮತ್ತು ಮೂರು ತತ್ತ್ವಗಳಿಂದ ಹುಟ್ಟಿದ ಈಶ್ವರನ ಕೇವಲ ಶಕ್ತಿರೂಪಳೂ ಆಗಿರುವಳು. ಜ್ಞಾನಿಯು ಸಾವಿತ್ರೀದೇವಿಯನ್ನು ಸೂರ್ಯಮಂಡಲದ ಮಧ್ಯದಲ್ಲಿರುವಂತೆ ಧ್ಯಾನಿಸಿ ಜಪಿಸಬೇಕು.

ಪ್ರಾಙ್ಮುಖಃ ಸತತಂ ವಿಪ್ರಃ ಸಂಧ್ಯೋಪಾಸನಮಾಚರೇತ್ ।
ಸಂಧ್ಯಾಹೀನೋಽಶುಚಿರ್ನಿತ್ಯಮನರ್ಹಃ ಸರ್ವಕರ್ಮಸು ॥ ೨೮ ॥

ಯದನ್ಯತ್ ಕುರುತೇ ಕಿಂಚಿನ್ನ ತಸ್ಯ ಫಲಮಾಪ್ನುಯಾತ್ ।
ಅನನ್ಯಚೇತಸಃ ಶಾಂತಾ ಬ್ರಾಹ್ಮಣಾ ವೇದಪಾರಗಾಃ ॥ ೨೯ ॥

ಉಪಾಸ್ಯ ವಿಧಿವತ್ ಸಂಧ್ಯಾಂ ಪ್ರಾಪ್ತಾಃ ಪೂರ್ವೇ ಪರಾಂ ಗತಿಮ್॥೩೦॥

ಯೋಽನ್ಯತ್ರ ಕುರುತೇ ಯತ್ನಂ ಧರ್ಮಕಾರ್ಯೇ ದ್ವಿಜೋತ್ತಮಃ ।
ವಿಹಾಯ ಸಂಧ್ಯಾಪ್ರಣತಿಂ ಸ ಯಾತಿ ನರಕಾಯುತಮ್ ॥ ೩೧ ॥

ತಸ್ಮಾತ್ ಸರ್ವಪ್ರಯತ್ನೇನ ಸಂಧ್ಯೋಪಾಸನಮಾಚರೇತ್ ।
ಉಪಾಸಿತೋ ಭವೇತ್ತೇನ ದೇವೋ ಯೋಗತನುಃ ಪರಃ । ॥ ೩೨ ॥

---

೨೮. ವಿಪ್ರನು ಯಾವಾಗಲೂ ಪೂರ್ವದಿಕ್ಕಿಗೆ ಅಬಿಮುಖನಾಗಿ ಕುಳಿತು ಸಂಧ್ಯೋಪಾಸನವನ್ನು ಮಾಡಬೇಕು. ಸಂಧ್ಯಾವಂದನೆಯನ್ನು ಬಿಟ್ಟ ಮಾನವನು ಅಶುಚಿಯೂ ಸಮಸ್ತ ಕರ್ಮಗಳಲ್ಲಿ ಅನರ್ಹನೂ ಆಗುವನು.

೨೯. ಮತ್ತು ಮಿಕ್ಕ ಯಾವುದೊಂದು ಕರ್ಮವನ್ನು ಆಚರಿಸಿದರೂ ಅದರ ಫಲವನ್ನು ಹೊಂದುವುದಿಲ್ಲ. ಪೂರ್ವಿಕರಾದ ಬ್ರಾಹ್ಮಣರು ಬೇರೊಂದು ವಿಷಯದಲ್ಲಿ ಮನಸ್ಸಿಲ್ಲದವರೂ, ಶಾಂತರೂ, ವೇದಪಾರಂಗತರೂ, ಆಗಿದ್ದರು.

೩೦. ಅವರು ಯಥಾವಿಧಿಯಾಗಿ ಸಂಧ್ಯಾವಂದನೆಯನ್ನು ಮಾಡಿ ಉತ್ತಮವಾದ ಸದ್ಗತಿಯನ್ನು ಹೊಂದಿರುವರು.

೩೧. ಯಾವ ದ್ವಿಜೋತ್ತಮನು ಸಂಧ್ಯಾವಂದನೆಯನ್ನು ಬಿಟ್ಟು ಬೇರೊಂದು ಧರ್ಮ ಕಾರ್ಯದಲ್ಲಿ ಪ್ರಯತ್ನವನ್ನು ಮಾಡುವನೋ ಅವನು ಅಯುತ ಸಂಖ್ಯೆಯುಳ್ಳ ನರಕವನ್ನು ಹೊಂದುವನು.

೩೨. ಆದುದರಿಂದ ಸಮಸ್ತ ಪ್ರಯತ್ನಗಳಿಂದ ಸಂಧ್ಯಾವಂದನೆಯನ್ನು ಅವಶ್ಯಕವಾಗಿ ಆಚರಿಸಬೇಕು. ಸಂಧ್ಯಾವಂದನೆಯಿಂದ ಯೋಗಮಯವಾದ ವಿಗ್ರಹವುಳ್ಳ ಪರಮಾತ್ಮನು ಸೇವಿಸಲ್ಪಡುವನು.

ಸಹಸ್ರಪರಮಾಂ ನಿತ್ಯಂ ಶತಮಧ್ಯಾಂ ದಶಾವರಾಮ್ ।
ಸಾವಿತ್ರೀಂ ವೈ ಜಪೇದ್ವಿದ್ವಾನ್ ಪ್ರಾಙ್ಮುಖಃ ಪ್ರಯತಃ ಸ್ಥಿತಃ ॥ ೩೩ ॥

ಅಥೋಪತಿಷ್ಠೇದಾದಿತ್ಯಮುದ್ಯಂತಂ ವೈ ಸಮಾಹಿತಃ ।
ಮಂತ್ರೈಸ್ತು ವಿವಿಧೈಃ ಸೌರೈರ್ಋಗ್ಯಜುಃಸಾಮಸಂಭವೈಃ ॥ ೩೪ ॥

ಉಪಸ್ಥಾಯ ಮಹಾಯೋಗಂ ದೇವದೇವಂ ದಿವಾಕರಮ್ ।
ಕುರ್ವೀತ ಪ್ರಣತಿಂ ಭೂಮೌ ಮೂರ್ಧ್ನಾ ತೇನೈವ ಮಂತ್ರತಃ ॥ ೩೫ ॥

ಖದ್ಯೋತಾಯ ಚ ಶಾಂತಾಯ ಕಾರಣತ್ರಯಹೇತವೇ ।
ನಿವೇದಯಾಮಿ ಚಾತ್ಮಾನಂ ನಮಸ್ತೇ ವಿಶ್ವರೂಪಿಣೇ । ॥ ೩೬ ॥

---

೩೩. ವಿದ್ವಾಂಸನು ಪರಿಶುದ್ಧನಾಗಿ ಪೂರ್ವಾಭಿಮುಖವಾಗಿ ಕುಳಿತು ಹೆಚ್ಚೆಂದರೆ ಸಹಸ್ರ ಸಂಖ್ಯೆಯಷ್ಟು ಮಧ್ಯಮ ಪಕ್ಷದಲ್ಲಿ ಒಂದು ನೂರು ಸಂಖ್ಯೆಯಷ್ಟು ಅಥವಾ ನ್ಯೂನವೆಂದರೆ ಹತ್ತು ಸಂಖ್ಯೆಯಷ್ಟು ಅವೃತ್ತಿಯಾಗಿ ಗಾಯತ್ರಿಯನ್ನು ಜಪಿಸಬೇಕು.

೩೪. ಅನಂತರದಲ್ಲಿ ಸಮಾಧಾನವುಳ್ಳ ಚಿತ್ತದಿಂದ ಕೂಡಿ ಋಗ್ವೇದ, ಯಜುರ್ವೇದ, ಸಾಮ ವೇದಗಳಲ್ಲಿ ಲಭಿಸುವ ಸೂರ್ಯ ದೇವತೆಯನ್ನು ಸ್ತುತಿಸುವ ವಿವಿಧ ಮಂತ್ರಗಳಿಂದ ಉದಯಿಸುತ್ತಿದ್ದ ಸೂರ್ಯನನ್ನು ಉಪಸ್ಥಾನ ಮಾಡಬೇಕು.

೩೫. ಮಹಾ ಯೋಗಿಯೂ ದೇವತೆಗಳಿಗೆ ದೇವತೆಯೂ ಆದ ಸೂರ್ಯನನ್ನು ಉಪಸ್ಥಾನಮಾಡಿ ಅದೇ ಮಂತ್ರಗಳಿಂದ ತಲೆಬಾಗಿಸಿ ಭೂಮಿಯಲ್ಲಿ ನಮಸ್ಕಾರ ಮಾಡಬೇಕು.

೩೬. ಆಕಾಶದಲ್ಲಿ ಬೆಳಗುವವನೂ ಶಾಂತಾಕಾರನೂ ಮೂರು ಕಾರಣಗಳಿಗೆ ಕಾರಣನೂ ಮತ್ತು ವಿಶ್ವರೂಪನೂ ಆದ ನಿನಗೆ ನಮಸ್ಕಾರಪೂರ್ವಕವಾಗಿ ನನ್ನ ಆತ್ಮವನ್ನು ನಿವೇದಿಸುತ್ತೇನೆ.

ನಮಸ್ತೇ ಘೃಣಿನೇ ತುಭ್ಯಂ ಸೂರ್ಯಾಯ ಬ್ರಹ್ಮರೂಪಿಣೇ ।
ತ್ವಮೇವ ಬ್ರಹ್ಮ ಪರಮಮಾಪೋ ಜ್ಯೋತೀ ರಸೋಽಮೃತಮ್॥ ೩೭ ॥

ಭೂರ್ಭುವಸ್ಸ್ವಸ್ತ್ವಮೋಂಕಾರಃ ಶರ್ವೋ ರುದ್ರಃ ಸನಾತನಃ ।
ಪುರುಷಃ ಸನ್ಮಹೋಽಂತಸ್ಥಂ ಪ್ರಣಮಾಮಿ ಕಪರ್ದಿನಮ್ ॥ ೩೮ ॥

ತ್ವಮೇವ ವಿಶ್ವಂ ಬಹುಧಾ ಜಾತಂ ಯಜ್ಜಾಯತೇ ಚ ಯತ್ ।

ನಮೋ ರುದ್ರಾಯ ಸೂರ್ಯಾಯ ತ್ವಾಮಹಂ ಶರಣಂ ಗತಃ ॥ ೩೯ ॥

ಪ್ರಚೇತಸೇ ನಮಸ್ತುಭ್ಯಂ ನಮೋ ಮೀಢುಷ್ಟಮಾಯ ಚ ।
ನಮೋ ನಮಸ್ತೇ ರುದ್ರಾಯ ತ್ವಾಮಹಂ ಶರಣಂ ಗತಃ ।
ಹಿರಣ್ಯಬಾಹವೇ ತುಭ್ಯಂ ಹಿರಣ್ಯಪತಯೇ ನಮಃ ॥ ೪೦ ॥

---

೩೭. ದಯಾಮಯನೂ ಬ್ರಹ್ಮ ಸ್ವರೂಪನೂ ಮತ್ತು ಸೂರ್ಯದೇವನೂ ಆದ ನಿನಗೆ ನಮಸ್ಕಾರವು. ನೀನೇ ಪರಬ್ರಹ್ಮ ರೂಪಿಯಾಗಿರುವೆ. ಜಲ ತೇಜಸ್ಸು ಸ್ವರ್ಗ ಇವುಗಳ ಅಮೃತ ರಸ ಸ್ವರೂಪನೂ ಆಗಿದ್ದೀಯೆ.

೩೮. ಭೂಃ, ಭುವಃ, ಸ್ವಃ ಎಂಬ ವ್ಯಾಹೃತಿ ಸ್ವರೂಪನೂ ಓಂಕಾರ ಸ್ವರೂಪನೂ ನೀನೇ ಆಗಿದ್ದೀಯೆ. ಮತ್ತು ಸುಖಕರನೂ ಅನಾದಿಯೂ ಆದ ರುದ್ರ ಮೂರ್ತಿಯೂ ನೀನೇ ಆಗಿದ್ದೀಯೆ. ನಿನ್ನ ಮಂಡಲದ ಒಳಗಿರುವ ಪೂರ್ಣರೂಪನೂ ತೇಜೋಮಯನೂ ಮತ್ತು ಜಟಾಜೂಟಧಾರಿಯೂ ಆದ ಪರಮಾತ್ಮ ಜ್ಯೋತಿಯನ್ನು ನಮಸ್ಕರಿಸುತ್ತೇನೆ.

೩೯. ಹಿಂದೆ ಹುಟ್ಟಿರುವ ಅಥವಾ ಮುಂದೆ ಹುಟ್ಟುವ ಸಮಸ್ತ ವಿಶ್ವವೂ ನೀನೆ ಆಗಿದ್ದೀಯೆ. ರುದ್ರ ಮೂರ್ತಿಯಾದ ಸೂರ್ಯನಿಗೆ ನಮಸ್ಕಾರವು. ನಾನು ನಿನ್ನನ್ನು ಶರಣು ಹೊಂದುವೆನು.

೪೦. ಸರ್ವಜ್ಞನಾದ ನಿನಗೆ ನಮಸ್ಕಾರವು. ಇಷ್ಟಾರ್ಥಗಳನ್ನು ನೀಡುವ ನಿನಗೆ ನಮಸ್ಕಾರವು. ರುದ್ರಮೂರ್ತಿಯಾದ ನಿನಗೆ ನಮಸ್ಕಾರವು. ಸುವರ್ಣದಂತೆ ಉಜ್ವಲವಾದ ಬಾಹುವುಳ್ಳ ನಿನಗೆ ನಮಸ್ಕಾರವು. ಹಿರಣ್ಯಕ್ಕೆ ಪತಿಯಾದ ನಿನಗೆ ನಮಸ್ಕಾರವು. ನಾನು ನಿನ್ನನ್ನು ಶರಣು ಹೊಂದಿರುವೆನು.

ಅಂಬಿಕಾಪತಯೇ ತುಭ್ಯಮುಮಾಯಾಃ ಪತಯೇ ನಮಃ ।
ನಮೋಽಸ್ತು ನೀಲಗ್ರೀವಾಯ ನಮಸ್ತುಭ್ಯಂ ಪಿನಾಕಿನೇ ॥ ೪೧ ॥

ವಿಲೋಹಿತಾಯ ಭರ್ಗಾಯ ಸಹಸ್ರಾಕ್ಷಾಯ ತೇ ನಮಃ ।
ತಮೋಽಪಹಾಯ ತೇ ನಿತ್ಯಮಾದಿತ್ಯಾಯ ನಮೋಽಸ್ತು ತೇ ॥ ೪೨ ॥

ನಮಸ್ತೇ ವಜ್ರಹಸ್ತಾಯ ತ್ರ್ಯಂಬಕಾಯ ನಮೋ ನಮಃ ।
ಪ್ರಪದ್ಯೇ ತ್ವಾಂ ವಿರೂಪಾಕ್ಷಂ ಮಹಾಂತಂ ಪರಮೇಶ್ವರಮ್ ॥ ೪೩ ॥

ಹಿರಣ್ಮಯೇ ಗೃಹೇ ಗುಪ್ತಮಾತ್ಮಾನಂ ಸರ್ವದೇಹಿನಾಮ್ ।
ನಮಸ್ಯಾಮಿ ಪರಂ ಜ್ಯೋತಿ ಬ್ರಹ್ಮಾಣಂ ತ್ವಾಂ ಪರಾಮೃತಮ್ ॥೪೪॥

---

೪೧. ಅಂಬಿಕಾ ಪತಿಯೂ ಉಮಾದೇವಿಯ ಪತಿಯೂ ಆದ ನಿನಗೆ ನಮಸ್ಕಾರವು. ನೀಲವಾದ ಕಂಠವುಳ್ಳ ನಿನಗೆ ನಮಸ್ಕಾರವು. ಪಿನಾಕಾಯುಧವನ್ನು ಧರಿಸಿದ ನಿನಗೆ ನಮಸ್ಕಾರವು.

೪೨. ರಕ್ತವರ್ಣನೂ, ಪಾಪಭಂಜಕನೂ ಮತ್ತು ಸಹಸ್ರ ನೇತ್ರವುಳ್ಳವನೂ ಆದ ನಿನಗೆ ನಮಸ್ಕಾರವು. ಅಂಧಕಾರವನ್ನು ಅಪಹರಿಸುವ ಆದಿತ್ಯ ಮೂರ್ತಿಯಾದ ನಿನಗೆ ಯಾವಾಗಲೂ ನಮಸ್ಕಾರವು.

೪೩. ವಜ್ರವನ್ನು ಹಸ್ತದಲ್ಲಿ ಧರಿಸಿದ ನೇತ್ರತ್ರಯವುಳ್ಳ ನಿನಗೆ ಪುನಃ ಪುನಃ ನಮಸ್ಕಾರವು. ವಿರೂಪವಾದ ನೇತ್ರವುಳ್ಳವನೂ ಮತ್ತು ಪರಮೇಶ್ವರನೂ ಆದ ನಿನ್ನನ್ನು ಶರಣು ಹೊಂದುವೆನು.

೪೪. ಜ್ಯೋತಿರ್ಮಯವಾದ ಗೃಹದಲ್ಲಿ ರಹಸ್ಯವಾಗಿರುವವನೂ ಮತ್ತು ಸರ್ವ ಪ್ರಾಣಿಗಳಿಗೆ ಆತ್ಮರೂಪನೂ, ಪರಂಜ್ಯೋತಿಸ್ವರೂಪನೂ. ಬ್ರಹ್ಮರೂಪಿಯೂ ಶ್ರೇಷ್ಠವಾದ ಅಮೃತ ಸ್ವರೂಪನೂ ಆದ ನಿನ್ನನ್ನು ನಮಸ್ಕರಿಸುತ್ತೇನೆ.

ವಿಶ್ವಂ ಪಶುಪತಿಂ ಭೀಮಂ ನರನಾರೀಶರೀರಿಣಮ್ ।
ನಮಃ ಸೂರ್ಯಾಯ ರುದ್ರಾಯ ಭಾಸ್ವತೇ ಪರಮೇಷ್ಠಿನೇ ॥ ೪೫ ॥

ಉಗ್ರಾಯ ಸರ್ವಭಕ್ಷಾಯ ತ್ವಾಂ ಪ್ರಪದ್ಯೇ ಸದೈವ ಹಿ ।
ಏತದ್ವೈ ಸೂರ್ಯಹೃದಯಂ ಜಪ್ತ್ವಾ ಸ್ತವಮನುತ್ತಮಮ್ ॥ ೪೬ ॥

ಪ್ರಾತಃಕಾಲೇಽಥ ಮಧ್ಯಾಹ್ನೇ ನಮಸ್ಕುರ್ಯಾದ್ದಿವಾಕರಮ್ ।
ಇದಂ ಪುತ್ರಾಯ ಶಿಷ್ಯಾಯ ಧಾರ್ಮಿಕಾಯ ದ್ವಿಜಾತಯೇ ॥ ೪೭ ॥

ಪ್ರದೇಯಂ ಸೂರ್ಯಹೃದಯಂ ಬ್ರಹ್ಮಣಾ ತು ಪ್ರದರ್ಶಿತಮ್ ।
ಸರ್ವಪಾಪಪ್ರಶಮನಂ ವೇದಸಾರಸಮುದ್ಭವಮ್
ಬ್ರಾಹ್ಮಣಾನಾಂ ಹಿತಂ ಪುಣ್ಯಮೃಷಿಸಂಘೈರ್ನಿಷೇವಿತಮ್ । ॥ ೪೮ ॥

---

೪೫. ವಿಶ್ವರೂಪನೂ, ಪಶುಗಳಿಗೆ ಪತಿಯೂ, ಭಯಂಕರನೂ ಪುರುಷ-ನಾರೀ ರೂಪವಾದ ದೇಹವುಳ್ಳವನೂ ಆದ ನಿನ್ನನ್ನು ನಮಸ್ಕರಿಸುತ್ತೇನೆ. ಪೂಜ್ಯಸ್ಥಾನದಲ್ಲಿ ರುವವನೂ ಪ್ರಕಾಶಮಯನೂ ಮತ್ತು ರುದ್ರಮೂರ್ತಿಯೂ ಆದ ಸೂರ್ಯನಿಗೆ ನಮಸ್ಕಾರವು.

೪೬. ಉಗ್ರರೂಪನೂ ಸರ್ವ ಸಂಹಾರಕನೂ ಆದ ಸೂರ್ಯ ದೇವನಿಗೆ ನಮಸ್ಕಾರವು. ನಾನು ಯಾವಾಗಲೂ ನಿನ್ನಲ್ಲಿ ಶರಣಾಗತನಾಗಿದ್ದೇನೆ. ಈ ಸೂರ್ಯ ಹೃದಯವೆಂಬ ಉತ್ತಮವಾದ ಸ್ತೋತ್ರವನ್ನು ಜಪಿಸಬೇಕು.

೪೭. ಹೀಗೆ ಪ್ರಾತಃಕಾಲ ಮತ್ತು ಮಧ್ಯಾಹ್ನ ಕಾಲಗಳಲ್ಲಿ ಸೂರ್ಯನನ್ನು ನಮಸ್ಕರಿಸಬೇಕು. ಈ ಸೂರ್ಯ ಹೃದಯವನ್ನು ಪುತ್ರ ಶಿಷ್ಯ ಅಥವಾ ಧಾರ್ಮಿಕನಾದ ದ್ವಿಜ ಇವರಿಗೆ ಮಾತ್ರ ಉಪದೇಶಿಸಬೇಕು.

೪೮. ಸಮಸ್ತ ಪಾಪಗಳನ್ನು ನಾಶಮಾಡುವುದೂ, ವೇದಗಳ ಸಾರದಿಂದ ಹುಟ್ಟಿರುವುದೂ, ಬ್ರಾಹ್ಮಣರಿಗೆ ಹಿತಕರವೂ, ಪವಿತ್ರವೂ ಮತ್ತು ಅನೇಕ ಋಷಿಗಣಗಳಿಂದ ಸೇವಿಸಲ್ಪಟ್ಟದ್ದೂ ಆದ ಈ ಸೂರ್ಯಹೃದಯವು ಬ್ರಹ್ಮದೇವನಿಂದ ತೋರಿಸಲ್ಪಟ್ಟಿದೆ.

ಅಥಾಗಮ್ಯ ಗೃಹಂ ವಿಪ್ರಃ ಸಮಾಚಮ್ಯ ಯಥಾವಿಧಿ ।
ಪ್ರಜ್ವಾಲ್ಯ ವಹ್ನಿಂ ವಿಧಿವಜ್ಜುಹುಯಾಜ್ಜಾತವೇದಸಮ್ ॥ ೪೯ ॥

ಋತ್ವಿಕ್ ಪುತ್ರೋsಥ ಪತ್ನೀ ವಾ ಶಿಷ್ಯೋ ವಾಪಿ ಸಹೋದರಃ ।
ಪ್ರಾಪ್ಯಾನುಜ್ಞಾಂ ವಿಶೇಷೇಣ ಹ್ಯಧ್ವರ್ಯುರ್ವಾ ಯಥಾವಿಧಿ ॥ ೫೦ ॥

ಪವಿತ್ರಪಾಣಿಃ ಪೂತಾತ್ಮಾ ಶುಕ್ಲಾಂಬರಧರಃ ಶುಚಿಃ ।
ಅನನ್ಯಮನಸಾ ನಿತ್ಯಂ ಜುಹುಯಾತ್ ಸಂಯತೇಂದ್ರಿಯಃ ॥ ೫೧ ॥

ವಿನಾ ದರ್ಭೇಣ ಯತ್ಕರ್ಮ ವಿನಾ ಸೂತ್ರೇಣ ವಾ ಪುನಃ ।
ರಾಕ್ಷಸಂ ತದ್ಭವೇತ್ ಸರ್ವಂ ನಾಮುತ್ರೇಹ ಫಲಪ್ರದಮ್ ॥ ೫೨ ॥

---

೪೯. ಅನಂತರದಲ್ಲಿ ವಿಪ್ರನು ಮನೆಗೆ ಬಂದು ಯಥಾವಿಧಿಯಾಗಿ ಆಚಮನ ಮಾಡಿ ಅಗ್ನಿಯನ್ನು ಪ್ರಜ್ವಲನಮಾಡಿ ಆ ಅಗ್ನಿಯಲ್ಲಿ ಯಥಾವಿಧಿಯಾಗಿ ಹೋಮ ಮಾಡಬೇಕು

೫೦. ಯಜಮಾನನ ಪರವಾಗಿ ಋತ್ವಿಜ ಪುತ್ರ ಪತ್ನಿ ಸಹೋದರ ಅಥವಾ ಅಧ್ವರ್ಯು ಇವರಲ್ಲಿ ಯಾರಾದರೂ ವಿಶೇಷವಾಗಿ ಅನುಜ್ಞೆಯನ್ನು ತೆಗೆದುಕೊಂಡು ಯಥಾವಿಧಿಯಾಗಿ ಹೋಮ ಮಾಡಬೇಕು.

೫೧. ಪವಿತ್ರವನ್ನು ಪಾಣಿಯಲ್ಲಿ ಧರಿಸಿದವನೂ ಶುದ್ಧ ಚಿತ್ತವುಳ್ಳವನೂ ಶುದ್ಧವಾದ ವಸ್ತ್ರವನ್ನು ಧರಿಸಿದವನೂ ಪರಿಶುದ್ಧನೂ ಮತ್ತು ನಿಗ್ರಹಿಸಲ್ಪಟ್ಟ ಇಂದ್ರಿಯಗಳುಳ್ಳವನೂ ಆಗಿ ಯಾವಾಗಲೂ ತತ್ಪರವಾದ ಮನಸ್ಸಿನಿಂದ ಹೋಮ ಮಾಡಬೇಕು.

೫೨. ದರ್ಭೆ ಪವಿತ್ರವನ್ನು ಧರಿಸದೆಯೂ ಯಜ್ಞೋಪವೀತವನ್ನು ಧರಿಸದೆಯೂ ಆಚರಿಸಿದ ಸಮಸ್ತ ಕರ್ಮವೂ ರಾಕ್ಷಸರ ಭಾಗವಾಗುವುದು. ಅದು ಐಹಿಕ ಪಾರತ್ರಿಕ ಫಲಗಳನ್ನು ಕೊಡುವುದಿಲ್ಲ.

ದೈವತಾನಿ ನಮಸ್ಕುರ್ಯಾದುಪಹಾರಾನ್ನಿವೇದಯೇತ್ ।
ದದ್ಯಾತ್ಪುಷ್ಪಾದಿಕಂ ತೇಷಾಂ ವೃದ್ಧಾಂಶ್ಚೈವಾಭಿವಾದಯೇತ್ ॥ ೫೩ ॥

ಗುರುಂ ಚೈವಾಪ್ಯುಪಾಸೀತ ಹಿತಂ ಚಾಸ್ಯ ಸಮಾಚರೇತ್ ।
ವೇದಾಭ್ಯಾಸಂ ತತಃ ಕುರ್ಯಾತ್ ಪ್ರಯತ್ನಾಚ್ಛಕ್ತಿತೋ ದ್ವಿಜಃ ॥೫೪॥

ಜಪೇದಧ್ಯಾಪಯೇಚ್ಛಿಷ್ಯಾನ್ ಧಾರಯೇಚ್ಚ ವಿಚಾರಯೇತ್ ।
ಅವೇಕ್ಷ್ಯ ತಚ್ಚ ಶಾಸ್ತ್ರಾಣಿ ಧರ್ಮಾದೀನಿ ದ್ವಿಜೋತ್ತಮಾಃ ॥ ೫೫ ॥

ವೈದಿಕಾಂಶ್ಚೈವ ನಿಗಮಾನ್ ವೇದಾಂಗಾನಿ ಚ ಸರ್ವಶಃ ।
ಉಪೇಯಾದೀಶ್ವರಂ ವಾಥ ಯೋಗಕ್ಷೇಮಪ್ರಸಿದ್ಧಯೇ ॥ ೫೬ ॥

---

೫೩. ಮತ್ತು ದೇವತೆಗಳನ್ನು ನಮಸ್ಕರಿಸಬೇಕು. ಉಪಹಾರಗಳನ್ನು ನಿವೇದನ ಮಾಡಬೇಕು. ಪುಷ್ಪಾದಿ ಉಪಚಾರಗಳನ್ನು ಅರ್ಪಿಸಬೇಕು. ಮತ್ತು ವೃದ್ಧರಿಗೆ ಅಭಿವಾದನ ಮಾಡಬೇಕು.

೫೪ ತರುವಾಯ ದ್ವಿಜನು ಗುರುವನ್ನು ಶುಶ್ರೂಷೆ ಮಾಡಬೇಕು. ಗುರುವಿಗೆ ಹಿತವನ್ನು ಆಚರಿಸಬೇಕು. ತರುವಾಯ ತನ್ನ ಶಕ್ತಿಯನ್ನು ಅನುಸರಿಸಿ ಪ್ರಯತ್ನ ಪೂರ್ವಕವಾಗಿ ವೇದಾಧ್ಯಯನವನ್ನು ಮಾಡಬೇಕು.

೫೫. ದ್ವಿಜೋತ್ತಮರೇ ! ಜಪ ಮಾಡುವುದು, ಶಿಷ್ಯರಿಗೆ ಅಧ್ಯಾಪನ ಮಾಡಿ ಗ್ರಂಥಗಳನ್ನು ಧಾರಣ ಮಾಡುವುದು ಮತ್ತು ಧರ್ಮ ಶಾಸ್ತ್ರಾದಿಗಳನ್ನು ನೋಡಿ ವಿಚಾರ ಮಾಡುವುದು ಮುಂತಾದ ಕರ್ಮಗಳನ್ನು ಆಚರಿಸಬೇಕು.

೫೬. ಮತ್ತು ವೈದಿಕವಾದ ಗ್ರಂಥಗಳನ್ನೂ, ವೇದಾಂಗಗಳನ್ನೂ ಸಂಪೂರ್ಣವಾಗಿ ಅಧ್ಯಯನ ಮಾಡಬೇಕು. ಮತ್ತು ತನ್ನ ಯೋಗಕ್ಷೇಮಗಳ ಪ್ರಾಪ್ತಿಗೆ ಈಶ್ವರನನ್ನು ಶರಣು ಹೊಂದಬೇಕು.

ಸಾಧಯೇದ್ವಿವಿಧಾನರ್ಥಾನ್ ಕುಟುಂಬಾರ್ಥೇ ತತೋ ದ್ವಿಜಃ ।
ತತೋ ಮಧ್ಯಾಹ್ನಸಮಯೇ ಸ್ನಾನಾರ್ಥಂ ಮೃದಮಾಹರೇತ್ ॥೫೭॥

ಪುಷ್ಪಾಕ್ಷತಾನ್ ಕುಶತಿಲಾನ್ ಗೋಶಕೃತ್ ಶುದ್ಧಮೇವ ವಾ ।
ನದೀಷು ದೇವಖಾತೇಷು ತಡಾಗೇಷು ಸರಃಸು ಚ
ಸ್ನಾನಂ ಸಮಾಚರೇನ್ನಿತ್ಯಂ ಗರ್ತಪ್ರಸ್ರವಣೇಷು ಚ । ॥ ೫೮ ॥

ಪರಕೀಯನಿಪಾನೇಷು ನ ಸ್ನಾಯಾದ್ವೈ ಕದಾಚನ
ಪಂಚಪಿಂಡಾನ್ ಸಮುದ್ಧೃತ್ಯ ಸ್ನಾಯಾದ್ವಾಸಂಭವೇ ಪುನಃ ॥ ೫೯ ॥

ಮೃದೈಕಯಾ ಶಿರಃ ಕ್ಷಾಲ್ಯಂ ದ್ವಾಭ್ಯಾಂ ನಾಭೇಸ್ತಥೋಪರಿ
ಅಧಸ್ತು ತಿಸೃಭಿಃ ಕಾರ್ಯಃ ಪಾದೌ ಷಡ್ಭಿಸ್ತಥೈವ ಚ । ॥ ೬೦ ॥

---

೫೭. ತರುವಾಯ ದ್ವಿಜನು ಕುಟುಂಬ ಪೋಷಣೆಗೋಸ್ಕರ ಅನೇಕ ವಿಧವಾದ ಅರ್ಥಗಳನ್ನು ಆರ್ಜಿಸಬೇಕು. ಆ ಮೇಲೆ ಮಧ್ಯಾಹ್ನ ಸಮಯದಲ್ಲಿ ಸ್ನಾನಕ್ಕೋಸ್ಕರ ಮೃತ್ತಿಕೆಯನ್ನು ತರಬೇಕು.

೫೮. ಮತ್ತು ಪುಷ್ಪ, ಅಕ್ಷತೆ, ದರ್ಭೆ, ಎಳ್ಳು, ಶುದ್ಧ ಗೋಮಯ ಮುಂತಾದವುಗಳನ್ನು ಸಿದ್ಧಪಡಿಸಬೇಕು. ನದಿ, ದೈವನಿರ್ಮಿತವಾದ ಕೆರೆ, ಕೊಳ, ಹಳ್ಳ ಮತ್ತು ಝರಿಗಳಲ್ಲಿ ಯಾವಾಗಲೂ ಸ್ನಾನಮಾಡಬೇಕು

೫೯. ಯಾವಾಗಲೂ ಮತ್ತೊಬ್ಬರ ಪಾನಾರ್ಥವಾದ ಜಲಾಶಯಗಳಲ್ಲಿ ಸ್ನಾನ ಮಾಡಬಾರದು. ಬೇರೆ ಸಂಭವವಿಲ್ಲದಿದ್ದರೆ ಐದು ಮುದ್ದೆ ಮಣ್ಣನ್ನು ಎತ್ತಿ ಹಾಕಿ ಸ್ನಾನ ಮಾಡಬೇಕು.

೬೦. ಒಂದು ಮೃತ್ತಿಕೆಯಿಂದ ತಲೆಯನ್ನೂ, ಎರಡು ಮೃತ್ತಿಕೆಗಳಿಂದ ನಾಭಿಯ ಮೇಲು ಭಾಗವನ್ನೂ ಮೂರು ಮೃತ್ತಿಕೆಗಳಿಂದ ನಾಭಿಯ ಕೆಳಗಿನ ದೇಹವನ್ನೂ ಮತ್ತು ಆರು ಮೃತ್ತಿಕೆಗಳಿಂದ ಪಾದಗಳನ್ನೂ ಶುದ್ಧಿ ಮಾಡಬೇಕು.

ಮೃತ್ತಿಕಾ ಚ ಸಮುದ್ದಿಷ್ಟಾ ಸಾರ್ದ್ರಾಮಲಕಮಾತ್ರಿಕಾ
ಗೋಮಯಸ್ಯ ಪ್ರಮಾಣಂ ತು ತೇನಾಂಗಂ ಲೇಪಯೇತ್ ಪುನಃ ॥೬೧॥

ಲೇಪಯಿತ್ವಾ ತೀರಸಂಸ್ಥಂ ತಲ್ಲಿಂಗೈರೇವ ಮಂತ್ರತಃ
ಪ್ರಕ್ಷಾಲ್ಯಾಚಮ್ಯ ವಿಧಿವತ್ತತಃ ಸ್ನಾಯಾತ್ ಸಮಾಹಿತಃ ॥ ೬೨ ॥

ಅಭಿಮಂತ್ರ್ಯ ಜಲಂ ಮಂತ್ರೈಸ್ತಲ್ಲಿಂಗೈರ್ವಾರುಣೈಃ ಶುಭೈಃ
ಭಾವಪೂತಸ್ತದವ್ಯಕ್ತಂ ಧಾರಯೇದ್ವಿಷ್ಣುಮವ್ಯಯಮ್ ॥ ೬೩ ॥

ಆಪೋ ನಾರಾಯಣೋದ್ಭೂತಾಸ್ತಾ ಏವಾಸ್ಯಾಯನಂ ಪುನಃ
ತಸ್ಮಾನ್ನಾರಾಯಣಂ ದೇವಂ ಸ್ನಾನಕಾಲೇ ಸ್ಮರೇದ್ಬುಧಃ । ॥ ೬೪ ॥

---

೬೧. ಹಸಿಯಾದ ನೆಲ್ಲಿಯ ಕಾಯಿಯ ಪರಿಮಾಣವು ಒಂದೊಂದು ಮೃತ್ತಿಕೆಯ ಪ್ರಮಾಣವು ಹೇಳಲ್ಪಟ್ಟಿದೆ. ಗೋಮಯಕ್ಕೂ ಅದೇ ಪ್ರಮಾಣವು ವಿಹಿತವಾಗಿದೆ. ಆ ಗೋಮಯದಿಂದ ದೇಹವನ್ನು ಲೇಪಿಸಬೇಕು.

೬೨. ತೀರದಲ್ಲಿ ನಿಂತು ಮೃತ್ತಿಕೆಯನ್ನು ಬೋಧಿಸುವ ಮಂತ್ರಗಳಿಂದ ಮೃತ್ತಿಕಾ-ಗೋಮಯಗಳನ್ನು ದೇಹದಲ್ಲಿ ಲೇಪಿಸಿ ದೇಹವನ್ನು ತೊಳೆದು ವಿಧಿವತ್ತಾಗಿ ಆಚಮನಮಾಡಿ ತರುವಾಯ ಸಮಾಧಾನದಿಂದ ಸ್ನಾನ ಮಾಡಬೇಕು.

೬೩. ಜಲ ದೇವತಾ ಮಂತ್ರಗಳಿಂದಲೂ, ವರುಣ ದೇವತೆಯ ಶುಭ ಮಂತ್ರಗಳಿಂದಲೂ ಜಲವನ್ನು ಮಂತ್ರಿಸಿ ಪವಿತ್ರ ಭಾವನೆಯುಳ್ಳವನಾಗಿ ಅವ್ಯಕ್ತನೂ ಶಾಶ್ವತನೂ ಆದ ವಿಷ್ಣುವನ್ನು ಚಿಂತಿಸಬೇಕು.

೬೪. ಜಲಗಳು ನಾರಾಯಣನಿಂದ ಹುಟ್ಟಿವೆ. ಆ ಜಲಗಳು ಮತ್ತೆ ನಾರಾಯಣನಿಗೆ ಸ್ಥಾನವಾಗಿವೆ. ಆದ್ದರಿಂದ ವಿದ್ವಾಂಸನು ಶ್ರೀಮನ್ ನಾರಾಯಣ ಸ್ವಾಮಿಯನ್ನು ಸ್ನಾನ ಕಾಲದಲ್ಲಿ ಸ್ಮರಿಸಬೇಕು.

ಪ್ರೇಕ್ಷ್ಯ ಸೋಂಕಾರಮಾದಿತ್ಯಂ ತ್ರಿರ್ನಿಮಜ್ಜೇಜ್ಜಲಾಶಯೇ
ಆಚಾಂತಃ ಪುನರಾಚಾಮೇತ್ ಮಂತ್ರೇಣಾನೇನ ಮಂತ್ರವಿತ್ ॥ ೬೫ ॥

ಅಂತಶ್ಚರಸಿ ಭೂತೇಷು ಗುಹಾಯಾಂ ವಿಶ್ವತೋಮುಖಃ
ತ್ವಂ ಯಜ್ಞಸ್ತ್ವಂ ವಷಟ್ಕಾರ ಆಪೋ ಜ್ಯೋತೀ ರಸೋಽಮೃತಮ್ ।

ದ್ರುಪದಾಂ ವಾ ತ್ರಿರಭ್ಯಸ್ಯೇದ್ವ್ಯಾಹೃತಿಪ್ರಣವಾನ್ವಿತಾಮ್
ಸಾವಿತ್ರೀಂ ವಾ ಜಪೇದ್ವಿದ್ವಾನ್ ತಥಾ ಚೈವಾಘಮರ್ಷಣಮ್ ॥ ೬೭ ॥

ತತಃ ಸಮ್ಮಾರ್ಜನಂ ಕುರ್ಯಾದಾಪೋಹಿಷ್ಠಾ ಮಯೋಭುವಃ
ಇದಮಾಪಃ ಪ್ರವಹತೋ ವ್ಯಾಹೃತಿಭಿಸ್ತಥೈವ ಚ । ॥ ೬೮ ॥

---

೬೫. ಓಂಕಾರ ಸಹಿತವಾಗಿ ಸೂರ್ಯನನ್ನು ನೋಡಿ ಮೂರುಸಲ ಜಲಾಶಯದಲ್ಲಿ ಅವಗಾಹನಮಾಡಬೇಕು. ಆಚಮನ ಮಾಡಿದ ಮಂತ್ರಜ್ಞನು ಮತ್ತೆ ಈ ಮಂತ್ರದಿಂದ ಆಚಮನ ಮಾಡಬೇಕು.

೬೬. ನೀನು ವಿಶ್ವತೋ ಮುಖನಾಗಿ ಸರ್ವಭೂತಗಳ ಹೃದಯ ಗುಹೆಯ ಒಳಗೆ ಸಂಚರಿಸುತ್ತೀಯೆ. ನೀನು ಯಜ್ಞಸ್ವರೂಪನಾಗಿದ್ದೀಯೆ ಮತ್ತು ನೀನು ವಷಟ್ಕಾರ ಜಲ ತೇಜಸ್ಸು ರಸ ಅಮೃತ ಮುಂತಾದವುಗಳ ಸ್ವರೂಪನೂ ಆಗಿದ್ದೀಯೆ.

೬೭. ತರುವಾಯ ವಿದ್ವಾಂಸನು ದ್ರುಪದಾ ಮಂತ್ರವನ್ನಾಗಲೀ ಓಂಕಾರದಿಂದ ಕೂಡಿದ ವ್ಯಾಹೃತಿ ಪೂರ್ವಕವಾದ ಗಾಯತ್ರೀ ಮಂತ್ರವನ್ನಾಗಲೀ ಹಾಗೂ ಅಘಮರ್ಷಣ ಸೂಕ್ತವನ್ನಾಗಲೀ ಮೂರು ಸಲ ಜಪಿಸಬೇಕು.

೬೮. ಆಮೇಲೆ ಆಪೋಹಿಷ್ಠಾ ಮಯೋ ಭುವಃ ಎಂಬ ಋಙ್ಮಂತ್ರಗಳಿಂದಲೂ ಇದಮಾಪಃ ಪ್ರವಹತ ಎಂಬ ಮಂತ್ರಗಳಿಂದಲೂ ಹಾಗು ವ್ಯಾಹೃತಿ ಮಂತ್ರಗಳಿಂದಲೂ ಮಾರ್ಜನವನ್ನು ಮಾಡಿಕೊಳ್ಳಬೇಕು.

ತಥಾಭಿಮಂತ್ರ್ಯ ತತ್ತೋಯಮಾಪೋ ಹಿಷ್ಠಾದಿಭಿಸ್ತ್ರಿಭಿಃ
ಅಂತರ್ಜಲಗತೋ ಮಗ್ನೋ ಜಪೇತ್ತ್ರಿರಘಮರ್ಷಣಮ್ ॥ ೬೯ ॥

ದ್ರುಪದಾಂ ವಾಥ ಸಾವಿತ್ರೀಂ ತದ್ವಿಷ್ಣೋಃ ಪರಮಂ ಪದಮ್
ಆವರ್ತಯೇಚ್ಚ ಪ್ರಣವಂ ದೇವಂ ವಾ ಸಂಸ್ಮರೇದ್ಧರಿಮ್ ॥ ೭೦ ॥

ದ್ರುಪದಾದಿವ ಯೋ ಮಂತ್ರೋ ಯಜುರ್ವೇದೇ ಪ್ರತಿಷ್ಠಿತಃ
ಅಂತರ್ಜಲೇ ತ್ರಿರಾವರ್ತ್ಯ ಸರ್ವಪಾಪೈಃ ಪ್ರಮುಚ್ಯತೇ ॥ ೭೧ ॥

ಅಪಃ ಪಾಣೌ ಸಮಾದಾಯ ಜಪ್ತ್ವಾ ವೈ ಮಾರ್ಜನೇ ಕೃತೇ
ವಿನ್ಯಸ್ಯ ಮೂರ್ಧ್ನಿ ತತ್ತೋಯಂ ಮುಚ್ಯತೇ ಸರ್ವಪಾತಕೈಃ ॥ ೭೨ ॥

---

೬೯. ಮತ್ತು ಜಲಾಶಯದ ಮಧ್ಯದಲ್ಲಿ ಇಳಿದು ಆಪೋಹಿಷ್ಠಾ ಮುಂತಾದ ಮೂರು ಮಂತ್ರಗಳಿಂದ ಆ ತೀರ್ಥವನ್ನು ಅಭಿಮಂತ್ರಿಸಿ ಮುಳುಗಿಕೊಂಡು ಮೂರುಸಲ ಅಘಮರ್ಷಣ ಸೂಕ್ತವನ್ನು ಜಪಿಸಬೇಕು.

೭೦. ಮತ್ತು ದ್ರುಪದಾ ಮಂತ್ರವನ್ನೂ ಗಾಯತ್ರೀ ಮಂತ್ರವನ್ನೂ ತದ್ವಿಷ್ಣೋಃ ಪರಮಂ ಪದಂ ಎಂಬ ಮಂತ್ರವನ್ನೂ ಹಾಗು ಓಂಕಾರವನ್ನೂ ಆವೃತ್ತಿಯಾಗಿ ಪಠಿಸಬೇಕು. ಮತ್ತು ಶ್ರೀ ಮಹಾವಿಷ್ಣುವನ್ನು ಸ್ಮರಿಸಬೇಕು.

೭೧. ಯಜುರ್ವೇದದಲ್ಲಿ ನೆಲೆಗೊಂಡಿರುವ ದ್ರುಪದಾದಿವ ಎಂಬ ಮಂತ್ರವನ್ನು ಜಲಮಧ್ಯದಲ್ಲಿ ನಿಂತು ಮೂರು ಸಲ ಆವೃತ್ತಿ ಮಾಡುವುದರಿಂದ ಸಮಸ್ತ ಪಾತಕಗಳಿಂದ ಮುಕ್ತನಾಗುವನು.

೭೨. ಮಾರ್ಜನವನ್ನು ಮಾಡಿಕೊಂಡ ನಂತರದಲ್ಲಿ ಹಸ್ತದಲ್ಲಿ ಜಲವನ್ನು ತೆಗೆದುಕೊಂಡು ಮಂತ್ರವನ್ನು ಜಪಿಸಿ ಆ ನೀರನ್ನು ತಲೆಯಲ್ಲಿ ಪ್ರೋಕ್ಷಿಸುವುದರಿಂದ ಸಮಸ್ತ ಪಾಪಗಳಿಂದ ಮುಕ್ತನಾಗುವನು.

ಯಥಾಶ್ವಮೇಧಃ ಕ್ರತುರಾಟ್ ಸರ್ವಪಾಪಾಪನೋದನಃ
ತಥಾಘಮರ್ಷಣಂ ಪ್ರೋಕ್ತಂ ಸರ್ವಪಾಪಾಪನೋದನಮ್ ॥ ೭೩ ॥

ಅಥೋಪತಿಷ್ಠೇದಾದಿತ್ಯಮೂರ್ಧ್ವಂ ಪುಷ್ಪಾಕ್ಷತಾನ್ವಿತಮ್
ಪ್ರಕ್ಷಿಪ್ಯಾಲೋಕಯೇದ್ದೇವಮೂರ್ಧ್ವಂ ಯಸ್ತಮಸಃ ಪರಃ ॥ ೭೪ ॥

ಉದುತ್ಯಂ ಚಿತ್ರಮಿತ್ಯೇತೇ ತಚ್ಚಕ್ಷುರಿತಿ ಮಂತ್ರತಃ
ಹಂಸಃ ಶುಚಿಷದಂತೇನ ಸಾವಿತ್ರ್ಯಾ ಸವಿಶೇಷತಃ ॥ ೭೫ ॥

ಅನ್ಯೈಶ್ಚ ವೈದಿಕೈರ್ಮಂತ್ರೈಃ ಸೌರ್ಯೈಃ ಪಾಪಪ್ರಣಾಶನೈಃ ।
ಸಾವಿತ್ರೀಂ ವೈ ಜಪೇತ್ ಪಶ್ಚಾಜ್ಜಪಯಜ್ಞಃ ಸವೈಸ್ಮೃತಃ ॥ ೭೬ ॥

---

೭೩. ಯಜ್ಞಗಳಲಿ ಅಶ್ವಮೇಧವು ಹೇಗೆ ಯಜ್ಞರಾಜನ ಪಾತಕಗಳನ್ನು ಕಳೆಯುವುದೋ ಹಾಗೆ ಅಘಮರ್ಷಣ ಸೂಕ್ತವು ಸರ್ವ ಪಾಪಗಳನ್ನು ಕಳೆಯುವು ದೆಂದು ಹೇಳಲ್ಪಟ್ಟಿದೆ.

೭೪. ತರುವಾಯ ಸೂರ್ಯನನ್ನು ಉಪಸ್ಥಾನ ಮಾಡಬೇಕು ಆದಿಯಲ್ಲಿ ಪುಷ್ಪ ಅಕ್ಷತೆಗಳಿಂದ ಕೂಡಿದ ಅರ್ಘ್ಯಾಂಜಲಿಯನ್ನು ಮೇಲಕ್ಕೆ ಎಸೆದು ತಮೋಗುಣಾ ತೀತನಾದ ಸೂರ್ಯದೇವನನ್ನು ನೋಡಬೇಕು.

೭೫. ಆ ಸೂರ್ಯೋಪಸ್ಥಾನ ಸಮಯದಲ್ಲಿ ಉದುತ್ಯಂ ಜಾತ ವೇದಸಂ ಚಿತ್ರಂ ದೇವಾನಾಂ, ತಚ್ಚಕ್ಷುಃ ದೇವಹಿತಂ; ಹಂಸಃ ಶುಚಿಷತ್ ; ಮತ್ತು ಸವಿತೃ ದೇವತೆಯನ್ನು ಬೋಧಿಸುವ ವಿಶೇಷ ಮಂತ್ರಗಳಿಂದ ಸೂರ್ಯನನ್ನು ಸ್ತುತಿಸಬೇಕು.

೭೬. ಮತ್ತು ಪಾಪಗಳನ್ನು ಕಳೆಯುವ ವೈದಿಕವಾದ ಸೂರ್ಯ ಮಂತ್ರಗಳಿಂದಲೂ, ಉಪಸ್ಥಾನ ಮಾಡಬೇಕು. ತರುವಾಯ ಗಾಯತ್ರೀ ಜಪ ವನ್ನು ಮಾಡಬೇಕು. ಅದು ಜಪ ಯಜ್ಞವೆಂದು ಸ್ಮರಿಸಲ್ಪಟ್ಟಿದೆ.

ವಿವಿಧಾನಿ ಪವಿತ್ರಾಣಿ ಗುಹ್ಯವಿದ್ಯಾಸ್ತಥೈವ ಚ ।
ಶತರುದ್ರೀಯಂ ಶಿರಸಂ ಸೌರಾನ್ ಮಂತ್ರಾಂಶ್ಚ ಸರ್ವಶಃ ॥ ೭೭ ॥

ಪ್ರಾಕ್ಕೂಲೇಷು ಸಮಾಸೀನಃ ಕುಶೇಷು ಪ್ರಾಙ್ಮುಖಃ ಶುಚಿಃ ।
ತಿಷ್ಠಂಶ್ಚ ವೀಕ್ಷಮಾಣೋಽರ್ಕಂ ಜಪ್ಯಂ ಕುರ್ಯಾತ್ ಸಮಾಹಿತಃ॥೭೮॥

ಸ್ಫಾಟಿಕೇಂದ್ರಾಕ್ಷರುದ್ರಾಕ್ಷೈಃ ಪುತ್ರಜೀವಸಮುದ್ಭವೈಃ ।
ಕರ್ತವ್ಯಾ ತ್ವಕ್ಷಮಾಲಾ ಸ್ಯಾದುತ್ತರಾದುತ್ತಮಾ ಸ್ಮೃತಾ ॥ ೭೯ ॥

ಜಪಕಾಲೇ ನ ಭಾಷೇತ ವ್ಯಂಗಾನ್ ನ ಪ್ರೇಕ್ಷಯೇದ್ಬುಧಃ ।
ನ ಕಂಪಯೇಚ್ಛಿರೋ ಗ್ರೀವಾಂ ದಂತಾನ್ನೈವ ಪ್ರಕಾಶಯೇತ್ ॥ ೮೦ ॥

---

೭೭. ಮತ್ತು ಅನೇಕ ಪವಿತ್ರ ಮಂತ್ರಗಳನ್ನೂ ಗುಹ್ಯ ವಿದ್ಯೆಗಳನ್ನೂ ಶತರುದ್ರೀಯಾಧ್ಯಾಯವನ್ನೂ ಅಥರ್ವ ಶಿರಸ್ಸನ್ನೂ ಮತ್ತು ಸಮಸ್ತ ಸೂರ್ಯ ದೇವತಾ ಮಂತ್ರಗಳನ್ನೂ ಪಠಿಸಬೇಕು.

೭೮. ಪೂರ್ವಾಗ್ರಹಗಳಾಗಿರುವ ದರ್ಭೆಗಳ ಆಸನದಲ್ಲಿ ಪವಿತ್ರನೂ ಪೂರ್ವಾಭಿಮುಖನೂ ಆಗಿ ನಿಂತು ಕೊಂಡು ಸೂರ್ಯ ಮಂಡಲವನ್ನು ಸಮಾಧಾನ ಚಿತ್ತದಿಂದ ಧ್ಯಾನಿಸುತ್ತ ಜಪವನ್ನು ಮಾಡಬೇಕು.

೭೯. ಸ್ಫಟಿಕ, ಇಂದ್ರಾಕ್ಷ, ರುದ್ರಾಕ್ಷ, ಅಥವಾ ಪುತ್ರಜೀವ ಎಂಬುವುಗಳಿಂದ ಉಂಟಾದ ಮಣಿಗಳಿಂದ ಜಪದಮಾಲೆಯು ಮಾಡಲ್ಪಡಬೇಕು. ಇವುಗಳಲ್ಲಿ ಉತ್ತರೋತ್ತರವಾದ ಮಾಲೆಯು ಉತ್ತಮವೆಂದು ಸ್ಮರಿಸಲ್ಪಟ್ಟಿದೆ.

೮೦. ಜಪಮಾಡುವ ಸಮಯದಲ್ಲಿ ಮಾತನಾಡಬಾರದು ಊನಾಂಗಿಗಳನ್ನು ನೋಡಬಾರದು. ತಲೆಯನ್ನು ಅಡಿಸಬಾರದು ಕತ್ತನ್ನು ಚಲಿಸಬಾರದು. ಮತ್ತು ದಂತಗಳನ್ನು ಪ್ರಕಾಶ ಪಡಿಸಬಾರದು.

ಗುಹ್ಯಕಾ ರಾಕ್ಷಸಾಃ ಸಿದ್ಧಾ ಹರಂತಿ ಪ್ರಸಭಂ ಯತಃ ।
ಏಕಾಂತೇಷು ಶುಚೌ ದೇಶೇ ತಸ್ಮಾಜ್ಜಪ್ಯಂ ಸಮಾಚರೇತ್ ॥ ೮೧ ॥

ಚಂಡಾಲಾಶೌಚಪತಿತಾನ್ ದೃಷ್ಟ್ವಾ ಚೈವ ಪುನರ್ಜಪೇತ್ ।
ತೈರೇವ ಭಾಷಣಂ ಕೃತ್ವಾ ಸ್ನಾತ್ವಾ ಚೈವ ಪುನರ್ಜಪೇತ್ ॥ ೮೨ ॥

ಆಚಮ್ಯ ಪ್ರಯತೋ ನಿತ್ಯಂ ಜಪೇದಶುಚಿದರ್ಶನೇ ।
ಸೌರಾನ್ ಮಂತ್ರಾನ್ ಶಕ್ತಿತೋ ವೈ ಪಾವಮಾನೀಸ್ತು ಕಾಮತಃ॥೮೩॥

ಯದಿ ಸ್ಯಾತ್ ಕ್ಲಿನ್ನವಾಸಾ ವೈ ವಾರಿಮಧ್ಯಂ ಗತೋಽಪಿ ವಾ ।
ಅನ್ಯಥಾ ತು ಶುಚೌ ಭೂಮ್ಯಾಂ ದರ್ಭೇಷು ಸುಸಮಾಹಿತಃ ॥ ೮೪ ॥

---

೮೧. ಯಾವ ಕಾರಣದಿಂದ ಗುಹ್ಯಕರು, ರಾಕ್ಷಸರು ಮತ್ತು ಸಿದ್ಧರು ಬಲಾತ್ಕಾರವಾಗಿ ಜಪದ ಫಲವನ್ನು ಅಪಹರಿಸುವರೋ, ಆದ್ದರಿಂದ ರಹಸ್ಯ ಸ್ಥಳದಲ್ಲಿ ಪವಿತ್ರ ದೇಶದಲ್ಲಿ ಜಪವನ್ನು ಆಚರಿಸಬೇಕು.

೮೨. ಜಪಸಮಯದಲ್ಲಿ ಚಂಡಾಲ, ಆಶೌಚವಂತ ಮತ್ತು ಪತಿತರನ್ನು ಕಂಡರೆ ಮತ್ತೆ ಜಪ ಮಾಡಬೇಕು. ಮತ್ತು ಅವನೊಡನೆ ಸಂಭಾಷಣೆಯನ್ನು ಮಾಡಿದರೆ ಸ್ನಾನಮಾಡಿ ಜಪವನ್ನು ಮಾಡಬೇಕು.

೮೩. ಅಶುಚಿವಸ್ತುವನ್ನು ಕಂಡರೆ ಆಚಮನ ಮಾಡಿ ಪವಿತ್ರನಾಗಿ ಯಾವಾಗಲೂ ಜಪಿಸಬೇಕು. ಯಥಾ ಶಕ್ತಿಯಾಗಿ ಸೌರಮಂತ್ರಗಳನ್ನೂ ಪಾವಮಾನೀ ಋಙ್ಮಂತ್ರಗಳನ್ನೂ ಕ್ರಮಾನುಸಾರವಾಗಿ ಜಪಿಸಬೇಕು.

೮೪. ಜಲಮಧ್ಯದಲ್ಲಿ ಇರುವುದಾದರೆ ಆರ್ದ್ರವಾದ ವಸ್ತ್ರವನ್ನು ಧರಿಸಿದವನಾಗಿಯೂ ಹಾಗಿಲ್ಲದಿದ್ದರೆ ಪವಿತ್ರವಾದ ಭೂಮಿಯಲ್ಲಿ ದರ್ಭಾಸನದಲ್ಲಿರುವವನಾಗಿಯೂ ಮತ್ತು ಸಮಾಧಾನ ಚಿತ್ತವುಳ್ಳವನಾಗಿಯೂ ಜಪಿಸಬೇಕು.

**ಪ್ರದಕ್ಷಿಣಂ ಸಮಾವೃತ್ಯ ನಮಸ್ಕೃತ್ಯ ತತಃ ಕ್ಷಿತೌ ।**
**ಆಚಮ್ಯ ಚ ಯಥಾಶಾಸ್ತ್ರಂ ಭಕ್ತ್ಯಾ ಸ್ವಾಧ್ಯಾಯಮಾಚರೇತ್ ॥ ೮೫ ॥**

**ತತಃ ಸಂತರ್ಪಯೇದ್ದೇವಾನೃಷೀನ್ ಪಿತೃಗಣಾಂಸ್ತಥಾ ।**
**ಆದಾವೋಂಕಾರಮುಚ್ಚಾರ್ಯ ನಾಮಾಂತೇ ತರ್ಪಯಾಮಿ ವಃ ॥ ೮೬ ॥**

**ದೇವಾನ್ ಬ್ರಹ್ಮಋಷೀಂಶ್ಚೈವ ತರ್ಪಯೇದಕ್ಷತೋದಕೈಃ ।**
**ತಿಲೋದಕೈಃ ಪಿತೄನ್ ಭಕ್ತ್ಯಾ ಸ್ವಸೂತ್ರೋಕ್ತವಿಧಾನತಃ ॥ ೮೭ ॥**

**ಅನ್ವಾರಬ್ಧೇನ ಸವ್ಯೇನ ಪಾಣಿನಾ ದಕ್ಷಿಣೇನ ತು ।**
**ದೇವರ್ಷೀಂಸ್ತರ್ಪಯೇದ್ಧೀಮಾನುದಕಾಂಜಲಿಭಿಃ ಪಿತೄನ್ ॥ ೮೮ ॥**

---

೮೫. ಪ್ರದಕ್ಷಿಣಾಕಾರವಾಗಿ ಸುತ್ತಿ ಆಮೇಲೆ ಭೂಮಿಯಲ್ಲಿ ನಮಸ್ಕಾರವಮಾಡಿ ಶಾಸ್ತ್ರ ವಿಧಿಯಂತೆ ಆಚಮನಮಾಡಿ ತರುವಾಯ ಭಕ್ತಿ ಪೂರ್ವಕವಾಗಿ ಸ್ವಾಧ್ಯಾಯವನ್ನು ಜಪಿಸಬೇಕು.

೮೬. ಆಮೇಲೆ ದೇವತೆ, ಋಷಿ ಮತ್ತು ಪಿತೃಗಣಗಳಿಗೆ ತರ್ಪಣಾಂಜಲಿಯನ್ನು ಬಿಡಬೇಕು. ತರ್ಪಣ ಮಂತ್ರದಲ್ಲಿ ಮೊದಲು ಓಂಕಾರವನ್ನು ಜಪಿಸಿ,ನಾಮದ ಕಡೆಯಲ್ಲಿ “ ತರ್ಪಯಾಮಿ ವಃ ” ಎಂದು ಸೇರಿಸಿ ಮಂತ್ರವನ್ನು ಹೇಳಬೇಕು.

೮೭. ದೇವತೆಗಳನ್ನೂ, ಬ್ರಹ್ಮರ್ಷಿಗಳನ್ನೂ ಅಕ್ಷತೆಗಳಿಂದ ಮಿಶ್ರವಾದ ಜಲದಿಂದ ತರ್ಪಣ ಮಾಡಬೇಕು. ಪಿತೃಗಳಿಗೆ ತಿಲ ಮಿಶ್ರವಾದ ಜಲದಿಂದ ತನ್ನ ಗೃಹ್ಯಸೂತ್ರದಲ್ಲಿ ಹೇಳಿದ ವಿಧಾನದಂತೆ ಭಕ್ತಿ ಪೂರ್ವಕವಾಗಿ ತರ್ಪಣವನ್ನು ಮಾಡಬೇಕು.

೮೮. ವಿದ್ವಾಂಸನು ಎಡಭಾಗದ ಹಸ್ತದಿಂದ ಮುಟ್ಟಿದ್ದ ಬಲಭಾಗದ ಹಸ್ತದಿಂದ ದೇವ ಋಷಿಗಳಿಗೆ ತರ್ಪಣವನ್ನು ಬಿಡಬೇಕು. ಹಾಗು ಜಲಪೂರ್ಣವಾದ ಅಂಜಲಿಯಿಂದ ಪಿತೃಗಳಿಗೆ ತರ್ಪಣವನ್ನು ಕೊಡಬೇಕು.

ಯಜ್ಞೋಪವೀತೀ ದೇವಾನಾಂ ನಿವೀತೀ ಋಷಿತರ್ಪಣೇ ।
ಪ್ರಾಚೀನಾವೀತೀ ಪಿತ್ರ್ಯೇ ತು ಸ್ವೇನ ತೀರ್ಥೇನ ಭಾವಿತಃ ॥ ೮೯ ॥

ನಿಷ್ಪೀಡ್ಯ ಸ್ನಾನವಸ್ತ್ರಂ ತು ಸಮಾಚಮ್ಯ ಚ ವಾಗ್ಯತಃ ।
ಸ್ವೈರ್ಮಂತ್ರೈರರ್ಚಯೇದ್ದೇವಾನ್ ಪುಷ್ಪೈಃ ಪತ್ರೈರಥಾಂಬುಭಿಃ ॥

ಬ್ರಹ್ಮಾಣಂ ಶಂಕರಂ ಸೂರ್ಯಂ ತಥೈವ ಮಧುಸೂದನಮ್ ।
ಅನ್ಯಾಂಶ್ಚಾಭಿಮತಾನ್ ದೇವಾನ್ ಭಕ್ತ್ಯಾಚಾರೋ ನರೋತ್ತಮಃ॥೯೧॥

ಪ್ರದದ್ಯಾದ್ವಾಥ ಪುಷ್ಪಾಣಿ ಸೂಕ್ತೇನ ಪೌರುಷೇಣ ತು ।
ಆಪೋ ವಾ ದೇವತಾಃ ಸರ್ವಾಸ್ತೇನ ಸಮ್ಯಕ್ ಸಮರ್ಚಿತಾಃ ॥ ೯೨ ॥

---

೮೯. ದೇವತೆಗಳಿಗೆ ಉಪವೀತದಿಂದಲೂ ಋಷಿಗಳಿಗೆ ನಿವೀತದಿಂದಲೂ ಮತ್ತು ಪಿತೃಗಳಿಗೆ ಪ್ರಾಚೀನಾವೀತದಿಂದಲೂ ತರ್ಪಣವನ್ನು ಕೊಡಬೇಕು. ಮತ್ತು ದೇವ ಋಷಿ ಪಿತೃಗಳಿಗೆ ಆಯಾಯ ತೀರ್ಥವನ್ನು ಸ್ಮರಿಸಿಕೊಂಡವನಾಗಿ ಅದರಿಂದಲೇ ತರ್ಪಣವನ್ನು ಕೊಡಬೇಕು.

೯೦. ಸ್ನಾನ ವಸ್ತ್ರವನ್ನು ಹಿಂಡಿ ಆಚಮನ ಮಾಡಿ ಮೌನ ವ್ರತವನ್ನು ತಾಳಿ ಆಯಾಯ ದೇವತಾ ಮಂತ್ರಗಳನ್ನು ಪಠಿಸಿ ಪುಷ್ಪ, ಪತ್ರ ಮತ್ತು ಜಲಗಳನ್ನು ಯಥಾ ಶಕ್ತಿಯಾಗಿ ಅರ್ಪಿಸಿ ದೇವತೆಗಳನ್ನು ಅರ್ಚಿಸಬೇಕು.

೯೧. ಶ್ರೇಷ್ಠನಾದ ಮಾನವನು ತನ್ನ ಭಕ್ತಿಗೆ ಅನುಗುಣವಾದ ಆಚಾರ ವುಳ್ಳವನಾಗಿ ಬ್ರಹ್ಮ, ಈಶ್ವರ, ಸೂರ್ಯ, ವಿಷ್ಣು ಮತ್ತು ಇತರ ಅಭಿಮತ ದೇವ ತೆಗಳನ್ನು ಪೂಜಿಸಬೇಕು.

೯೨ ಅಥವಾ ದೇವತೆಗೆ ಪುರುಷ ಸೂಕ್ತವನ್ನು ಹೇಳಿ ಪುಷ್ಪಾಂಜಲಿಯನ್ನು ಅರ್ಪಿಸಬೇಕು. ಅಥವಾ ಜಲವು ಸರ್ವ ದೇವತಾ ಸ್ವರೂಪವಾದುದರಿಂದ ಅಂತಹ ಜಲವನ್ನು ಅರ್ಪಿಸಿ ದೇವತೆಗಳನ್ನು ಚೆನ್ನಾಗಿ ಅರ್ಚಿಸಬೇಕು.

ಧ್ಯಾತ್ವಾ ಪ್ರಣವಪೂರ್ವಂ ವೈ ದೈವತಾನಿ ಸಮಾಹಿತಃ ।
ನಮಸ್ಕಾರೇಣ ಪುಷ್ಪಾಣಿ ವಿನ್ಯಸೇದ್ವೈ ಪೃಥಕ್ ಪೃಥಕ್ ॥ ೯೩ ॥

ವಿಷ್ಣೋರಾರಾಧನಾತ್ಪುಣ್ಯಂ ನಿದ್ಯತೇ ಕರ್ಮ ವೈದಿಕಮ್ ।
ತಸ್ಮಾದನಾದಿನಿಧನಂ ನಿತ್ಯಮಾರಾಧಯೇದ್ಧರಿಮ್ ॥ ೯೪ ॥

ತದ್ವಿಷ್ಣೋರಿತಿ ಮಂತ್ರೇಣ ಸೂಕ್ತೇನ ಸುಸಮಾಹಿತಃ ।
ನ ತಾಭ್ಯಾಂ ಸದೃಶೋ ಮಂತ್ರೋ ವೇದೇಷೂಕ್ತಶ್ಚತುರ್ಷ್ವಪಿ ॥ ೯೫ ॥

ತದಾತ್ಮಾ ತನ್ಮನಾಃ ಶಾಂತಸ್ತದ್ವಿಷ್ಣೋರಿತಿ ಮಂತ್ರತಃ । ॥ ೯೬ ॥

---

೯೩. ಚಿತ್ತೈಕಾಗ್ರತೆಯುಳ್ಳವನಾಗಿ ಓಂಕಾರ ಪೂರ್ವಕವಾಗಿ ಆಯಾಯ ದೇವತೆಗಳನ್ನು ಧ್ಯಾನಿಸಿ ನಮಸ್ಕಾರ ಮಾಡುತ್ತಾ ಪುಷ್ಪಗಳನ್ನು ಪ್ರತ್ಯೇಕವಾಗಿ ಅರ್ಪಿಸಿ ಪುಷ್ಪಾರ್ಚನೆಯನ್ನು ಮಾಡಬೇಕು.

೯೪. ವಿಷ್ಣುವಿನ ಆರಾಧನೆಗಿಂತಲೂ ಪುಣ್ಯಕರವಾದ ವೈದಿಕ ಕರ್ಮವು ಮತ್ತಾವುದೂ ಇರುವುದಿಲ್ಲ ಆದ್ದರಿಂದ ಆದಿ-ಮಧ್ಯ-ಅಂತಗಳಿಂದ ವರ್ಜಿತನಾದ ಮಹಾವಿಷ್ಣುವನ್ನು ಪ್ರತಿ ನಿತ್ಯದಲ್ಲಿಯೂ ಅರ್ಚಿಸಬೇಕು.

೯೫. " ತದ್ವಿಷ್ಣೋಃ " ಎಂಬ ಮಂತ್ರದ್ವಯ ರೂಪವಾದ ಸೂಕ್ತದಿಂದ ಸಮಾಧಾನವುಳ್ಳ ಮನಸ್ಸುಳ್ಳವನಾಗಿ ವಿಷ್ಣುವನ್ನು ಭಜಿಸಬೇಕು. ನಾಲ್ಕು ವೇದಗಳಲ್ಲಿಯೂ ತದ್ವಿಷ್ಣೋಃ ಎಂಬ ಎರಡು ಮಂತ್ರಗಳಿಗೆ ಸಮವಾದ ಬೇರೊಂದು ಮಂತ್ರವಿಲ್ಲ.

೯೬. ಆದುದರಿಂದ ಆ ಮಹಾ ವಿಷ್ಣುವಿನಲ್ಲಿ ಆಸಕ್ತವಾದ ಆತ್ಮವುಳ್ಳವನೂ ಅವನಲ್ಲಿ ತತ್ಪರವಾದ ಮಾನಸವುಳ್ಳವನೂ ಮತ್ತು ಶಾಂತನೂ ಆಗಿ ತದ್ವಿಷ್ಣೋಃ ಎಂಬ ಮಂತ್ರಗಳನ್ನು ಹೇಳಿ ಮಹಾ ವಿಷ್ಣುವನ್ನು ಅರ್ಚಿಸಬೇಕು.

ಅಥವಾ ದೇವಮೀಶಾನಂ ಭಗವಂತಂ ಸನಾತನಮ್
ಆರಾಧಯೇನ್ಮಹಾದೇವಂ ಭಾವಪೂತೋ ಮಹೇಶ್ವರಮ್ ॥೯೭॥

ಮಂತ್ರೇಣ ರುದ್ರಗಾಯತ್ರ್ಯಾ ಪ್ರಣವೇನಾಥವಾ ಪುನಃ
ಈಶಾನೇನಾಥವಾ ರುದ್ರೈಸ್ತ್ರ್ಯಂಬಕೇನ ಸಮಾಹಿತಃ । ॥೯೮॥

ಪುಷ್ಪೈಃ ಪತ್ರೈರಥಾದ್ಭಿರ್ವಾ ಚಂದನಾದ್ಯೈರ್ಮಹೇಶ್ವರಮ್
ಉಕ್ತ್ವಾ ನಮಃ ಶಿವಾಯೇತಿ ಮಂತ್ರೇಣಾನೇನ ವಾ ಜಪೇತ್ ॥ ೯೯ ॥

ನಮಸ್ಕುರ್ಯಾನ್ಮಹಾದೇವಂ ತಂ ಮೃತ್ಯುಂಜಯಮೀಶ್ವರಮ್ ।
ನಿವೇದಯೀತ ಸ್ವಾತ್ಮಾನಂ ಯೋ ಬ್ರಹ್ಮಾಣಮಿತೀಶ್ವರಮ್ ॥೧೦೦॥

---

೯೭. ಅಥವಾ ಪವಿತ್ರವಾದ ಭಾವನೆಯುಳ್ಳವನಾಗಿ ಸರ್ವ ನಿಯಾಮಕನೂ ಭಗವಂತನೂ, ಅನಾದಿಯೂ, ಮಹಾ ದೇವನೂ, ಮತ್ತು ಮಹೇಶ್ವರನೂ ಆದ ಈಶ್ವರನನ್ನು ಆರಾಧಿಸಬೇಕು.

೯೮. ರುದ್ರ ಗಾಯತ್ರೀ ಮಂತ್ರದಿಂದಲೂ ಈಶಾನ ಮಂತ್ರದಿಂದಲೂ ರುದ್ರ ಮಂತ್ರಗಳಿಂದಲೂ ಮತ್ತು ತ್ರ್ಯಂಬಕ ಮಂತ್ರದಿಂದಲೂ ಸಮಾಧಾನವಾದ ಚಿತ್ತವುಳ್ಳವನಾಗಿ ಈಶ್ವರನನ್ನು ಅರ್ಚಿಸಬೇಕು.

೯೯. ನಮಶ್ಶಿವಾಯ ಎಂಬ ಮಂತ್ರವನ್ನು ಹೇಳಿ ಪುಷ್ಪ, ಪತ್ರ, ಜಲ, ಗಂಧ ಮುಂತಾದ ವಿವಿಧೋಪಚಾರಗಳಿಂದ ಈಶ್ವರನನ್ನು ಅರ್ಚಿಸಬೇಕು.ಅಥವಾ ನಮಶ್ಶಿವಾಯ ಮಂತ್ರವನ್ನು ಜಪಿಸಬೇಕು.

೧೦೦: ಮತ್ತು ಮೃತ್ಯುವನ್ನು ಜಯಿಸಿದವನೂ ಮಹಾ ದೇವನೂ ಆದ ಈಶ್ವರನನ್ನು ನಮಸ್ಕರಿಸಬೇಕು. ಹಾಗು ಯೋಬ್ರಹ್ಮಾಣಂ ಎಂದು ಹೇಳಿ ಆತ್ಮವನ್ನು ಈಶ್ವರನಿಗೆ ನಿವೇದಿಸಬೇಕು.

ಪ್ರದಕ್ಷಿಣಂ ದ್ವಿಜಃ ಕುರ್ಯಾತ್ ಪಂಚ ವರ್ಷಾಣಿ ವೈ ಬುಧಃ ।
ಧ್ಯಾಯೀತ ದೇವಮೀಶಾನಂ ವ್ಯೋಮಮಧ್ಯಗತಂ ಶಿವಮ್ ॥ ೧೦೧ ॥

ಅಥಾವಲೋಕಯೇದರ್ಕಂ ಹಂಸಃ ಶುಚಿಷದಿತ್ಯೃಚಾ ।
ಕುರ್ವನ್ ಪಂಚಮಹಾಯಜ್ಞಾನ್ ಗೃಹಂ ಗತ್ವಾ ಸಮಾಹಿತಃ ॥೧೦೨॥

ದೇವಯಜ್ಞಂ ಪಿತೃಯಜ್ಞಂ ಭೂತಯಜ್ಞಂ ತಥೈವ ಚ ।
ಮಾನುಷ್ಯಂ ಬ್ರಹ್ಮಯಜ್ಞಂ ಚ ಪಂಚ ಯಜ್ಞಾನ್ ಪ್ರಚಕ್ಷತೇ ॥೧೦೩॥

ಯದಿ ಸ್ಯಾತ್ತರ್ಪಣಾದರ್ವಾಕ್ ಬ್ರಹ್ಮಯಜ್ಞಃ ಕೃತೋ ನ ಹಿ ।
ಕೃತ್ವಾ ಮನುಷ್ಯಯಜ್ಞಂ ವೈ ತತಃ ಸ್ವಾಧ್ಯಾಯಮಾಚರೇತ್ ॥ ೧೦೪ ॥

---

೧೦೧. ಹಾಗು ವಿದ್ವಾಂಸನಾದ ದ್ವಿಜನು ಐದುವರ್ಷಗಳ ಪರ್ಯಂತವಾಗಿ ಈಶ್ವರನಿಗೆ ಪ್ರದಕ್ಷಿಣೆಯನ್ನು ಮಾಡಬೇಕು. ಮತ್ತು ಹೃದಯಾಕಾಶ ಮಧ್ಯದಲ್ಲಿರುವ ಸರ್ವನಿಯಾಮಕನಾದ ಶಂಕರನನ್ನು ಧ್ಯಾನಿಸಬೇಕು.

೧೦೨. ಆಮೇಲೆ " ಹಂಸಃ ಶುಚಿಷತ್ " ಎಂಬ ಮಂತ್ರದಿಂದ ಸೂರ್ಯನನ್ನು ದರ್ಶನ ಮಾಡಬೇಕು. ಆಮೇಲೆ ಪಂಚ ಮಹಾ ಯಜ್ಞಗಳನ್ನು ಆಚರಿಸುವವನಾಗಿ ಮನೆಗೆ ಹೋಗಿ ಸಮಾಧಾನ ಮಾನಸವುಳ್ಳವನಾಗಬೇಕು.

೧೦೩. ಪಂಚ ಮಹಾ ಯಜ್ಞಗಳು ಯಾವುವೆಂದರೆ— ದೇವಯಜ್ಞ, ಪಿತೃಯಜ್ಞ; ಭೂತಯಜ್ಞ; ಮನುಷ್ಯ ಯಜ್ಞ; ಮತ್ತು ಬ್ರಹ್ಮಯಜ್ಞ ಎಂಬುದಾಗಿ ಪಂಚಮಹಾ ಯಜ್ಞಗಳನ್ನು ಪ್ರಾಜ್ಞರು ಹೇಳುತ್ತಾರೆ.

೧೦೪. ತರ್ಪಣ ಕೊಡುವುದಕ್ಕೆ ಮುಂಚೆ ಬ್ರಹ್ಮ ಯಜ್ಞವು ಆಚರಿಸಲ್ಪಡದೆ ಇದ್ದರೆ ಮನುಷ್ಯ ಯಜ್ಞವನ್ನು ಮಾಡಿ ಆಮೇಲೆ ಸ್ವಾಧ್ಯಾಯಾಧ್ಯಯನವನ್ನು ಆಚರಿಸಬೇಕು.

ಅಗ್ನೇಃ ಪಶ್ಚಿಮತೋ ದೇಶೇ ಭೂತಯಜ್ಞಾಂತ ಏವ ಚ ।
ಕುಶಪುಂಜೇ ಸಮಾಸೀನಃ ಕುಶಪಾಣಿಃ ಸಮಾಹಿತಃ । ॥ ೧೦೫ ॥

ಶಾಲಾಗ್ನೌ ಲೌಕಿಕೇ ವಾಥ ಜಲೇ ಭೂಮ್ಯಾಮಥಾಪಿ ವಾ ।
ವೈಶ್ವದೇವಶ್ಚ ಕರ್ತವ್ಯೋ ದೇವಯಜ್ಞಃ ಸ ವೈ ಸ್ಮೃತಃ । ॥ ೧೦೬ ॥

ಯದಿ ಸ್ಯಾಲ್ಲೌಕಿಕೇ ಪಕ್ಷೇ ತತೋಽನ್ನಂ ತತ್ರ ಹೂಯತೇ ।
ಶಾಲಾಗ್ನೌ ತತ್ಪಚೇದನ್ನಂ ವಿಧಿರೇಷ ಸನಾತನಃ ॥ ೧೦೭ ॥

ದೇವೇಭ್ಯಶ್ಚ ಹುತಾದನ್ನಾಚ್ಛೇಷಾದ್ಭೂತಬಲಿಂ ಹರೇತ್
ಭೂತಯಜ್ಞಃ ಸ ವಿಜ್ಞೇಯೋ ಭೂತಿದಃ ಸರ್ವದೇಹಿನಾಮ್॥ ೧೦೮ ॥

---

೧೦೫. ಅಗ್ನಿಕುಂಡದ ಪಶ್ಚಿಮದಿಕ್ಕಿನಲ್ಲಿ ದರ್ಭಾಸನದಲ್ಲಿ ದರ್ಭಪವಿತ್ರವನ್ನು ಕೈಯಲ್ಲಿ ಧರಿಸಿ ಸಮಾಧಾನದಿಂದ ಕೂಡಿದ ಚಿತ್ತ ವುಳ್ಳವನಾಗಿ ಕುಳಿತುಕೊಂಡು ಭೂತ ಯಜ್ಞದ ವರೆಗಿನ ಕರ್ಮವನ್ನು ಆಚರಿಸಬೇಕು.

೧೦೬. ಶಾಲಾಗ್ನಿ. ಲೌಕಿಕಾಗ್ನಿ, ಜಲ ಅಥವಾ ಸ್ಥಲ ಇವುಗಳ ಪೈಕಿ ಯಾವುದಾದರೊಂದರಲ್ಲಿ ವೈಶ್ವದೇವ ಕರ್ಮವನ್ನು ಆಚರಿಸಬೇಕು. ಆ ವೈಶ್ವದೇವವು ದೇವ ಯಜ್ಞವೆಂದು ಸ್ಮರಿಸಲ್ಪಟ್ಟಿದೆ.

೧೦೭. ಲೌಕಿಕಾಗ್ನಿಯಲ್ಲಿ ವೈಶ್ವ ದೇವ ಹೋಮವನ್ನು ಮಾಡುವ ಪಕ್ಷದಲ್ಲಿ ಅಲ್ಲಿ ಸಿದ್ಧವಾದ ಅನ್ನ ವು ಹೋಮ ಮಾಡಲ್ಪಡುತ್ತದೆ. ಶಾಲಾಗ್ನಿಯಲ್ಲಿ ವೈಶ್ವದೇವವು ನಡೆಯುವುದಾದರೆ ಆ ಅಗ್ನಿಯಲ್ಲಿ ಅನ್ನವನ್ನು ಪಚನ ಮಾಡಬೇಕು. ಇದು ಅನಾದಿಯಾದ ವಿಧಾನವು.

೧೦೮. ದೇವತೆಗಳಿಗೆ ಹೋಮ ಮಾಡಿ ಮಿಕ್ಕಿರುವ ಅನ್ನದಿಂದ ಭೂತಗಳಿಗೆ ಬಲಿಯನ್ನು ಅರ್ಪಿಸಬೇಕು. ಆ ಭೂತ ಬಲಿಯು ಸಮಸ್ತ ಪ್ರಾಣಿಗಳಿಗೆ ಐಶ್ವರ್ಯವನ್ನು ಕೊಡುವ ಭೂತಯಜ್ಞವೆಂಬುದಾಗಿ ತಿಳಿಯಬೇಕು.

ಶ್ವಭ್ಯಶ್ಚ ಶ್ವಪಚೇಭ್ಯಶ್ಚ ಪತಿತಾದಿಭ್ಯ ಏವ ಚ ।
ದದ್ಯಾದ್ಭೂಮೌ ಬಹಿಶ್ಚಾನ್ನಂ ಪಕ್ಷಿಭ್ಯೋ ದ್ವಿಜಸತ್ತಮಾಃ ॥ ೧೦೯ ॥

ಸಾಯಂ ಚಾನ್ನಸ್ಯ ಸಿದ್ಧಸ್ಯ ಪತ್ನ್ಯಮಂತ್ರಂ ಬಲಿಂ ಹರೇತ್ ।
ಭೂತಯಜ್ಞಸ್ತ್ವಯಂ ನಿತ್ಯಂ ಸಾಯಂ ಪ್ರಾತರ್ಯಥಾವಿಧಿ ॥ ೧೧೦ ॥

ಏಕಂ ತು ಭೋಜಯೇದ್ವಿಪ್ರಂ ಪಿತ್ರ್ಯಾನುದ್ದಿಶ್ಯ ಸಂತತಮ್ ।
ನಿತ್ಯಶ್ರಾದ್ಧಂ ತದುದ್ದಿಷ್ಟಂ ಪಿತೃಯಜ್ಞೋ ಗತಿಪ್ರದಃ ॥ ೧೧೧ ॥

ಉದ್ಧೃತ್ಯ ವಾ ಯಥಾಶಕ್ತಿ ಕಿಂಚಿದನ್ನಂ ಸಮಾಹಿತಃ ।
ವೇದತತ್ತ್ವಾರ್ಥವಿದುಷೇ ದ್ವಿಜಾಯೈವೋಪಪಾದಯೇತ್ । ॥ ೧೧೨ ॥

---

೧೦೯. ದ್ವಿಜ ಶ್ರೇಷ್ಠರೇ! ನಾಯಿ, ಶ್ವಪಚ, ಪತಿತ, ಪಕ್ಷಿ ಮುಂತಾದ ಪ್ರಾಣಿಗಳಿಗೆ ಮನೆಯ ಹೊರಭಾಗದಲ್ಲಿ ಭೂಮಿಯಲ್ಲಿ ಅನ್ನವನ್ನು ಬಲಿ ರೂಪವಾಗಿ ಅರ್ಪಿಸಬೇಕು.

೧೧೦. ಸಾಯಂಕಾಲದಲ್ಲಿ ಸಿದ್ಧವಾದ ಅನ್ನವನ್ನು ತೆಗೆದುಕೊಂಡು ಪತ್ನಿಯು ಮಂತ್ರವಿಲ್ಲದೆ ಭೂತಬಲಿಯನ್ನು ಕೊಡಬೇಕು. ಹೀಗೆ ಈ ಭೂತ ಯಜ್ಞವು ಪ್ರತಿನಿತ್ಯ ದಲ್ಲಿಯೂ ಸಾಯಂಕಾಲ ಪ್ರಾತಃಕಾಲಗಳಲ್ಲಿ ಯಥಾ ವಿಧಿಯಾಗಿ ಮಾಡಲ್ಪಡಬೇಕು.

೧೧೧. ಪ್ರತಿನಿತ್ಯದಲ್ಲಿಯೂ ಪಿತೃ ದೇವತೆಗಳನ್ನು ಉದ್ದೇಶಿಸಿ ಒಬ್ಬ ಬ್ರಾಹ್ಮ ಣನಿಗೆ ಭೋಜನ ಮಾಡಿಸಬೇಕು. ಅದು ನಿತ್ಯ ಶ್ರಾದ್ಧವೆಂದು ಹೇಳಲ್ಪಟ್ಟಿದೆ. ಆ ಪಿತೃ ಯಜ್ಞವು ಸದ್ಗತಿಯನ್ನು ಕೊಡುವುದಾಗಿದೆ.

೧೧೨. ಅಥವಾ ಚಿತ್ತಶುದ್ಧಿ ಯುಳ್ಳವನಾಗಿ ಯಥಾಶಕ್ತಿಯಾಗಿ ಸ್ವಲ್ಪ ಅನ್ನ ವನ್ನು ಬೇರೆಯಾಗಿ ವಿಂಗಡಿಸಿ ವೇದದ ತತ್ತ್ವಾರ್ಥಗಳನ್ನು ಅರಿತಿರುವ ಬ್ರಾಹ್ಮಣ ನಿಗೆ ಅರ್ಪಿಸಬೇಕು.

ಪೂಜಯೇದತಿಥಿಂ ನಿತ್ಯಂ ನಮಸ್ಯೇದರ್ಚಯೇದ್ವಿಭುಮ್ ।
ಮನೋವಾಕ್ಕರ್ಮಭಿಃ ಶಾಂತಃ ಸ್ವಾಗತಂ ಸ್ವಗೃಹಂ ಗತಃ ॥ ೧೧೩ ॥

ಅನ್ವಾರಬ್ಧೇನ ಸವ್ಯೇನ ಪಾಣಿನಾ ದಕ್ಷಿಣೇನ ತು ।
ಹಂತಕಾರಮಥಾಗ್ರಂ ವಾ ಭಿಕ್ಷಾಂ ವಾ ಶಕ್ತಿತೋ ದ್ವಿಜಃ ॥ ೧೧೪ ॥

ದದ್ಯಾದತಿಥಯೇ ನಿತ್ಯಂ ಬುಧ್ಯೇತ ಪರಮೇಶ್ವರಮ್ ।
ಭಿಕ್ಷಾಮಾಹುರ್ಗ್ರಾಸಮಾತ್ರಮಗ್ರಂ ತಸ್ಯಾಶ್ಚತುರ್ಗುಣಮ್ ॥ ೧೧೫ ॥

ಪುಷ್ಕಲಂ ಹಂತಕಾರಂ ತು ತಚ್ಚತುರ್ಗುಣಮುಚ್ಯತೇ ।
ಗೋದೋಹಕಾಲಮಾತ್ರಂ ವೈ ಪ್ರತೀಕ್ಷ್ಯೋ ಹ್ಯತಿಥಿಃ ಸ್ವಯಮ್ ॥

---

೧೧೩. ಯಾವಾಗಲೂ ಮನೆಗೆ ಬಂದಿರುವ ಅತಿಥಿಯನ್ನು ಪೂಜಿಸಬೇಕು. ಆ ಅತಿಥಿಯನ್ನು ವಿಷ್ಣುರೂಪನೆಂದು ತಿಳಿದು ಕಾಯ ವಾಕ್ ಮನಸ್ಸುಗಳಿಂದ ಸ್ವಾಗತ ವಚನವನ್ನು ಹೇಳಿ ಶಾಂತನಾಗಿ ನಮಸ್ಕಾರ ಸತ್ಕಾರಗಳನ್ನು ಮಾಡಬೇಕು.

೧೧೪. ದ್ವಿಜನು ವಾಮ ಹಸ್ತದ ಸ್ಪರ್ಶವುಳ್ಳ ದಕ್ಷಿಣ ಹಸ್ತದಿಂದ ಹಂತಕಾರ ಮಂತ್ರವನ್ನು ಉಚ್ಚಾರಣ ಮಾಡಿ ಯಥಾಶಕ್ತಿಯಾಗಿ ಅನ್ನ ಭಿಕ್ಷೆಯನ್ನು ನೀಡಬೇಕು.

೧೧೫. ಮನೆಗೆ ಬಂದ ಅತಿಥಿಗೆ ಪ್ರತಿನಿತ್ಯದಲ್ಲಿಯೂ ದಾನ ಕೊಡಬೇಕು. ಅತಿಥಿಯನ್ನು ಸಾಕ್ಷಾತ್ತಾಗಿ ಪರಮೇಶ್ವರನೆಂದು ಅರಿಯಬೇಕು. ಒಂದು ಗ್ರಾಸ ಮಾತ್ರವಾಗಿ ಕೊಟ್ಟಿರುವ ಭಿಕ್ಷೆಯ ಅನ್ನವು ಚತುರ್ಗುಣವಾಗುವುದು.

೧೧೬. ಹಾಗೂ ಪುಷ್ಕಳವಾದ ಭಿಕ್ಷೆಯನ್ನು ದಾನ ಮಾಡಿದರೆ ಆ ಅನ್ನವು ಅದಕ್ಕೆ ಚತುರ್ಗುಣವಾಗುವುದು. ಒಂದು ಹಸುವನ್ನು ಕರೆಯುವಷ್ಟು ಕಾಲ ತಾನೇ ಅತಿಥಿಯನ್ನು ಪ್ರತೀಕ್ಷಿಸಬೇಕು.

**ಅಭ್ಯಾಗತಾನ್ ಯಥಾಶಕ್ತಿ ಪೂಜಯೇದತಿಥೀನ್ ಸದಾ ।**
**ಭಿಕ್ಷಾಂ ವೈ ಭಿಕ್ಷವೇ ದದ್ಯಾದ್ವಿಧಿವದ್ಬ್ರಹ್ಮಚಾರಿಣೇ ॥ ೧೧೭ ॥**

**ದದ್ಯಾದನ್ನಂ ಯಥಾಶಕ್ತಿ ಹ್ಯರ್ಥಿಭ್ಯೋ ಲೋಭವರ್ಜಿತಃ ॥ ೧೧೮ ॥**

**ಸರ್ವೇಷಾಮಪ್ಯಲಾಭೇ ಹಿ ಹ್ಯನ್ನಂ ಗೋಭ್ಯೋ ನಿವೇದಯೇತ್ ।**
**ಭುಂಜೀತ ಬಹುಭಿಃ ಸಾರ್ಧಂ ವಾಗ್ಯತೋಽನ್ನಮಕುತ್ಸಯನ್॥ ೧೧೯ ॥**

**ಅಕೃತ್ವಾ ತು ದ್ವಿಜಃ ಪಂಚ ಮಹಾಯಜ್ಞಾನ್ ದ್ವಿಜೋತ್ತಮಃ ।**
**ಭುಂಜೀತ ಚೇತ್ಸ ಮೂಢಾತ್ಮಾ ತಿರ್ಯಗ್ಯೋನಿಂ ಸ ಗಚ್ಛತಿ ॥ ೧೨೦ ॥**

---

೧೧೭. ಹೀಗೆ ಯಾವಾಗಲೂ ಯಥಾ ಶಕ್ತಿಯಾಗಿ ಅತಿಥಿ-ಅಭ್ಯಾಗತರನ್ನು ಪೂಜೆ ಮಾಡಬೇಕು. ಸನ್ಯಾಸಿಗೆ ಭಿಕ್ಷೆಯನ್ನು ನೀಡಬೇಕು. ಮತ್ತು ಬ್ರಹ್ಮಚಾರಿಗೆ ಯಥಾಶಕ್ತಿಯಾಗಿ ಭಿಕ್ಷೆಯನ್ನು ಕೊಡಬೇಕು.

೧೧೮. ಈ ರೀತಿಯಾಗಿ ಆಯಾಯ ಯಾಚಕರಿಗೆ ಸ್ವಲ್ಪವೂ ಲೋಭ ಮಾಡದಂತೆ ಅನ್ನವನ್ನು ಯಥಾಶಕ್ತಿಯಾಗಿ ಕೊಡಬೇಕು.

ಯಾರೂ ಸಿಕ್ಕದಿರುವ ಪಕ್ಷದಲ್ಲಿ ಗೋವಿಗೆ ಅನ್ನಗ್ರಾಸವನ್ನು ಅರ್ಪಿಸಬೇಕು. ತರುವಾಯ ಅನೇಕ ಜನರೊಂದಿಗೆ ಮೌನಿಯಾಗಿ ಅನ್ನವನ್ನು ನಿಂದಿಸದೆ ಭೋಜನ ಮಾಡಬೇಕು.

೧೨೦. ದ್ವಿಜಶ್ರೇಷ್ಠರೇ! ಯಾವ ದ್ವಿಜನು ಪಂಚ ಮಹಾ ಯಜ್ಞಗಳನ್ನು ಆಚರಿಸದೆ ತಾನು ಭೋಜನ ಮಾಡುವನೋ, ಅಂತಹ ಮೂಢಾತ್ಮನು ಪಶ್ವಾದಿ ತಿರ್ಯಗ್ ಜಾತಿಯನ್ನು ಹೊಂದುತ್ತಾನೆ.

ವೇದಾಭ್ಯಾಸೋಽನ್ವಹಂ ಶಕ್ತ್ಯಾ ಮಹಾಯಜ್ಞಾಃ ಕ್ರಿಯೋಕ್ಷಯಾ ।
ನಾಶಯಂತ್ಯಾಶು ಪಾಪಾನಿ ದೇವತಾಭ್ಯರ್ಚನಂ ತಥಾ ॥ ೧೨೧ ॥

ಯೋ ಮೋಹಾದಥವಾಜ್ಞಾನಾದಕೃತ್ವಾ ದೇವತಾರ್ಚನಮ್ ।
ಭುಂಕ್ತೇ ಸ ಯಾತಿ ನರಕಂ ಸೂಕರಂ ನಾತ್ರ ಸಂಶಯಃ ॥ ೧೨೨ ॥

ತಸ್ಮಾತ್ ಸರ್ವಪ್ರಯತ್ನೇನ ಕೃತ್ವಾ ಕರ್ಮಾಣಿ ವೈ ದ್ವಿಜಾಃ ।
ಭುಂಜೀತ ಸ್ವಜನೈಃ ಸಾರ್ಧಂ ಸ ಯಾತಿ ಪರಮಾಂ ಗತಿಮ್ ॥ ೧೨೩ ॥

ಇತಿ ಶ್ರೀ ಕೂರ್ಮಪುರಾಣೇ ಏಕಸಪ್ತತಿತಮೋಽಧ್ಯಾಯಃ.

---

೧೨೧. ಪ್ರತಿನಿತ್ಯದಲ್ಲಿ ಮಾಡುವ ವೇದಾಭ್ಯಾಸವೂ ಯಥಾ ಶಕ್ತಿಯಾಗಿ ಪಂಚ ಮಹಾಯಜ್ಞಗಳ ನಿತ್ಯಾನುಷ್ಠಾನವೂ ದೇವತಾರ್ಚನೆಯೂ ಕ್ಷಿಪ್ರದಲ್ಲಿ ಸಮಸ್ತ ಪಾಪಗಳನ್ನು ನಾಶ ಮಾಡುತ್ತವೆ.

೧೨೨. ಯಾವ ಮಾನವನು ಮೋಹ ಅಥವಾ ಅಜ್ಞಾನಗಳಿಂದ ದೇವತಾರ್ಚನೆಯನ್ನು ಮಾಡದೆ ಭುಂಜಿಸುವನೋ ಅವನು ಸೂಕರ ನರಕವನ್ನು ಹೊಂದುವನು. ಈ ವಿಷಯದಲ್ಲಿ ಸಂಶಯವಿಲ್ಲ.

೧೨೩. ದ್ವಿಜರೇ! ಆದುದರಿಂದ ಸಮಸ್ತ ಪ್ರಯತ್ನಗಳಿಂದ ಪಂಚ ಮಹಾಯಜ್ಞಾದಿಕರ್ಮಗಳನ್ನು ಮಾಡಿ ಸ್ವಜನರೊಂದಿಗೆ ಭೋಜನ ಮಾಡಬೇಕು. ಅಂತಹವನು ಸದ್ಗತಿಯನ್ನು ಹೊಂದುವನು.

ಕೂರ್ಮಪುರಾಣದಲ್ಲಿ ಎಪ್ಪತ್ತೊಂದನೆಯ ಅಧ್ಯಾಯವು ಸಮಾಪ್ತವು.

---

ಶ್ರೀಃ

# ಕೂರ್ಮಪುರಾಣಂ

## ದ್ವಿಸಪ್ತತಿತಮೋಽಧ್ಯಾಯಃ

**ವ್ಯಾಸ ಉವಾಚ :—**

ಪ್ರಾಙ್ಮುಖೋಽನ್ನಾನಿ ಭುಂಜೀತ ಸೂರ್ಯಾಭಿಮುಖ ಏವ ವಾ ।
ಆಸೀನಃ ಸ್ವಾಸನೇ ಶುದ್ಧೇ ಭೂಮ್ಯಾಂ ಪಾದೌ ನಿಧಾಯ ಚ ॥ ೧ ॥

ಆಯುಷ್ಯಂ ಪ್ರಾಙ್ಮುಖೋ ಭುಂಕ್ತೇ ಯಶಸ್ಯಂ ದಕ್ಷಿಣಾಮುಖಃ ।
ಶ್ರಿಯಂ ಪ್ರತ್ಯಙ್ಮುಖೋ ಭುಂಕ್ತೇ ಋತಂ ಭುಂಕ್ತ ಉದಙ್ಮುಖಃ ॥ ೨ ॥

---

## ಎಪ್ಪತ್ತೆರಡನೆಯ ಅಧ್ಯಾಯವು

೧. ಪೂರ್ವಾಭಿಮುಖನಾಗಿಯೂ ಅಥವಾ ಸೂರ್ಯನಿಗೆ ಅಭಿಮುಖನಾಗಿಯೂ ನೆಲದಲ್ಲಿ ಪಾದಗಳನ್ನು ಇಟ್ಟು ಶುದ್ಧವಾದ ತನ್ನ ಆಸನದಲ್ಲಿ ಕುಳಿತುಕೊಂಡವನಾಗಿ ಅನ್ನವನ್ನು ಭೋಜನ ಮಾಡಬೇಕು.

೨. ಪೂರ್ವಾಭಿಮುಖವಾದ ಭೋಜನದಿಂದ ಆಯುಷ್ಯವನ್ನೂ, ದಕ್ಷಿಣಾಭಿಮುಖವಾದ ಭೋಜನದಿಂದ ಕೀರ್ತಿಯನ್ನೂ ಪಶ್ಚಿಮಾಭಿ ಮುಖವಾದ ಭೋಜನದಿಂದ ಸಂಪತ್ತನ್ನೂ, ಮತ್ತು ಉತ್ತರಾಭಿ ಮುಖವಾದ ಭೋಜನದಿಂದ ಸತ್ಯಫಲವನ್ನೂ ಅನುಭವಿಸುತ್ತಾನೆ.

ಪಂಚಾರ್ದ್ರೋ ಭೋಜನಂ ಕುರ್ಯಾದ್ಭೂಮೌ ಪಾತ್ರಂ ನಿಧಾಯ ಚ।
ಉಪವಾಸೇನ ತತ್ತುಲ್ಯಂ ಮನುರಾಹ ಪ್ರಜಾಪತಿಃ ॥ ೩ ॥

ಉಪಲಿಪ್ತೇ ಶುಚೌ ದೇಶೇ ಪಾದೌ ಪ್ರಕ್ಷಾಲ್ಯ ವೈ ಕರೌ ।
ಆಚಮ್ಯಾರ್ದ್ರಾನನೋಽಕ್ರೋಧಃ ಪಂಚಾರ್ದ್ರೋ ಭೋಜನಂ ಚರೇತ್

ಮಹಾವ್ಯಾಹೃತಿಭಿಸ್ತ್ವನ್ನಂ ಪರಿಧಾಯೋದಕೇನ ತು ।
ಅಮೃತೋಪಸ್ತರಣಮಸೀತ್ಯಾಪೋಶಾನಕ್ರಿಯಾಂ ಚರೇತ್ ॥ ೫ ॥

ಸ್ವಾಹಾಪ್ರಣವಸಂಯುಕ್ತಾಂ ಪ್ರಾಣಾಯಾದ್ಯಾಹುತಿಂ ತತಃ ।
ಅಪಾನಾಯ ತತೋ ಭುಕ್ತ್ವಾ ವ್ಯಾನಾಯ ತದನಂತರಮ್ ॥ ೬ ॥

---

೩. ಐದು ಅವಯವಗಳಲ್ಲಿ ನೀರಿನಿಂದ ಒದ್ದೆಯಾದವನಾಗಿ ನೆಲದಲ್ಲಿ ಪಾತ್ರವನ್ನು ಇರಿಸಿ ಭೋಜನ ಮಾಡಬೇಕು. ಮನು ಪ್ರಜಾಪತಿಯು ಇಂತಹ ಭೋಜನವನ್ನು ಉಪವಾಸಕ್ಕೆ ಸಮವಾಗಿ ಪವಿತ್ರವೆಂದು ಹೇಳುತ್ತಾನೆ.

೪. ಗೋಮಯದಿಂದ ಲೇಪನ ಮಾಡಿದ ಸ್ಥಳದಲ್ಲಿ ಹಸ್ತ ಪಾದಗಳನ್ನು ತೊಳೆದು ಆಚಮನ ಮಾಡಿ ಒದ್ದೆಯಾದ ಮುಖ ವುಳ್ಳವನಾಗಿ ಕ್ರೋಧ ವರ್ಜಿತನೂ ಮತ್ತು ಎರಡು ಕಾಲು, ಕೈ, ಮುಖ ಎಂಬ ಐದು ಅವಯವಗಳಲ್ಲಿ ಒದ್ದೆಯಾದವನೂ ಆಗಿ ಭೋಜನ ಮಾಡಬೇಕು.

೫. ಮಹಾ ವ್ಯಾಹೃತಿ ಮಂತ್ರಗಳನ್ನು ಉಚ್ಚರಿಸಿ ಜಲದಿಂದ ಪರಿಷೇಚನ ಮಾಡಿ "ಅಮೃತೋಪಿ ಸ್ತರಣಮಸಿ" ಎಂಬ ಮಂತ್ರವನ್ನು ಪಠಿಸಿ ಆಪೋಶನವನ್ನು ತೆಗೆದುಕೊಳ್ಳಬೇಕು.

೬. ತರುವಾಯ ಆದಿಯಲ್ಲಿ ಓಂಕಾರ ಅಂತ್ಯದಲ್ಲಿ ಸ್ವಾಹಾಕಾರಗಳಿಂದ ಕೂಡಿದ "ಪ್ರಾಣಾಯ" ಮುಂತಾದ ಮಂತ್ರಗಳಿಂದ ಪ್ರಾಣಾಹುತಿಗಳನ್ನು ತೆಗೆದು ಕೊಳ್ಳಬೇಕು.ಮೊದಲು ಪ್ರಾಣಕ್ಕೆ ಆಹುತಿಯನ್ನೂ, ಆಮೇಲೆ ಅಪಾನಕ್ಕೆ ಆಹುತಿಯನ್ನೂ ಅನಂತರದಲ್ಲಿ ವ್ಯಾನಕ್ಕೆ ಆಹುತಿಯನ್ನೂ ಭುಂಜಿಸಬೇಕು.

ಉದಾನಾಯ ತತಃ ಕುರ್ಯಾತ್ ಸಮಾನಾಯೇತಿ ಪಂಚಮಮ್ ।
ವಿಜ್ಞಾಯ ತತ್ತ್ವಮೇತೇಷಾಂ ಜುಹುಯಾದಾತ್ಮನಿ ದ್ವಿಜಃ ॥ ೭ ॥

ಶೇಷಮನ್ನಂ ಯಥಾಕಾಮಂ ಭುಂಜೀತ ವ್ಯಂಜನೈರ್ಯುತಮ್ ।
ಧ್ಯಾತ್ವಾ ತನ್ಮನಸಾ ದೇವಾನಾತ್ಮಾನಂ ವೈ ಪ್ರಜಾಪತಿಮ್ ॥ ೮ ॥

ಅಮೃತಾಪಿಧಾನಮಸೀತ್ಯುಪರಿಷ್ಟಾದಪಃ ಪಿಬೇತ್ ।
ಆಚಾಂತಃ ಪುನರಾಚಾಮೇದಯಂ ಗೌರಿತಿಮಂತ್ರತಃ ॥ ೯ ॥

ದ್ರುಪದಾಂ ವಾ ತ್ರಿರಾವರ್ತ್ಯ ಸರ್ವಪಾಪಪ್ರಣಾಶಿನೀಮ್ ।
ಪ್ರಾಣಾನಾಂ ಗ್ರಂಥಿರಸೀತ್ಯಾಲಭೇದುದರಂ ತತಃ ॥ ೧೦ ॥

---

೭. ಹಾಗೂ ಉದಾನಕ್ಕೆ ಆಹುತಿಯನ್ನು ತೆಗೆದುಕೊಂಡು ಕಡೆಯಲ್ಲಿ ಐದನೆಯದಾದ ಸಮಾನಾಹುತಿಯನ್ನು ಬುಂಜಿಸಬೇಕು. ದ್ವಿಜನು ಈ ಪ್ರಾಣಾಹುತಿಗಳ ತತ್ವಗಳನ್ನು ತಿಳಿದು ಅವುಗಳನ್ನು ತನ್ನಲ್ಲಿ ಹೋಮ ಮಾಡಬೇಕು.

೮. ಮಿಕ್ಕ ಅನ್ನವನ್ನು ಅನೇಕ ವ್ಯಂಜನಗಳಿಂದ ಕೂಡಿಸಿ ಇಷ್ಟಾನುಸಾರವಾಗಿ ಭೋಜನ ಮಾಡಿಸಬೇಕು ಭೋಜನ ಸಮಯದಲ್ಲಿ ದೇವತೆಗಳನ್ನೂ, ಆತ್ಮವನ್ನೂ, ಮತ್ತು ಪ್ರಜಾಪತಿಯನ್ನೂ ಮನಸ್ಸಿನಲ್ಲಿ ಧ್ಯಾನಿಸಬೇಕು.

೯. ಭೋಜನಾಂತರದಲ್ಲಿ "ಅಮೃತಾಪಿಧಾನಮಸಿ" ಎಂಬ ಮಂತ್ರವನ್ನು ಹೇಳಿ ಆಪೋಶನವನ್ನು ತೆಗೆದುಕೊಳ್ಳಬೇಕು. ತರುವಾಯ ಆಚಮನಮಾಡಿ ಅಯಂಗೌಃ ಎಂಬ ಮಂತ್ರದಿಂದ ಮತ್ತೊಂದು ಸಲ ಆಚಮನ ಮಾಡಬೇಕು.

೧೦. ಆಮೇಲೆ ಸಮಸ್ತ ಪಾಪಗಳನ್ನು ನಾಶ ಪಡಿಸುವ ದ್ರುಪದಾಮಂತ್ರವನ್ನು ಮೂರುಸಲ ಆವೃತ್ತಿಮಾಡಿ "ಪ್ರಾಣಾನಾಂ ಗ್ರಂಥಿರಸಿ" ಎಂಬ ಮಂತ್ರವನ್ನು ಪಠಿಸುತ್ತಾ ಉದರವನ್ನು ಸ್ಪರ್ಶಮಾಡಬೇಕು.

ಆಚಮ್ಯಾಂಗುಷ್ಠಮಾತ್ರೇಣ ಪಾದಾಂಗುಷ್ಠೇನ ದಕ್ಷಿಣೇ ।
ನಿಸ್ರಾವಯೇದ್ಧಸ್ತಜಲಮೂರ್ಧ್ವಹಸ್ತಃ ಸಮಾಹಿತಃ ॥ ೧೧ ॥

ಕೃತಾನುಮಂತ್ರಣಂ ಕುರ್ಯಾತ್ ಸಂಧ್ಯಾಯಾಮಿತಿ ಮಂತ್ರತಃ ।
ಅಥಾಕ್ಷರೇಣ ಸ್ವಾತ್ಮಾನಂ ಯೋಜಯೇದ್ಬ್ರಹ್ಮಣೇತಿ ಹಿ ॥ ೧೨ ॥

ಸರ್ವೇಷಾಮೇವ ಯೋಗಾನಾಮಾತ್ಮಯೋಗಃ ಸ್ಮೃತಃ ಪರಃ ।
ಯೋಽನೇನ ವಿಧಿನಾ ಕುರ್ಯಾತ್ ಸ ಕವಿರ್ಬ್ರಾಹ್ಮಣಃ ಸ್ವಯಮ್ ॥

ಯಜ್ಞೋಪವೀತೀ ಭುಂಜೀತ ಸ್ರಗ್ಗಂಧಾಲಂಕೃತಃ ಶುಚಿಃ ।
ಸಾಯಂ ಪ್ರಾತರ್ನಾಂತರಾ ವೈ ಸಂಧ್ಯಾಯಾಂ ತು ವಿಶೇಷತಃ ॥ ೧೪ ॥

೧೧. ಆಮೇಲೆ ಆಚಮನ ಮಾಡಿ ತನ್ನ ಅಂಗುಷ್ಠದಿಂದ ಬಲ ಭಾಗದ ಪಾದಾಂಗುಷ್ಠದ ಮೂಲಕವಾಗಿ ಹಸ್ತ ಜಲವನ್ನು ಕೆಳಕ್ಕೆ ಸುರಿಸಿ ಕೈಯನ್ನು ಮೇಲಕ್ಕೆ ಎತ್ತಿ ಸಮಾಧಾನವಂತನಾಗಬೇಕು.

೧೨. ತರುವಾಯ ಸಂಧ್ಯಾಯಾಂ ಎಂಬ ಮಂತ್ರದಿಂದ ಕೃತವಾದ ಕರ್ಮಗಳಿಗೆ ಮತ್ತೆ ಅನುಮಂತ್ರಣವನ್ನು ಮಾಡಬೇಕು. ಆಮೇಲೆ ತನ್ನ ಆತ್ಮವನ್ನು ಕ್ಷರಶೀಲವಲ್ಲದ ಪರಬ್ರಹ್ಮ ವಸ್ತುವಿನಲ್ಲಿ ಯೋಜನ ಮಾಡಬೇಕು.

೧೩. ಸಮಸ್ತ ಯೋಗಗಳ ಪೈಕಿ ಆತ್ಮಯೋಗವು ಉತ್ತಮವೆಂದು ಸ್ಮರಿಸಲ್ಪಟ್ಟಿದೆ. ಈ ವಿಧಾನದಿಂದ ಯಾವ ಮಾನವನು ಕರ್ಮಗಳನ್ನು ಆಚರಿಸುವನೋ, ಅವನು ತಾನಾಗಿ ಸರ್ವಜ್ಞನಾದ ಬ್ರಾಹ್ಮಣನಾಗುವನು.

೧೪. ಯಜ್ಞೋಪವೀತ ವುಳ್ಳವನೂ, ಪುಷ್ಪ,ಮಾಲ್ಯ ಗಂಧಗಳಿಂದ ಅಲಂಕರಿಸಲ್ಪಟ್ಟವನೂ ಮತ್ತು ಪವಿತ್ರನೂ ಆಗಿ ಭೋಜನ ಮಾಡಬೇಕು. ಸಾಯಂಕಾಲ ಮತ್ತು ಪ್ರಾತಃಕಾಲ ಎರಡು ಸಲ ಮಾತ್ರ ಭೋಜನ ಮಾಡಬೇಕು. ಇವುಗಳ ಮಧ್ಯ ಕಾಲವನ್ನೂ ವಿಶೇಷವಾಗಿ ಸಂಧ್ಯಾಕಾಲವನ್ನೂ ವರ್ಜಿಸಬೇಕು.

ನಾದ್ಯಾತ್ ಸೂರ್ಯಗ್ರಹಾತ್ ಪೂರ್ವಂ ಪ್ರತಿಸಾಯಂ ಶಶಿಗ್ರಹಾತ್ ।
ಗ್ರಹಕಾಲೇ ನ ಚಾಶ್ನೀಯಾತ್ ಸ್ನಾತ್ವಾಶ್ನೀಯಾದ್ವಿಮುಕ್ತಯೋಃ ॥೧೫॥

ಮುಕ್ತೇ ಶಶಿನಿ ಚಾಶ್ನೀಯಾದ್ಯದಿ ನ ಸ್ಯಾನ್ಮಹಾನಿಶಾ ।
ಅಮುಕ್ತಯೋರಸ್ತಗಯೋರದ್ಯಾದ್ದೃಷ್ಟ್ವಾ ಪರೇಽಹನಿ ॥ ೧೬ ॥

ನಾಶ್ನೀಯಾತ್ ಪ್ರೇಕ್ಷಮಾಣಾನಾಮಪ್ರದಾಯ ಚ ದುರ್ಮತಿಃ ।
ಯಜ್ಞಾವಶಿಷ್ಟಮದ್ಯಾದ್ವಾ ನ ಕ್ರುದ್ಧೋ ನಾನ್ಯಮಾನಸಃ ॥ ೧೭ ॥

ಆತ್ಮಾರ್ಥಂ ಭೋಜನಂ ಯಸ್ಯ ರತ್ಯರ್ಥಂ ಯಸ್ಯ ಮೈಥುನಮ್ ।
ವೃತ್ತ್ಯರ್ಥಂ ಯಸ್ಯ ಚಾಧೀತಂ ನಿಷ್ಫಲಂ ತಸ್ಯ ಜೀವಿತಮ್ ॥ ೧೮ ॥

---

೧೫. ಸೂರ್ಯಗ್ರಹಣಕ್ಕೆ ಪೂರ್ವದ ಸಾಯಂಕಾಲದಲ್ಲಿಯೂ, ಚಂದ್ರ ಗ್ರಹಣಕ್ಕೆ ಪೂರ್ವದ ಹಗಲಿನಲ್ಲಿಯೂ ಮತ್ತು ಗ್ರಹಣಸಮಯದಲ್ಲಿಯೂ ಭೋಜನ ಮಾಡಬಾರದು. ಗ್ರಹಣಮೋಕ್ಷವಾದ ತರುವಾಯ ಸ್ನಾನಮಾಡಿ ಭುಂಜಿಸಬೇಕು.

೧೬. ಚಂದ್ರನು ಗ್ರಹಣದಿಂದ ಮುಕ್ತನಾದ ಮೇಲೆ ಅರ್ಧರಾತ್ರಿಯಲ್ಲದಿದ್ದರೆ ಊಟಮಾಡಬಹುದು. ಸೂರ್ಯ-ಚಂದ್ರರು ಗ್ರಹಣದಿಂದ ಮುಕ್ತರಾಗದೆ ಅಸ್ತಮಯ ಹೊಂದಿದರೆ ಮಾರನೆಯ ದಿವಸದಲ್ಲಿ ಶುದ್ಧಬಿಂಬವನ್ನು ನೋಡಿ ಭೋಜನಮಾಡಬೇಕು.

೧೭. ಇತರರು ನೋಡುತ್ತಿರುವಹಾಗೆ ಅವರಿಗೆ ಕೊಡದಂತೆ ಕೆಟ್ಟಬುದ್ಧಿಯುಳ್ಳವನಾಗಿ ಭುಂಜಿಸಬಾರದು. ಕ್ರೋಧ ಮತ್ತು ಬೇರೆ ವಿಷಯದಲ್ಲಿ ಮನಸುಗಳಿಲ್ಲದವನಾಗಿ ಯಜ್ಞಶಿಷ್ಟವಾದ ಆಹಾರವನ್ನು ಭುಂಜಿಸಬೇಕು.

೧೮. ಯಾವ ಮಾನವನಿಗೆ ತಾನೊಬ್ಬನಿಗೋಸ್ಕರ ಭೋಜನವೂ, ರತಿವಿಹಾರಕ್ಕೋಸ್ಕರ ಮೈಥುನವೂ, ಜೀವನಕ್ಕೋಸ್ಕರ ಅಧ್ಯಯನವೂ ಇರುವುವೋ, ಆ ಮಾನವನ ಜೀವನವು ವ್ಯರ್ಥವಾದುದು.

ಯದ್ಭುಂಕ್ತೇ ವೇಷ್ಟಿತಶಿರಾ ಯಚ್ಚ ಭುಂಕ್ತೇ ಉದಙ್ಮುಖಃ ।
ಸೋಪಾನತ್ಕಶ್ಚ ಯೋ ಭುಂಕ್ತೇ ಸರ್ವಂ ವಿದ್ಯಾತ್ತದಾಸುರಮ್ ॥ ೧೯ ॥

ನಾರ್ಧರಾತ್ರೇ ನ ಮಧ್ಯಾಹ್ನೇ ನಾಜೀರ್ಣೇ ನಾರ್ದ್ರವಸ್ತ್ರಧೃಕ್ ।
ನ ಚ ಭಿನ್ನಾಸನಗತೋ ನ ಯಾನಸಂಸ್ಥಿತೋಽಪಿ ವಾ ॥ ೨೦ ॥

ನ ಭಿನ್ನಭಾಜನೇ ಚೈವ ನ ಭೂಮ್ಯಾಂ ನ ಚ ಪಾಣಿಷು ।
ನೋಚ್ಛಿಷ್ಟೋ ಘೃತಮಾದದ್ಯಾನ್ನ ಮೂರ್ಧಾನಂ ಸ್ಪೃಶೇದಪಿ ॥ ೨೧ ॥

ನ ಬ್ರಹ್ಮ ಕೀರ್ತಯೇಚ್ಚಾಪಿ ನ ನಿಃಶೇಷಂ ನ ಭಾರ್ಯಯಾ ।
ನಾಂಧಕಾರೇ ನ ಸಂಧ್ಯಾಯಾಂ ನ ಚ ದೇವಾಲಯಾದಿಷು ॥ ೨೨ ॥

---

೧೯. ವೇಷ್ಟಿಸಲ್ಪಟ್ಟ ಶಿರವುಳ್ಳವನಾಗಿಯೂ, ಉತ್ತರಾಭಿಮುಖನಾಗಿಯೂ ಮತ್ತು ಪಾದರಕ್ಷೆಗಳನ್ನು ಧರಿಸಿದವನಾಗಿಯೂ ಯಾವುದನ್ನು ಭುಂಜಿಸುವನೋ, ಅದು ಆಸುರಭಾಗವಾಗುವುದು.

೨೦. ಅರ್ಧರಾತ್ರಿ, ಮಧ್ಯಾಹ್ನ ಸಮಯಗಳಲ್ಲಿಯೂ, ಅಜೀರ್ಣದೋಷ ಸಮಯದಲ್ಲಿಯೂ ಮತ್ತು ಆರ್ದ್ರವಸ್ತ್ರವನ್ನು ಧರಿಸಿರುವ ಸಮಯದಲ್ಲಿಯೂ ಭೋಜನವನ್ನು ಮಾಡಬಾರದು. ಹಾಗು ಭಿನ್ನವಾದ ಆಸನದಲ್ಲಿಯೂ ವಾಹನದಲ್ಲಿಯೂ ಕುಳಿತುಕೊಂಡು ಭುಂಜಿಸಬಾರದು.

೨೧. ಭಿನ್ನವಾದ ಪಾತ್ರದಲ್ಲಿಯೂ. ಭೂಮಿಯಲ್ಲಿಯೂ, ಹಸ್ತದಲ್ಲಿಯೂ ಆಹಾರವನ್ನು ಇಟ್ಟುಕೊಂಡು ಭುಂಜಿಸಬಾರದು. ಉಚ್ಛಿಷ್ಟನಾಗಿರುವ ಸಮಯದಲ್ಲಿ ಘೃತವನ್ನು ಹಿಡಿದುಕೊಳ್ಳಬಾರದು ಮತ್ತು ತಲೆಯನ್ನು ಮುಟ್ಟಿಕೊಳ್ಳಬಾರದು.

೨೨. ಉಚ್ಛಿಷ್ಟನಾಗಿ ವೇದವನ್ನು ಕೀರ್ತಿಸಬಾರದು. ನಿಶ್ಶೇಷವಾಗಿ ಭುಂಜಿಸಬಾರದು. ಅಂಧಕಾರದಲ್ಲಿಯೂ, ಸಂಧ್ಯಾಸಮಯದಲ್ಲಿಯೂ, ದೇವಾಲಯಗಳಲ್ಲಿಯೂ ಭೋಜನಮಾಡಬಾರದು.

ನೈಕವಸ್ತ್ರಸ್ತು ಭುಂಜೀತ ನ ಯಾನಶಯನಸ್ಥಿತಃ ।
ನ ಪಾದುಕಾನಿರ್ಗತೋಽಥ ನ ಹಸನ್ ವಿಲಪನ್ನಪಿ　　॥ ೨೩ ॥

ಭುಕ್ತ್ವಾ ವೈ ಸುಖಮಾಸ್ಥಾಯ ತದನ್ನಂ ಪರಿಣಾಮಯೇತ್ ।
ಇತಿಹಾಸಪುರಾಣಾಭ್ಯಾಂ ವೇದಾರ್ಥಾನುಪಬೃಂಹಯೇತ್　　॥ ೨೪ ॥

ತತಃ ಸಂಧ್ಯಾಮುಪಾಸೀತ ಪೂರ್ವೋಕ್ತವಿಧಿನಾ ಶುಚಿಃ ।
ಆಸೀನಶ್ಚ ಜಪೇದ್ದೇವೀಂ ಗಾಯತ್ರೀಂ ಪಶ್ಚಿಮಾಂ ಪ್ರತಿ　　॥ ೨೫ ॥

ನ ತಿಷ್ಠತಿ ತು ಯಃ ಪೂರ್ವಾಮಾಸ್ತೇ ಸಂಧ್ಯಾಂ ತು ಪಶ್ಚಿಮಾಮ್ ।
ಸ ಶೂದ್ರೇಣ ಸಮೋ ಲೋಕೇ ಸರ್ವಕರ್ಮವಿವರ್ಜಿತಃ　　॥ ೨೬ ॥

---

೨೩. ಏಕವಸ್ತ್ರವನ್ನು ಧರಿಸಿದವನೂ, ವಾಹನ-ಶಯನಗಳಲ್ಲಿ ಕುಳಿತುಕೊಂಡವನೂ, ಪಾದುಕೆಯನ್ನು ಧರಿಸಿದವನೂ ಆಗಿ ಭುಂಜಿಸಬಾರದು ಮತ್ತು ನಗುತ್ತ ಅಥವಾ ಅಳುತ್ತ ಭೋಜನಮಾಡಬಾರದು.

೨೪. ಭೋಜನಾನಂತರದಲ್ಲಿ ಸುಖಕರವಾದ ವಿಶ್ರಾಂತಿಯನ್ನು ಅನುಭವಿಸಿ ಆಹಾರವನ್ನು ಜೀರ್ಣಮಾಡಿಕೊಳ್ಳಬೇಕು. ಇತಿಹಾಸ-ಪುರಾಣಗಳ ವಿಚಾರದಿಂದ ವೇದಾರ್ಥಜ್ಞಾನವನ್ನು ಪುಷ್ಟೀಕರಿಸಬೇಕು.

೨೫. ತರುವಾಯ ಪವಿತ್ರನಾಗಿ ಹಿಂದೆ ಹೇಳಿರುವ ವಿಧಾನದಿಂದ ಸಂಧ್ಯಾದೇವಿಯನ್ನು ವಂದಿಸಬೇಕು. ಪಶ್ಚಿಮಸಂಧ್ಯೆ ಸಮಯದಲ್ಲಿ ಕುಳಿತುಕೊಂಡು ಗಾಯತ್ರೀಮಂತ್ರವನ್ನು ಜಪಿಸಬೇಕು.

೨೬. ಯಾವ ಮಾನವನು ಪ್ರಾತಃಸಂಧ್ಯಾವಂದನದ ಜಪಸಮಯದಲ್ಲಿ ನಿಲ್ಲುವುದಿಲ್ಲವೋ ; ಸಾಯಂಸಂಧ್ಯಾಜಪಸಮಯದಲ್ಲಿ ಕುಳಿತುಕೊಳ್ಳುವುದಿಲ್ಲವೋ ; ಅವನು ಲೋಕದಲ್ಲಿ ಶೂದ್ರನಿಗೆ ಸಮಾನನಾಗಿ ಸ್ವಧರ್ಮದಿಂದ ಪತಿತನಾಗುವನು.

ಹುತ್ವಾಗ್ನಿಂ ವಿಧಿವನ್ಮಂತ್ರೈರ್ಭುಕ್ತ್ವಾ ಯಜ್ಞಾವಶಿಷ್ಟಕಮ್ ।
ಸಭೃತ್ಯಬಾಂಧವಜನಃ ಸ್ವಪೇಚ್ಛುಷ್ಕಪದೋ ನಿಶಿ ॥ ೨೭ ॥

ನೋತ್ತರಾಭಿಮುಖಃ ಸ್ವಪ್ಯಾತ್ ಪಶ್ಚಿಮಾಭಿಮುಖೋ ನ ಚ ।
ನ ಚಾಕಾಶೇ ನ ನಗ್ನೋ ವಾ ನಾಶುಚಿರ್ನಾಸನೇ ಕ್ವಚಿತ್ ॥ ೨೮ ॥

ನ ಶೀರ್ಣಾಯಾಂ ತು ಖಟ್ವಾಯಾಂ ಶೂನ್ಯಾಗಾರೇ ನ ಚೈವ ಹಿ ।
ನಾನುವಂಶೇ ನ ಪಾಲಾಶೇ ಶಯನೇ ವಾ ಕದಾಚನ ॥ ೨೯ ॥

ಇತ್ಯೇತದಖಿಲೇನೋಕ್ತಮಹನ್ಯಹನಿ ವೈ ಮಯಾ ।
ಬ್ರಾಹ್ಮಣಾನಾಂ ಕೃತ್ಯಜಾತಮಪವರ್ಗಫಲಪ್ರದಮ್ ॥ ೩೦ ॥

---

೨೭. ಯಥಾವಿಧಿಯಾಗಿ ಮಂತ್ರಪಾಠಪೂರ್ವಕವಾಗಿ ಹೋಮಮಾಡಿ ಯಜ್ಞಶಿಷ್ಟವನ್ನು ಭೋಜನಮಾಡಿ, ಭೃತ್ಯ-ಬಂಧುಜನಗಳಿಂದ ಕೂಡಿ ರಾತ್ರಿಯಲ್ಲಿ ಶುಷ್ಕವಾದ ಪಾದಗಳುಳ್ಳವನಾಗಿ ಶಯನಮಾಡಬೇಕು.

೨೮. ಉತ್ತರ ದಿಕ್ಕಿಗೆ ಅಭಿಮುಖನಾಗಿಯೂ ಶಯನಮಾಡಲಾಗದು ಮತ್ತು ಆಕಾಶದಲ್ಲಿಯೂ, ದಿಗಂಬರನಾಗಿಯೂ, ಅಶುಚಿಯಾಗಿಯೂ, ಹಾಗು ಆಸನದಲ್ಲಿಯೂ ಯಾವಾಗಲೂ ಶಯನಮಾಡಲಾಗದು.

೨೯. ಜೀರ್ಣವಾದ ಮಂಚದಲ್ಲಿಯೂ, ಶೂನ್ಯವಾದ ಗೃಹದಲ್ಲಿಯೂ, ವೇಣುನಿರ್ಮಿತವಾದ ಅಥವಾ ಪಲಾಶನಿರ್ಮಿತವಾದ ಶಯನದಲ್ಲಿಯೂ ಯಾವಾಗಲೂ ನಿದ್ರಿಸಬಾರದು.

೩೦. ಈ ರೀತಿಯಾಗಿ ಪ್ರತಿದಿನದಲ್ಲಿಯೂ ಬ್ರಾಹ್ಮಣರಿಗೆ ಕರ್ತವ್ಯವಾದ, ಮೋಕ್ಷಫಲವನ್ನು ಕೊಡುವ ನಿತ್ಯಕರ್ಮವಿಧಾನವು ನನ್ನಿಂದ ನಿಮಗೆ ಸಂಪೂರ್ಣವಾಗಿ ಹೇಳಲ್ಪಟ್ಟಿರುವುದು.

ನಾಸ್ತಿಕ್ಯಾದಥವಾಲಸ್ಯಾದ್ಬ್ರಾಹ್ಮಣೋ ನ ಕರೋತಿ ಯಃ ।
ಸ ಯಾತಿ ನರಕಾನ್ ಘೋರಾನ್ ಕಾಕಯೋನೌ ಚ ಜಾಯತೇ ॥೩೧॥

ನಾನ್ಯೋ ವಿಮುಕ್ತಯೇ ಪಂಥಾ ಮುಕ್ತ್ವಾಶ್ರಮವಿಧಿಂ ಸ್ವಕಮ್ ।
ತಸ್ಮಾತ್ ಕರ್ಮಾಣಿ ಕುರ್ವೀತ ತುಷ್ಟಯೇ ಪರಮೇಷ್ಠಿನಃ ॥ ೩೨ ॥

ಇತಿ ಶ್ರೀ ಕೂರ್ಮಪುರಾಣೇ ದ್ವಿಸಪ್ತತಿತಮೋಽಧ್ಯಾಯಃ.

---

೩೧. ಯಾವ ಬ್ರಾಹ್ಮಣನು ನಾಸ್ತಿಕ್ಯದಿಂದಲೂ ಅಥವಾ ಆಲಸ್ಯದಿಂದಲೂ ಈ ನಿತ್ಯಕರ್ಮವನ್ನು ಆಚರಿಸುವುದಿಲ್ಲವೊ; ಅವನು ಘೋರವಾದ ನರಕಕ್ಕೆ ಹೋಗಿ ಮತ್ತೆ ಕಾಕಯೋನಿಯಲ್ಲಿ ಪುನರ್ಜನ್ಮವನ್ನು ಎತ್ತುವನು.

೩೨. ತನ್ನ ಆಶ್ರಮಧರ್ಮಾನುಷ್ಠಾನವನ್ನು ಬಿಟ್ಟು ಮುಕ್ತಿಸಾಮ್ರಾಜ್ಯವನ್ನು ದೊರಕಿಸುವ ಬೇರೊಂದು ದಾರಿಯು ಇರುವುದಿಲ್ಲ. ಆದ್ದರಿಂದ ಪರಮೇಶ್ವರನ ತೃಪ್ತಿಗೋಸ್ಕರ ಕರ್ಮಗಳನ್ನು ಆಚರಿಸಬೇಕು.

ಕೂರ್ಮಪುರಾಣದಲ್ಲಿ ಎಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

---

ಶ್ರೀಃ

# ಕೂರ್ಮಪುರಾಣಂ

## ತ್ರಿಸಪ್ತತಿತಮೋಽಧ್ಯಾಯಃ.

ವ್ಯಾಸ ಉವಾಚ :—

ಅಥ ಶ್ರಾದ್ಧಮಮಾವಾಸ್ಯಾಂ ಪ್ರಾಪ್ಯ ಕಾರ್ಯಂ ದ್ವಿಜೋತ್ತಮೈಃ ।
ಪಿಂಡಾನ್ವಾಹಾರ್ಯಕಂ ಭಕ್ತ್ಯಾ ಭುಕ್ತಿಮುಕ್ತಿ ಫಲಪ್ರದಮ್ ॥ ೧ ॥

ಪಿಂಡಾನ್ವಾಹಾರ್ಯಕಂ ಶ್ರಾದ್ಧಂ ಕ್ಷೀಣೇ ರಾಜನಿ ಶಸ್ಯತೇ ।
ಅಪರಾಹ್ಣೇ ದ್ವಿಜಾತೀನಾಂ ಪ್ರಶಸ್ತೇನಾಮಿಷೇಣ ಚ ॥ ೨ ॥

---

## ಎಪ್ಪತ್ತಮೂರನೆಯ ಅಧ್ಯಾಯವು

೧. ವ್ಯಾಸಮುನಿಯು ಹೀಗೆಂದನು :— ತರುವಾಯ ದ್ವಿಜಶ್ರೇಷ್ಠರಿಂದ ಅಮಾವಾಸ್ಯಾಕಾಲದಲ್ಲಿ ಭೋಗ-ಮೋಕ್ಷಫಲಗಳನ್ನು ಉಂಟುಮಾಡುವ ಪಿಂಡಾನ್ವಾಹಾರ್ಯಕ ಶ್ರಾದ್ಧವು ಆಚರಿಸಲ್ಪಡಬೇಕು.

೨. ದ್ವಿಜರಿಗೆ ಚಂದ್ರನು ಕೃಷ್ಣಪಕ್ಷದ ಅಂತ್ಯದಲ್ಲಿ ಕ್ಷಯಿಸಿರುವ ಅಮಾವಾಸ್ಯಾ ತಿಥಿಯಲ್ಲಿ ಅಪರಾಹ್ಣ ಸಮಯದಲ್ಲಿಯೂ, ಶ್ರೇಷ್ಠವಾದ ಮಾಂಸದಿಂದಲೂ ಪಿಂಡಾನ್ವಾಹಾರ್ಯಕ ಶ್ರಾದ್ಧಾನುಷ್ಠಾನವು ಪ್ರಶಸ್ತವಾಗಿರುವುದು.

ಪ್ರತಿಪತ್‌ಪ್ರಭೃತಿ ಹ್ಯನ್ಯಾಸ್ತಿಥಯಃ ಕೃಷ್ಣಪಕ್ಷಕೇ ।
ಚತುರ್ದಶೀಂ ವರ್ಜಯಿತ್ವಾ ಪ್ರಶಸ್ತಾ ಹ್ಯುಪರೋಥತಃ ॥ ೩ ॥

ಅಮಾವಾಸ್ಯಾಷ್ಟಕಾಸ್ತಿಸ್ರಃ ಪೌಷಮಾಸಾದಿಷು ತ್ರಿಷು ।
ತಿಸ್ರಸ್ತಾಸ್ತ್ವಷ್ಟಕಾಃ ಪುಣ್ಯಾ ಮಾಘೀ ಪಂಚದಶೀ ತಥಾ ॥ ೪ ॥

ತ್ರಯೋದಶೀ ಮಘಾಯುಕ್ತಾ ವರ್ಷಾಸು ಚ ವಿಶೇಷತಃ ।
ಶಸ್ಯಪಾಕಶ್ರಾದ್ಧಕಾಲಾ ನಿತ್ಯಾಃ ಪ್ರೋಕ್ತಾ ದಿನೇ ದಿನೇ ॥ ೫ ॥

ನೈಮಿತ್ತಿಕಂ ತು ಕರ್ತವ್ಯಂ ಗ್ರಹಣೇ ಚಂದ್ರಸೂರ್ಯಯೋಃ ।
ಬಾಂಧವಾನಾಂ ವಿಸ್ತರೇಣ ನಾರಕೀ ಸ್ಯಾದತೋಽನ್ಯಥಾ ॥ ೬ ॥

---

೩. ಕೃಷ್ಣಪಕ್ಷದಲ್ಲಿ ಪ್ರತಿಪತ್‌ತಿಥಿ ಮೊದಲುಗೊಂಡು ಚತುರ್ದಶಿಯನ್ನು ಬಿಟ್ಟು ಮಿಕ್ಕ ಸಮಸ್ತ ತಿಥಿಗಳು ಉತ್ತರೋತ್ತರವಾಗಿ ಶ್ರಾದ್ಧಾನುಷ್ಠಾನಕ್ಕೆ ಯೋಗ್ಯ ತಿಥಿಗಳಾಗಿವೆ.

೪. ಮತ್ತು ಅಮಾವಾಸ್ಯಾ ತಿಥಿಯೂ ಪುಷ್ಯಮಾಸ ಮೊದಲಾದ ಮೂರು ಮಾಸಗಳಲ್ಲಿ ಬರುವ ಕೃಷ್ಣಾಷ್ಟಮಿಯೆಂಬ ತಿಸ್ರೋಽಷ್ಟಕಾತಿಥಿಗಳೂ ಮತ್ತು ಮಾಘ ಮಾಸದ ಪೂರ್ಣಿಮಾತಿಥಿಯೂ ಶ್ರಾದ್ಧಾರ್ಹಗಳಾಗಿವೆ.

೫. ವರ್ಷಋತುವಿನಲ್ಲಿ ಮಘಾನಕ್ಷತ್ರದಿಂದ ಕೂಡಿದ ತ್ರಯೋದಶಿಯು ವಿಶೇಷವಾಗಿ ಪುಣ್ಯವಾದ ತಿಥಿಯು, ಸಸ್ಯದ ಪರಿಣಾಮ ಕಾಲದಲ್ಲಿ ಪ್ರತಿದಿನವೂ ಬರುವ ಶ್ರಾದ್ಧಕಾಲಗಳು ನಿತ್ಯಶ್ರಾದ್ಧಾರ್ಹವಾದುವುಗಳಾಗಿವೆ.

೬. ಚಂದ್ರ-ಸೂರ್ಯರ ಗ್ರಹಣ ಸಮಯದಲ್ಲಿ ಸಮಸ್ತ ಬಾಂಧವರಿಗೆ ವಿಸ್ತಾರವಾಗಿ ನೈಮಿತ್ತಿಕಶ್ರಾದ್ಧವನ್ನು ಆಚರಿಸಬೇಕು. ಹಾಗೆ ನೈಮಿತ್ತಿಕಶ್ರಾದ್ಧವನ್ನು ಆಚರಿಸದಿರುವವನು ನರಕಭಾಗಿಯಾಗುತ್ತಾನೆ.

ಕಾಮ್ಯಾನಿ ಚೈವ ಶ್ರಾದ್ಧಾನಿ ಶಸ್ಯಂತೇ ಗ್ರಹಣಾದಿಷು ।
ಅಯನೇ ವಿಷುವೇ ಚೈವ ವ್ಯತೀಪಾತೇ ತ್ವನಂತಕಮ್ ॥ ೭ ॥

ಸಂಕ್ರಾಂತ್ಯಾಮಕ್ಷಯಂ ಶ್ರಾದ್ಧಂ ತಥಾ ಜನ್ಮದಿನೇಷ್ವಪಿ ।
ನಕ್ಷತ್ರೇಷು ಚ ಸರ್ವೇಷು ಕಾರ್ಯಂ ಕಾಲೇ ವಿಶೇಷತಃ ॥ ೮ ॥

ಸ್ವರ್ಗಂ ಚ ಲಭತೇ ಕೃತ್ವಾ ಕೃತ್ತಿಕಾಸು ದ್ವಿಜೋತ್ತಮಃ ।
ಅಪತ್ಯಮಥ ರೋಹಿಣ್ಯಾಂ ಸೌಮ್ಯೇ ತು ಬ್ರಹ್ಮವರ್ಚಸಮ್ ॥ ೯ ॥

ರೌದ್ರಾಣಾಂ ಕರ್ಮಣಾಂ ಸಿದ್ಧಿಮಾರ್ದ್ರಾಯಾಂ ಶೌರ್ಯಮೇವ ಚ ।
ಪುನರ್ವಸೌ ತಥಾ ಭೂಮಿಂ ಶ್ರಿಯಂ ಪುಷ್ಯೇ ತಥೈವ ಚ ।
ಸರ್ವಾನ್ ಕಾಮಾನ್ ತಥಾ ಸಾರ್ಪ್ಯೇ ಪಿತ್ರ್ಯೇ ಸೌಭಾಗ್ಯಮೇವ ಚ ॥

---

೭. ಗ್ರಹಣಾದಿ ಸಮಯದಲ್ಲಿ ಇತರ ಕಾಮ್ಯಶ್ರಾದ್ಧಗಳು ಪ್ರಶಸ್ತವಾಗಿರುವುವು ಮತ್ತು ಅಯನ, ವಿಷುವ, ವ್ಯತೀಪಾತ ಮುಂತಾದ ಪುಣ್ಯಕಾಲಗಳಲ್ಲಿ ಶ್ರಾದ್ಧ ಕರ್ಮಾಚರಣೆಯು ಅನಂತವಾದ ಫಲವನ್ನು ಕೊಡುವುದು.

೮. ಸಂಕ್ರಮಣ ಸಮಯದಲ್ಲಿ ಮಾಡಿದ ಶ್ರಾದ್ಧವು ಅಕ್ಷಯವಾಗುವುದು. ಮತ್ತು ಜನ್ಮದಿನ, ಎಲ್ಲ ಜನ್ಮ ನಕ್ಷತ್ರಗಳ ಕಾಲದಲ್ಲಿ ವಿಶೇಷವಾಗಿ ಭಕ್ತಿಯಿಂದ ಶ್ರಾದ್ಧವನ್ನು ಆಚರಿಸಬೇಕು.

೯. ದ್ವಿಜಶ್ರೇಷ್ಠನು, ಕೃತ್ತಿಕಾನಕ್ಷತ್ರದಲ್ಲಿ ಶ್ರಾದ್ಧ ಮಾಡುವುದರಿಂದ ಸ್ವರ್ಗವನ್ನು ಹೊಂದುತ್ತಾನೆ. ರೋಹಿಣೀ ನಕ್ಷತ್ರದಲ್ಲಿ ಶ್ರಾದ್ಧಮಾಡುವುದರಿಂದ ಸಂತತಿಯನ್ನು ಹೊಂದುತ್ತಾನೆ. ಮೃಗಶಿರಾ ನಕ್ಷತ್ರದಲ್ಲಿ ಶ್ರಾದ್ಧ ಮಾಡುವುದರಿಂದ ಬ್ರಹ್ಮವರ್ಚಸವನ್ನು ಪಡೆಯುತ್ತಾನೆ.

೧೦. ಆದ್ರಾ, ಪುನರ್ವಸು, ಪುಷ್ಯ, ಆಶ್ಲೇಷಾ, ಮತ್ತು ಮಘಾ ನಕ್ಷತ್ರಗಳಲ್ಲಿ ಶ್ರಾದ್ಧವನ್ನು ಮಾಡುವುದರಿಂದ ರೌದ್ರಕರ್ಮಸಿದ್ಧಿ, ಶೌರ್ಯಗಳೂ, ಭೂಮಿ, ಸಂಪತ್ತಿಗಳೂ, ಸರ್ವ ಕಾಮಗಳೂ ಮತ್ತು ಸೌಭಾಗ್ಯವೂ ಕ್ರಮದಿಂದ ಫಲವಾಗಿ ದೊರೆಯುವುವು.

ಆರ್ಯಮ್ಣೇ ತು ಧನಂ ವಿಂದೇತ್ ಫಾಲ್ಗುನ್ಯಾಂ ಪಾಪನಾಶನಮ್ ।
ಜ್ಞಾತಿಶ್ರೈಷ್ಠ್ಯಂ ತಥಾ ಹಸ್ತೇ ಚಿತ್ರಾಯಾಂ ಚ ಬಹೂನ್ ಸುತಾನ್ ॥

ವಾಣಿಜ್ಯಸಿದ್ಧಿಂ ಸ್ವಾತೌ ತು ವಿಶಾಖಾಸು ಸುವರ್ಣಕಮ್ ।
ಮೈತ್ರೇ ಬಹೂನಿ ಮಿತ್ರಾಣಿ ರಾಜ್ಯಂ ಶಾಕ್ರೇ ತಥೈವ ಚ ॥ ೧೨ ॥

ಮೂಲೇ ಕೃಷಿಂ ಲಭೇಜ್ಜ್ಞಾನಂ ಸಿದ್ಧಿಮಾಪ್ಯೇ ಸಮುದ್ರತಃ ।
ಸರ್ವಾನ್ ಕಾಮಾನ್ ವೈಶ್ವದೇವೇ ಶ್ರೈಷ್ಠ್ಯಂ ತು ಶ್ರವಣೇ ಪುನಃ ॥

ಧನಿಷ್ಠಾಯಾಂ ತಥಾ ಕಾಮಾನಂಬುಪೇ ಚ ಪರಂ ಬಲಮ್ ।
ಅಜೈಕಪಾದೇ ಕುಪ್ಯಂ ಸ್ಯಾದಹಿರ್ಬುಧ್ನ್ಯೇ ಗೃಹಂ ಶುಭಮ್ ॥ ೧೪ ॥

---

೧೧. ಹುಬ್ಬ ನಕ್ಷತ್ರದಲ್ಲಿ ಶ್ರಾದ್ಧ ಮಾಡುವುದರಿಂದ ಧನಪ್ರಾಪ್ತಿಯೂ, ಮತ್ತು ಉತ್ತರಾ ನಕ್ಷತ್ರದಲ್ಲಿ ಶ್ರಾದ್ಧ ಮಾಡುವುದರಿಂದ ಸರ್ವಪಾಪ ನಿವಾರಣೆಯೂ ಉಂಟಾಗುವುವು.

೧೨. ಹಸ್ತ ನಕ್ಷತ್ರದಲ್ಲಿ ಜ್ಞಾತಿವರ್ಗದಲ್ಲೆಲ್ಲ ಪ್ರಾಶಸ್ತ್ಯವೂ, ಚಿತ್ರಾನಕ್ಷತ್ರ ದಲ್ಲಿ ಅನೇಕ ಪುತ್ರಸಂತತಿಯೂ, ಸ್ವಾತೀ ನಕ್ಷತ್ರದಲ್ಲಿ ವ್ಯಾಪಾರ ಸಿದ್ಧಿಯೂ ಮತ್ತು ವಿಶಾಖಾ ನಕ್ಷತ್ರದಲ್ಲಿ ಸುವರ್ಣ ಪ್ರಾಪ್ತಿಯೂ ಆಗುವುವು.

೧೩. ಅನೂರಾಧಾ ನಕ್ಷತ್ರದಲ್ಲಿ ಬಹುಮಿತ್ರಲಾಭವೂ, ಜ್ಯೇಷ್ಠಾನಕ್ಷತ್ರದಲ್ಲಿ ರಾಜ್ಯಲಾಭವೂ, ಮೂಲಾನಕ್ಷತ್ರದಲ್ಲಿ ಕೃಷಿಸಿದ್ಧಿಯೂ, ಮತ್ತು ಪೂರ್ವಾಷಾಢಾ ನಕ್ಷತ್ರದಲ್ಲಿ ಸಮುದ್ರದಿಂದಾಗುವ ಸಿದ್ಧಿಯೂ ಲಭಿಸುವುವು.

೧೪. ಉತ್ತರಾಷಾಢಾ ನಕ್ಷತ್ರದಲ್ಲಿ ಸರ್ವಕಾಮಗಳೂ, ಶ್ರವಣ ನಕ್ಷತ್ರದಲ್ಲಿ ಶ್ರೇಷ್ಠತೆಯೂ, ಧನಿಷ್ಠಾ ನಕ್ಷತ್ರದಲ್ಲಿ ಇಷ್ಟಾರ್ಥ ಲಾಭವೂ ಮತ್ತು ಶತತಾರಾ ನಕ್ಷತ್ರ ದಲ್ಲಿ ಅತಿಶಯವಾದ ಬಲವೂ ಉಂಟಾಗುವುವು.

ರೇವತ್ಯಾಂ ಬಹವೋ ಗಾವೋ ಹ್ಯಶ್ವಿನ್ಯಾಂ ತುರಗಾಂಸ್ತಥಾ ।
ಯಾಮ್ಯೇ ತು ಜೀವಿತಂ ತು ಸ್ಯಾದ್ಯಃ ಶ್ರಾದ್ಧಂ ಸಂಪ್ರಯಚ್ಛತಿ ॥ ೧೫ ॥

ಆದಿತ್ಯವಾರೇತ್ವನ್ನಾರೋಗ್ಯಂ ಚಂದ್ರೇ ಸೌಭಾಗ್ಯಮೇವ ಚ ।
ಕುಜೇ ಸರ್ವತ್ರ ವಿಜಯಂ ಸರ್ವಾನ್ ಕಾಮಾನ್ ಬುಧಸ್ಯ ತು ॥ ೧೬ ॥

ವಿದ್ಯಾಮಭೀಷ್ಟಾಂ ತು ಗುರೌ ಧನಂ ವೈ ಭಾರ್ಗವೇ ಪುನಃ ।
ಶನೈಶ್ಚರೇ ಲಭೇದಾಯುಃ ಪ್ರತಿಪತ್ಸು ಸುತಾನ್ ಶುಭಾನ್ ॥ ೧೭ ॥

ಕನ್ಯಕಾ ವೈ ದ್ವಿತೀಯಾಯಾಂ ತೃತೀಯಾಯಾಂ ತು ವಿಂದತಿ ।
ಪಶೂನ್ ಕ್ಷುದ್ರಾಂಶ್ಚತುರ್ಥ್ಯಾಂ ವೈ ಪಂಚಮ್ಯಾಂ ಶೋಭನಾನ್
ಸುತಾನ್ ॥ ೧೮ ॥

---

೧೫. ಪೂರ್ವಾಭಾದ್ರಾ ನಕ್ಷತ್ರದಲ್ಲಿ ಅನ್ನ ವಸ್ತ್ರಲಾಭವೂ, ಉತ್ತರಾಭಾದ್ರಾ ನಕ್ಷತ್ರಗಲ್ಲಿ ಗೃಹಲಾಭವೂ ರೇವತೀ ನಕ್ಷತ್ರದಲ್ಲಿ ಅನ್ನ-ವಸ್ತ್ರಲಾಭವೂ, ಉತ್ತರಾ ಭಾದ್ರಾ ನಕ್ಷತ್ರದಲ್ಲಿ ಗೃಹಲಾಭವೂ ರೇವತೀ ನಕ್ಷತ್ರವಲ್ಲಿ ಗೋಧನ ಲಾಭವೂ, ಮತ್ತು ಅಶ್ವಿನೀ ನಕ್ಷತ್ರದಲ್ಲಿ ಅಶ್ವಪ್ರಾಪ್ತಿಯೂ ಅಗುವುವು, ಹಾಗು ಭರಣೀ ನಕ್ಷತ್ರ ದಲ್ಲಿ ಶ್ರಾದ್ಧವನ್ನು ಮಾಡುವುದರಿಂದ ಜೀವನಪ್ರಾಪ್ತಿಯಾಗುವುದು.

೧೬. ಆದಿತ್ಯವಾರದಲ್ಲಿ ಶ್ರಾದ್ಧ ಮಾಡಿದರೆ ಆರೋಗ್ಯವೂ, ಸೋಮವಾರದಲ್ಲಿ ಶ್ರಾದ್ಧ ಮಾಡಿದರೆ ಸೌಭಾಗ್ಯವೂ, ಮಂಗಳವಾರದಲ್ಲಿ ಶ್ರಾದ್ಧ ಮಾಡಿದರೆ ಇಷ್ಟ ಕಾರ್ಯದಲ್ಲಿ ಜಯವೂ, ಮತ್ತು ಬುಧವಾರದಲ್ಲಿ ಶ್ರಾದ್ಧ ಮಾಡಿದರೆ ಸರ್ವಕಾಮ ಗಳನ್ನೂ ಹೊಂದುವನು.

೧೭. ಗುರುವಾರದಲ್ಲಿ ಶ್ರಾದ್ಧ ಮಾಡಿದರೆ ಇಷ್ಟವಾದ ವಿದ್ಯೆಯನ್ನೂ ಶುಕ್ರ ವಾರದಲ್ಲಿ ಶ್ರಾದ್ಧ ಮಾಡಿದರೆ ಧನವನ್ನೂ ಮತ್ತು ಶನಿವಾರದಲ್ಲಿ ಶ್ರಾದ್ಧ ಮಾಡಿದರೆ ದೀರ್ಘಾಯುಸ್ಸನ್ನೂ ಹೊಂದುವನು. ಪಾಡ್ಯಮಿ ತಿಥಿಯಲ್ಲಿ ಶ್ರಾದ್ಧ ಮಾಡಿದ ವನು ಅನೇಕಮಂದಿ ಪುತ್ರರನ್ನು ಹೊಂದುವನು.

೧೮. ದ್ವಿತೀಯಾ, ತೃತೀಯಾ, ಚತುರ್ಥೀ ಮತ್ತು ಪಂಚಮೀ ತಿಥಿಗಳಲ್ಲಿ ಶ್ರಾದ್ಧ ಮಾಡಿದವನು ಕ್ರಮವಾಗಿ ಪುತ್ರೀ, ಪಶು, ಪರಿಜನ ಮತ್ತು ಶುಭಕರರಾದ ಪುತ್ರರೆಂಬ ಫಲಗಳನ್ನು ಹೊಂದುವನು.

ಷಷ್ಠ್ಯಾಂ ದ್ಯುತಿಂ ಕೃಷಿಂ ಚಾಪಿ ಸಪ್ತಮ್ಯಾಂ ಚ ಧನಂ ನರಃ ।
ಅಷ್ಟಮ್ಯಾಮಪಿ ವಾಣಿಜ್ಯಂ ಲಭತೇ ಶ್ರಾದ್ಧದಃ ಸದಾ ॥ ೧೯ ॥

ಸ್ಯಾನ್ನವಮ್ಯಾ ಮೇಕಶಖುರಂ ದಶಮ್ಯಾಂ ದ್ವಿಖುರಂ ಬಹು ।
ಏಕಾದಶ್ಯಾಂ ತಥಾ ರೂಪ್ಯಂ ಬ್ರಹ್ಮವರ್ಚಸ್ವಿನಃ ಸುತಾನ್ ॥ ೨೦ ॥

ದ್ವಾದಶ್ಯಾಂ ಜಾತರೂಪಂ ಚ ರಜತಂ ಕುಪ್ಯಮೇವ ಚ ।
ಜ್ಞಾತಿಶ್ರೈಷ್ಠ್ಯಂ ತ್ರಯೋದಶ್ಯಾಂ ಚತುರ್ದಶ್ಯಾಂ ತು ಕುಪ್ರಜಾಃ ॥
ಪಂಚದಶ್ಯಾಂ ಸರ್ವಕಾಮಾನ್ ಪ್ರಾಪ್ನೋತಿ ಶ್ರಾದ್ಧದಃ ಸದಾ ॥ ೨೧ ॥

ತಸ್ಮಾಚ್ಛ್ರಾದ್ಧಂ ನ ಕರ್ತವ್ಯಂ ಚತುರ್ದಶ್ಯಾಂ ದ್ವಿಜಾತಿಭಿಃ ।
ಶಸ್ತ್ರೇಣ ತು ಹತಾನಾಂ ತು ಶ್ರಾದ್ಧಂ ತತ್ರ ಪ್ರಕಲ್ಪಯೇತ್ ॥ ೨೨ ॥

---

೧೯. ಷಷ್ಠಿ, ಸಪ್ತಮಿ, ಮತ್ತು ಅಷ್ಟಮಿ ತಿಥಿಗಳಲ್ಲಿ ಶ್ರಾದ್ಧ ಮಾಡಿರುವ ಮಾನವನು ಕಾಂತಿ ಕೃಷಿಗಳನ್ನೂ ಧನವನ್ನೂ ಮತ್ತು ವಾಣಿಜ್ಯಸಿದ್ಧಿಯನ್ನೂ ಫಲವಾಗಿ ಹೊಂದುವನು.

೨೦. ನವಮಿ, ದಶಮಿ, ಮತ್ತು ಏಕಾದಶೀ ತಿಥಿಗಳಲ್ಲಿ ಶ್ರಾದ್ಧ ಮಾಡಿರುವ ಮಾನವನು ಒಂದು ಗೊರಸುಳ್ಳ ಪ್ರಾಣಿ, ಎರಡು ಗೊರಸಿನ ಪ್ರಾಣಿ ಮತ್ತು ರಜತ, ಬ್ರಹ್ಮವರ್ಚಸ್ಸಿನಿಂದ ಕೂಡಿದ ಪುತ್ರರೆಂಬ ಫಲಗಳನ್ನು ಕ್ರಮವಾಗಿ ಹೊಂದುವನು.

೨೧. ದ್ವಾದಶೀ ಶ್ರಾದ್ಧದಿಂದ ಸುವರ್ಣ ರಜತ, ಅನ್ನ-ವಸ್ತ್ರಗಳನ್ನೂ, ತ್ರಯೋದಶೀ ಶ್ರಾದ್ಧದಿಂದ ಜ್ಞಾತಿಗಳಲ್ಲೆಲ್ಲ ಮಾನ್ಯತೆಯನ್ನೂ, ಚತುರ್ದಶೀ ಶ್ರಾದ್ಧದಿಂದ ನಿಂದಿತ ಪ್ರಜೆಯನ್ನೂ ಮತ್ತು ಪೂರ್ಣಿಮಾ ಶ್ರಾದ್ಧದಿಂದ ಸರ್ವಕಾಮಗಳನ್ನೂ ಹೊಂದುತ್ತಾನೆ.

೨೨. ಆದ್ದರಿಂದ ದ್ವಿಜರು ಚತುರ್ದಶೀ ತಿಥಿಯಲ್ಲಿ ಮಾತ್ರ ಶ್ರಾದ್ಧವನ್ನು ಆಚರಿಸಬಾರದು, ಶಸ್ತ್ರದಿಂದ ಹತರಾದವರಿಗೆ ಮಾತ್ರ ಚತುರ್ದಶೀ ತಿಥಿಯಲ್ಲಿ ಶ್ರಾದ್ಧವನ್ನು ಮಾಡಬೇಕು.

ದ್ರವ್ಯಬ್ರಾಹ್ಮಣಸಂಪತ್ತೌ ನ ಕಾಲನಿಯಮಃ ಕೃತಃ ।
ತಸ್ಮಾದ್ಭೋಗಾಪವರ್ಗಾರ್ಥಂ ಶ್ರಾದ್ಧಂ ಕುರ್ಯುರ್ದ್ವಿಜಾತಯಃ॥ ೨೩ ॥

ಕರ್ಮಾರಂಭೇಷು ಸರ್ವೇಷು ಕುರ್ಯಾದಭ್ಯುದಯೇ ಪುನಃ ।
ಪುತ್ರಜನ್ಮಾದಿಷು ಶ್ರಾದ್ಧಂ ಪಾರ್ವಣಂ ಪರ್ವಸು ಸ್ಮೃತಮ್ ॥ ೨೪ ॥

ಅಹನ್ಯಹನಿ ನಿತ್ಯಂ ಸ್ಯಾತ್ ಕಾಮ್ಯಂ ನೈಮಿತ್ತಿಕಂ ಪುನಃ ।
ಏಕೋದ್ದಿಷ್ಟಾದಿ ವಿಜ್ಞೇಯಂ ದ್ವಿಧಾ ಶ್ರಾದ್ಧಂ ತು ಪಾರ್ವಣಮ್॥೨೫॥

ಏತತ್ಪಂಚವಿಧಂ ಶ್ರಾದ್ಧಂ ಮನುನಾ ಪರಿಕೀರ್ತಿತಮ್ ।
ಯಾತ್ರಾಯಾಂ ಷಷ್ಠಮಾಖ್ಯಾತಂ ತತ್ಪ್ರಯತ್ನೇನ ಪಾಲಯೇತ್॥೨೬॥

---

೨೩. ಉಚಿತವಾದ ದ್ರವ್ಯ ಯೋಗ್ಯರಾದ ಬ್ರಾಹ್ಮಣರು ಒದಗಿರುವ ಸಮಯದಲ್ಲಿ ಶ್ರಾದ್ಧಕಾಲದ ನಿಯಮವು ವಿಧಿಸಲ್ಪಡಲಿಲ್ಲ, ಆದ್ದರಿಂದ ದ್ವಿಜರು ಭೋಗ-ಅಪವರ್ಗ ಪ್ರಾಪ್ತಿಗೆ ಶ್ರಾದ್ಧವನ್ನು ಮಾಡಬೇಕು.

೨೪. ಸಮಸ್ತ ಕರ್ಮಗಳ ಆರಂಭದಲ್ಲಿಯೂ, ಅಭ್ಯುದಯದಲ್ಲಿಯೂ, ಪುತ್ರ ಜನ್ಮಾದಿಗಳಲ್ಲಿಯೂ ಅಭ್ಯುದಯ ಶ್ರಾದ್ಧವನ್ನು ಆಚರಿಸಬೇಕು. ಪರ್ವ ಕಾಲಗಳಲ್ಲಿ ಪಾರ್ವಣ ಶ್ರಾದ್ಧವು ಕರ್ತವ್ಯವೆಂದು ಸ್ಮರಿಸಲ್ಪಟ್ಟಿದೆ.

೨೫ ಪ್ರತಿದಿನದಲ್ಲಿ ಮಾಡುವ ಶ್ರಾದ್ಧವೂ, ನಿತ್ಯ ಶ್ರಾದ್ಧವೂ, ಕಾಮ ಶ್ರಾದ್ಧವೂ ಆಗುವುದು. ಏಕೋದ್ದಿಷ್ಟಾದಿ ಶ್ರಾದ್ಧವು ನೈಮಿತ್ತಿಕ ಶ್ರಾದ್ಧವಾಗುವುದು. ಪಾರ್ವಣ ಶ್ರಾದ್ಧವು ಎರಡು ಬಗೆಗಳುಳ್ಳದ್ದೂ ಆಗಿದೆ.

೨೬. ಈ ರೀತಿಯಾಗಿ ಐದು ಬಗೆಯ ಶ್ರಾದ್ಧಗಳು ಮನುಪ್ರಜಾಪತಿಯಿಂದ ಕೀರ್ತಿಸಲ್ಪಟ್ಟಿವೆ. ಯಾತ್ರಾ ಸಮಯದಲ್ಲಿ ಆರನೆಯ ಶ್ರಾದ್ಧವು ವಿಧಿಸಲ್ಪಟ್ಟಿದೆ. ಅಂತಹ ಯಾತ್ರಾಶ್ರಾದ್ಧವನ್ನು ಪ್ರಯತ್ನದಿಂದ ಪಾಲಿಸಬೇಕು.

ಶುದ್ಧಯೇ ಸಪ್ತಮಂ ಶ್ರಾದ್ಧಂ ಬ್ರಹ್ಮಣಾ ಪರಿಭಾಷಿತಮ್ ।
ದೈವಿಕಂ ಚಾಷ್ಟಮಂ ಶ್ರಾದ್ಧಂ ಯತ್ ಕೃತ್ವಾ ಮುಚ್ಯತೇ ಭಯಾತ್ ॥

ಸಂಧ್ಯಾಂ ರಾತ್ರೌ ನ ಕರ್ತವ್ಯಂ ರಾಹೋರನ್ಯತ್ರ ದರ್ಶನಾತ್ ।
ದೇಶಾನಾಂ ತು ವಿಶೇಷೇಣ ಭವೇತ್ಪುಣ್ಯಮನಂತಕಮ್ ॥ ೨೮ ॥

ಗಂಗಾಯಾಮಕ್ಷಯಂ ಶ್ರಾದ್ಧಂ ಪ್ರಯಾಗೇಽಮರಕಂಟಕೇ ।
ಗಾಯಂತಿ ಪಿತರೋ ಗಾಥಾಂ ಕೀರ್ತಯಂತಿ ಮನೀಷಿಣಃ ॥ ೨೯ ॥

ಏಷ್ಟವ್ಯಾ ಬಹವಃ ಪುತ್ರಾಃ ಶೀಲವಂತೋ ಗುಣಾನ್ವಿತಾಃ ।
ತೇಷಾಂ ತು ಸಮವೇತಾನಾಂ ಯದ್ಯೇಕೋಽಪಿ ಗಯಾಂ ವ್ರಜೇತ್ ॥

---

೨೭. ಇವುಗಳಲ್ಲಿ ಏಳನೆಯ ಶ್ರಾದ್ಧವು ಬ್ರಹ್ಮನಿಂದ ಹೇಳಲ್ಪಟ್ಟಿದೆ. ದೈವಿಕವಾದ ಎಂಟನೆಯ ಶ್ರಾದ್ಧವು ವಿಧಿಸಲ್ಪಟ್ಟಿದೆ. ಅಂತಹ ದೈವಿಕ ಶ್ರಾದ್ಧವನ್ನು ಮಾಡಿದರೆ ಭಯದಿಂದ ಮುಕ್ತನಾಗುತ್ತಾನೆ.

೨೮. ರಾಹುದರ್ಶನವನ್ನು ಹೊರತು ಮಿಕ್ಕ ದಿನಗಳಲ್ಲಿ ಸಂಧ್ಯಾ-ರಾತ್ರಿಸಮಯದಲ್ಲಿ ಶ್ರಾದ್ಧವನ್ನು ಮಾಡಬಾರದು. ದೇಶಗಳ ಪವಿತ್ರತೆಯ ತಾರತಮ್ಯದಿಂದ ಶ್ರಾದ್ಧಗಳು ಅನಂತ ವಿಧವಾದ ಫಲಗಳನ್ನು ಕೊಡುವುವು.

೨೯. ದೇವ ಕಂಟಕವೆಂಬ ಪ್ರಯಾಗದಲ್ಲಿ ಗಂಗಾನದೀ ತೀರದಲ್ಲಿ ಮಾಡಿದ ಶ್ರಾದ್ಧವು ಅಕ್ಷಯ ಫಲವಾಗುವುದು. ಪ್ರಯಾಗ ಶ್ರಾದ್ಧದ ಮಾಹಾತ್ಮ್ಯವಿಷಯದಲ್ಲಿ ಪಿತೃಗಳು ಒಂದು ಗಾಥಾ ಶ್ಲೋಕವನ್ನು ಗಾನ ಮಾಡುವರು. ಮತ್ತು ವಿದ್ವಾಂಸರು ಆ ಶ್ರಾದ್ಧವನ್ನು ಕೀರ್ತಿಸುವರು.

೩೦. ಉತ್ತಮ ಶೀಲವುಳ್ಳವರೂ ಮತ್ತು ಸದ್ಗುಣೋಪೇತರೂ ಆದ ಬಹು ಮಂದಿ ಪುತ್ರರನ್ನು ಪ್ರಾರ್ಥಿಸಬೇಕು. ಅಷ್ಟು ಮಂದಿಯು ಸೇರಿದವರಲ್ಲಿ ಕಡೆಯ ಪಕ್ಷದಲ್ಲಿ ಒಬ್ಬನಾದರೂ ಗಯೆಗೆ ಹೋಗಬಹುದು ಎಂದು ಗಾಥಾಶ್ಲೋಕದ ಅರ್ಥವು.

ಗಯಾಂ ಪ್ರಾಪ್ಯಾನುಷಂಗೇಣ ಯದಿ ಶ್ರಾದ್ಧಂ ಸಮಾಚರೇತ್ ।
ತಾರಿತಾಃ ಪಿತರಸ್ತೇನ ಸ ಯಾತಿ ಪರಮಾಂ ಗತಿಮ್ ॥ ೩೧ ॥

ವಾರಾಹಪರ್ವತೇ ಚೈವ ಗಯಾಯಾಂ ವೈ ವಿಶೇಷತಃ ।
ವಾರಾಣಸ್ಯಾಂ ವಿಶೇಷೇಣ ಯತ್ರ ದೇವಃ ಸ್ವಯಂ ಹರಃ ॥ ೩೨ ॥

ಗಂಗಾದ್ವಾರೇ ಪ್ರಭಾಸೇ ತು ಬಿಲ್ವಕೇ ನೀಲಪರ್ವತೇ ।
ಕುರುಕ್ಷೇತ್ರೇ ತು ಕುಬ್ಜಾಗ್ರೇ ಭೃಗುತುಂಗೇ ಮಹಾಲಯೇ ॥ ೩೩ ॥

ಕೇದಾರೇ ಫಲ್ಗುತೀರ್ಥೇ ಚ ನೈಮಿಷಾರಣ್ಯ ಏವ ಚ ।
ಸರಸ್ವತ್ಯಾಂ ವಿಶೇಷೇಣ ಪುಷ್ಕರೇ ತು ವಿಶೇಷತಃ ॥ ೩೪ ॥

---

೩೧. ಯಾವ ಪುತ್ರನು ಗಯೆಗೆ ಹೋಗಿ ಬೇರೊಂದು ಪ್ರಸಂಗದಿಂದ ಪಿತೃಗಳಿಗೆ ಶ್ರಾದ್ಧವನ್ನು ಮಾಡುವನೋ, ಅವನಿಂದ ಪಿತೃಗಳು ಉದ್ಧಾರಮಾಡಲ್ಪಡುವರು ಮತ್ತು ಅವನು ಸದ್ಗತಿಯನ್ನು ಹೊಂದುತ್ತಾನೆ.

೩೨. ವರಾಹ ಪರ್ವತದಲ್ಲಿಯೂ ವಿಶೇಷವಾಗಿ ಗಯಾಕ್ಷೇತ್ರದಲ್ಲಿಯೂ ಅದಕ್ಕೂ ವಿಶೇಷವಾಗಿ ವಾರಾಣಸೀ ಕ್ಷೇತ್ರದಲ್ಲಿಯೂ ಶ್ರಾದ್ಧವು ಫಲಪ್ರದವಾಗುವುದು. ವಾರಾಣಸಿಯಲ್ಲಿ ಸಾಕ್ಷಾತ್ತಾಗಿ ಪರಮಶಿವನು ವಾಸಮಾಡಿರುವನು.

೩೩. ಹಾಗು ಗಂಗಾದ್ವಾರ, ಪ್ರಭಾಸ, ಬಿಲ್ವಕ; ನೀಲಪರ್ವತ, ಕುರುಕ್ಷೇತ್ರ, ಕುಬ್ಜಾಮ್ರ, ಭೃಗುತುಂಗ ಮತ್ತು ಮಹಾಲಯ ಕ್ಷೇತ್ರಗಳಲ್ಲಿ ಆಚರಿಸುವ ಶ್ರಾದ್ಧದಿಂದ ಪಿತೃಗಳು ತೃಪ್ತರಾಗುವರು.

೩೪. ಮತ್ತು ಕೇದಾರ, ಫಲ್ಗುತೀರ್ಥ, ನೈಮಿಷಾರಣ್ಯ, ಸರಸ್ವತೀಕ್ಷೇತ್ರ ಮತ್ತು ಪುಷ್ಕರಕ್ಷೇತ್ರ ಇವುಗಳಲ್ಲಿ ಶ್ರಾದ್ಧಮಾಡುವುದರಿಂದ ಪಿತೃಗಳು ವಿಶೇಷವಾಗಿ ತೃಪ್ತಿಯನ್ನು ಹೊಂದುವರು.

ನರ್ಮದಾಯಾಂ ಕುಶಾವರ್ತೇ ಶ್ರೀಶೈಲೇ ಭದ್ರಕರ್ಣಕೇ ।
ವೇತ್ರವತ್ಯಾಂ ವಿಶಾಖಾಯಾಂ ಗೋದಾವರ್ಯಾಂ ವಿಶೇಷತಃ ॥ ೩೫ ॥

ಏವಮಾದಿಷು ಚಾನ್ಯೇಷು ತೀರ್ಥೇಷು ಪುಲಿನೇಷು ಚ ।
ನದೀನಾಂ ಚೈವ ತೀರೇಷು ತುಷ್ಯಂತಿ ಪಿತರಃ ಸದಾ ॥ ೩೬ ॥

ವ್ರೀಹಿಭಿಶ್ಚ ಯವೈರ್ಮಾಷೈರದ್ಭಿರ್ಮೂಲಫಲೇನ ವಾ ।
ಶ್ಯಾಮಾಕೈಶ್ಚ ಯವೈಃ ಕಾಶೈರ್ನೀವಾರೈಶ್ಚ ಪ್ರಿಯಂಗುಭಿಃ ।
ಗೋಧೂಮೈಶ್ಚ ತಿಲೈರ್ಮುದ್ಗೈರ್ಮಾಸಂ ಪ್ರೀಣಯತೇ ಪಿತೄನ್॥೩೭॥

ಆಮ್ರಾನ್ ಪಾನೇ ರತಾನಿಕ್ಷೂನ್ ಮೃದ್ವೀಕಾಂಶ್ಚ ಸದಾಡಿಮಾನ್ ।
ವಿದಾಶ್ವಾಂಶ್ಚ ಕುರಂಡಾಂಶ್ಚ ಶ್ರಾದ್ಧಕಾಲೇ ಪ್ರದಾಪಯೇತ್ ॥ ೩೮ ॥

---

೩೫. ನರ್ಮದಾನದಿ, ಕುಶಾವರ್ತ, ಶ್ರೀಶೈಲ, ಭದ್ರಕರ್ಣ, ವೇತ್ರವತೀ, ವಿಶಾಖಾ ಮತ್ತು ಗೋದಾವರಿ ಎಂಬ ಪುಣ್ಯಕ್ಷೇತ್ರಗಳಲ್ಲಿ ಶ್ರಾದ್ಧದಾನವು ಪಿತೃಗಳಿಗೆ ವಿಶೇಷವಾಗಿ ತೃಪ್ತಿಯನ್ನುಂಟುಮಾಡುವುದು.

೩೬. ಈ ವಿಧವಾದ ಇತರ ಕ್ಷೇತ್ರಗಳಲ್ಲಿಯೂ, ತೀರ್ಥಗಳಲ್ಲಿಯೂ, ಮಳಲು ದಿಣ್ಣೆಗಳಲ್ಲಿಯೂ ಮತ್ತು ನದೀತೀರಗಳಲ್ಲಿಯೂ ಶ್ರಾದ್ಧಾಚರಣೆಯಿಂದ ಪಿತೃಗಳು ಯಾವಾಗಲೂ ಸಂತೋಷಪಡುತ್ತಾರೆ.

೩೭. ಭತ್ತ, ಯವ ಮಾಷ, ಜಲ, ಮೂಲ, ಫಲ, ಶ್ಯಾಮಾಕ, ನೀವಾರ ಪ್ರಿಯಂಗು, ಗೋಧಿ, ತಿಲ ಮತ್ತು ಹೆಸರು ಎಂಬ ವಿಹಿತ ಸಾಮಗ್ರಿಯಿಂದ ಮಾಡಿದ ಶ್ರಾದ್ಧವು ಮಾಸಪರ್ಯಂತವಾಗಿ ಪಿತೃಗಳಿಗೆ ತೃಪ್ತಿಯನ್ನು ಕೊಡುವುದು.

೩೮. ಮಾವು, ಹಲಸು, ಕಬ್ಬು, ದ್ರಾಕ್ಷಿ ದಾಳಿಂಬ, ಬಿದಾರ್ವ, ಕುರಂಡ ಮುಂತಾದ ಫಲವಸ್ತುಗಳನ್ನು ಶ್ರಾದ್ಧಕಾಲದಲ್ಲಿ ಯಾವಾಗಲೂ ದಾನ ಮಾಡುವುದು ಪಿತೃಗಳಿಗೆ ತೃಪ್ತಿಕರವು.

ಲಾಜಾನ್ ಮಧುಯುತಾನ್ ದದ್ಯಾತ್ಸಕ್ತೂನ್ ಶರ್ಕರಯಾ ಸಹ ।
ದದ್ಯಾಚ್ಛ್ರಾದ್ಧೇ ಪ್ರಯತ್ನೇನ ಶೃಂಗಾಟಕಕಶೇರುಕಾನ್ ॥ ೩೯ ॥

ದ್ವೌ ಮಾಸೌ ಮತ್ಸ್ಯಮಾಂಸೇನ ತ್ರೀನ್ ಮಾಸಾನ್ ಹಾರಿಣೇನ ತು ।
ಔರಭ್ರೇಣಾಥ ಚತುರಃ ಶಾಕುನೇನೇಹ ಪಂಚ ತು ।
ಷಣ್ಮಾಸಾಂಶ್ಛಾಗಮಾಂಸೇನ ಪಾರ್ಷತೇನೇಹ ಸಪ್ತ ವೈ ॥ ೪೦ ॥

ಅಷ್ಟಾವೇಣಸ್ಯ ಮಾಂಸೇನ ರೌರವೇಣ ನವೈವ ತು ।
ದಶಮಾಸಾಂಸ್ತು ತೃಪ್ಯಂತಿ ವರಾಹಮಹಿಷಾಮಿಷೈಃ ॥ ೪೧ ॥

ಶಶಕೂರ್ಮಯೋರ್ಮಾಂಸೇನ ಮಾಸಾನೇಕಾದಶೈವ ತು ।
ಸಂವತ್ಸರಂ ತು ಗವ್ಯೇನ ಪಯಸಾ ಪಾಯಸೇನ ತು ।
ವಾರ್ಧ್ರೀಣಸಸ್ಯ ಮಾಂಸೇನ ತೃಪ್ತಿರ್ದ್ವಾದಶವಾರ್ಷಿಕೀ ॥ ೪೨ ॥

---

೩೯. ಮಧುವಿನಿಂದ ಕೂಡಿದ ಅರಳನ್ನೂ ಸಕ್ಕರೆಯಿಂದ ಕೂಡಿದ ಸಕ್ತುವನ್ನೂ ಮತ್ತು ಶೃಂಗಾಟಕ, ಕಶೇರುಕಗಳನ್ನೂ ಶ್ರಾದ್ಧಕಾಲದಲ್ಲಿ ಪ್ರಯತ್ನದಿಂದ ದಾನಮಾಡಬೇಕು.

೪೦. ಮತ್ಸ್ಯದ ಮಾಂಸದಿಂದ ಎರಡು ತಿಂಗಳು, ಜಿಂಕೆಯ ಮಾಂಸದಿಂದ ಮೂರು ತಿಂಗಳು, ಹೋತದ ಮಾಂಸದಿಂದ ನಾಲ್ಕು ತಿಂಗಳು ಪಕ್ಷಿ ಮಾಂಸದಿಂದ ಐದು ತಿಂಗಳು, ಆಡಿನ ಮಾಂಸದಿಂದ ಆರು ತಿಂಗಳು, ಪೃಷತ ಎಂಬ ಜಿಂಕೆಯ ಮಾಂಸದಿಂದ ಏಳು ತಿಂಗಳು ಪಿತೃಗಳಿಗೆ ತೃಪ್ತಿಯಾಗುವುದು.

೪೧. ಏಣಮೃಗದ ಮಾಂಸದಿಂದ ಎಂಟು ತಿಂಗಳು, ರುರು ಮೃಗದ ಮಾಂಸದಿಂದ ಒಂಭತ್ತು ತಿಂಗಳು ಮತ್ತು ವರಾಹ–ಮಹಿಷಗಳ ಮಾಂಸದಿಂದ ಹತ್ತು ತಿಂಗಳು ಪಿತೃಗಳು ತೃಪ್ತಿ ಹೊಂದುವರು,

೪೨, ಮೊಲ–ಆಮೆಗಳ ಮಾಂಸದಿಂದ ಹನ್ನೊಂದು ತಿಂಗಳೂ, ಹಸುವಿನ ಕ್ಷೀರದಿಂದ ಮಾಡಿದ ಪಾಯಸದಿಂದ ಒಂದು ವರ್ಷವೂ ಮತ್ತು ವಾರ್ಧ್ರೀಣಸದ ಮಾಂಸದಿಂದ ಹನ್ನೆರಡು ವರ್ಷ ಪರ್ಯಂತವೂ ಪಿತೃಗಳಿಗೆ ತೃಪ್ತಿಯಾಗುವುದು.

ಕಾಲಶಾಕಂ ಮಹಾಶಲ್ಕಃ ಖಡ್ಗಲೋಹಾಮಿಷಂ ಮಧು ।
ಆನಂತ್ಯಾಯೈವ ಕಲ್ಪಂತೇ ಮುನ್ಯನ್ನಾನಿ ಚ ಸರ್ವಶಃ ॥ ೪೩ ॥

ಕ್ರೀತ್ವಾ ಲಬ್ಧ್ವಾ ಸ್ವಯಂ ವಾಥ ಮೃತಾನಾಹೃತ್ಯ ವೈ ದ್ವಿಜಃ ।
ದದ್ಯಾಚ್ಛ್ರಾದ್ಧೇ ಪ್ರಯತ್ನೇನ ತದಸ್ಯಾಕ್ಷಯಮುಚ್ಯತೇ ॥ ೪೪ ॥

ಪಿಪ್ಪಲೀ ರುಚಕಂ ಚೈವ ತಥಾ ಚೈವ ಮಸೂರಕಮ್ ।
ಕೂಷ್ಮಾಂಡಾಲಾಬುವಾರ್ತಾಕಭೂತೃಣಂ ಸರಸಂ ತಥಾ ॥ ೪೫ ॥

ಕುಸುಂಭಪಿಂಡಮೂಲಂ ವೈ ತಂದುಲೀಯಕಮೇವ ಚ ।
ರಾಜಮಾಷಾಂಸ್ತಥಾ ಕ್ಷೀರಂ ಮಹಿಷಾಜಂ ವಿವರ್ಜಯೇತ್ ॥ ೪೬ ॥

---

೪೩. ಶ್ರಾದ್ಧದಲ್ಲಿ ಕಾಲಶಾಕ, ಮಹಾಶಲ್ಕ, ಖಡ್ಗಲೋಹವೃಗದ ಮಾಂಸ ಮತ್ತು ಮಧು ಇವುಗಳೂ, ಮುನಿಗಳಿಗೆ ಉಚಿತವಾದ ಅನ್ನಗಳೂ ಸರ್ವಪ್ರಕಾರದಿಂದ ಅನಂತವಾದ ಫಲವನ್ನು ಕೊಡುವುವು.

೪೪. ದ್ವಿಜನು ತಾನು ಕೊಂಡುಕೊಂಡಾಗಲೀ ಅಥವಾ ಮೃತವಾದ ಪ್ರಾಣಿಗಳನ್ನು ಹೊಂದಿಯಾಗಲೀ ಅವುಗಳ ಮಾಂಸವನ್ನು ತೆಗೆದುಕೊಂಡು ಶ್ರಾದ್ಧದಲ್ಲಿ ಪ್ರಯತ್ನದಿಂದ ಅರ್ಪಿಸಬೇಕು. ಅದು ಅವನಿಗೆ ಅಕ್ಷಯಫಲವನ್ನು ಕೊಡುವುದು.

೪೫. ಪಿಪ್ಪಲಿ, ರುಚಕ, ಮಸೂರಕ; ಕೂಷ್ಮಾಂಡ, ಅಲಾಬು, ವಾರ್ತಾಕ, ಭೂತೃಣ, ಮತ್ತು ಸರಸವೆಂಬ ಶಾಕ ಸಾಮಗ್ರಿಗಳನ್ನು ಶ್ರಾದ್ಧದಲ್ಲಿ ವರ್ಜಿಸಬೇಕು.

೪೬. ಹಾಗೂ ಕುಸುಂಭ, ಪಿಂಡಮೂಲ, ತಂದುಲೀಯಕ, ರಾಜಮಾಷ, ಮಹಿಷೀ ಕ್ಷೀರ ಮತ್ತು ಅಜಕ್ಷೀರಗಳನ್ನು ಶ್ರಾದ್ಧದಲ್ಲಿ ಉಪಯೋಗಿಸಬಾರದು.

ಆಢಕ್ಯಃ ಕೋವಿದಾರಾಶ್ಚ ಪಾಲಕ್ಯಾ ಮರಿಚಾಸ್ತಥಾ ।
ವರ್ಜಯೇತ್ ಸಪ್ತ ಯತ್ನೇನ ಶ್ರಾದ್ಧಕಾಲೇ ದ್ವಿಜೋತ್ತಮಃ ॥ ೪೭ ॥

ಇತಿ ಶ್ರೀ ಕೂರ್ಮಪುರಾಣೇ ತ್ರಿಸಪ್ತತಿತಮೋಽಧ್ಯಾಯಃ.

---

೪೭. ಆಢಕೀ, ಕೋವಿವಾರ, ಪಾಲಕ್ಯ, ಮರಿಚ ಎಂಬ ರಾಜಮಾಷ ಮೊದಲಾದ ಏಳು ವಸ್ತುಗಳನ್ನು ದ್ವಿಜೋತ್ತಮನು ಶ್ರಾದ್ಧಕಾಲದಲ್ಲಿ ಪ್ರಯತ್ನದಿಂದ ವರ್ಜಿಸಬೇಕು.

ಕೂರ್ಮಪುರಾಣದಲ್ಲಿ ಎಪ್ಪತ್ತಮೂರನೆಯ ಅಧ್ಯಾಯವು ಸಮಾಪ್ತವು.

ಶ್ರೀಃ

# ಕೂರ್ಮಪುರಾಣಂ

## ಚತುಃಸಪ್ತತಿತಮೋಽಧ್ಯಾಯಃ.

ವ್ಯಾಸ ಉವಾಚ :—

ಸ್ನಾತ್ವಾ ಯಥೋಕ್ತಂ ಸಂತರ್ಪ್ಯ ಪಿತೄಂಶ್ಚಂದ್ರಕ್ಷಯೇ ದ್ವಿಜಃ ।
ಪಿಂಡಾನ್ವಾಹಾರ್ಯಕಂ ಶ್ರಾದ್ಧಂ ಕುರ್ಯಾತ್ ಸೌಮ್ಯಮನಾಃ ಶುಚಿಃ॥

ಪೂರ್ವಮೇವ ಸಮೀಕ್ಷೇತ ಬ್ರಾಹ್ಮಣಂ ವೇದಪಾರಗಮ್ ।
ತೀರ್ಥಂ ತದ್ಧವ್ಯಕವ್ಯಾನಾಂ ಪ್ರದಾನಾನಾಂ ಚ ಸ ಸ್ಮೃತಃ ॥ ೨ ॥

---

## ಎಪ್ಪತ್ತನಾಲ್ಕನೆಯ ಅಧ್ಯಾಯವು

೧. ವ್ಯಾಸಮುನಿಯು ಹೀಗೆಂದನು:– ದ್ವಿಜನು ಸ್ನಾನಮಾಡಿ ಯಥಾವಿಧಿಯಾಗಿ ಪಿತೃಗಳಿಗೆ ತರ್ಪಣವನ್ನು ಕೊಟ್ಟು ಅಮಾವಾಸ್ಯಾ ತಿಥಿಯಲ್ಲಿ ಸಾಧುವಾದ ಮನಸ್ಸುಳ್ಳವನೂ, ಪವಿತ್ರನೂ ಆಗಿ ಪಿಂಡಾನ್ವಾಹಾರ್ಯಕ ಶ್ರಾದ್ಧವನ್ನು ಮಾಡಬೇಕು.

೨. ಮೊದಲು ವೇದಪಾರಂಗತನಾದ ಬ್ರಾಹ್ಮಣನನ್ನು ನೋಡಿ ಕರೆಯಬೇಕು. ವೇದಪಾರಂಗತನಾದ ಬ್ರಾಹ್ಮಣನು ಹವ್ಯ–ಕವ್ಯಗಳಿಗೂ ಸಮಸ್ತ ದಾನಗಳಿಗೂ ಸತ್ಪಾತ್ರನೆಂದು ಸ್ಮರಿಸಲ್ಪಟ್ಟಿರುವನು.

ಯೇ ಸೋಮಪಾ ವಿರಜಸೋ ಧರ್ಮಜ್ಞಾಃ ಶಾಂತಚೇತಸಃ ।
ವ್ರತಿನೋ ನಿಯಮಸ್ಥಾಶ್ಚ ಋತುಕಾಲಾಭಿಗಾಮಿನಃ ॥ ೩ ॥

ಪಂಚಾಗ್ನಿರಪ್ಯಧೀಯಾನೋ ಯಜುರ್ವೇದವಿದೇವ ಚ ।
ಬಹ್ವೃಚಶ್ಚ ತ್ರಿಸೌಪರ್ಣಸ್ತ್ರಿಮಧುರ್ವಾ ಚ ಯೋ ಭವೇತ್ ॥ ೪ ॥

ತ್ರಿಣಾಚಿಕೇತಶ್ಛಂದೋಗೋ ಜ್ಯೇಷ್ಠಸಾಮಗ ಏವ ಚ ।
ಅಥರ್ವಶಿರಸೋಽಧ್ಯೇತಾ ರುದ್ರಾಧ್ಯಾಯೀ ವಿಶೇಷತಃ ॥ ೫ ॥

ಅಗ್ನಿಹೋತ್ರಪರೋ ವಿದ್ವಾನ್ ನ್ಯಾಯವಿಚ್ಚ ಷಡಂಗವಿತ್ ।
ಮಂತ್ರಬ್ರಾಹ್ಮಣವಿಚ್ಚೈವ ಯಶ್ಚ ಸ್ಯಾದ್ಧರ್ಮಪಾಠಕಃ ॥ ೬ ॥

---

೩. ಸೋಮಪಾಯಿಗಳೂ ರಜೋಗುಣ ಶೂನ್ಯರೂ ಧರ್ಮಜ್ಞರೂ ಶಾಂತ ಮಾನಸ ವುಳ್ಳವರೂ ವ್ರತ-ನಿಯಮಗಳನ್ನು ಆಚರಿಸುವವರೂ ಮತ್ತು ಋತುಕಾಲ ದಲ್ಲಿ ಭಾರ್ಯಾಸಂಗ ಮಾಡುವವರೂ ಶ್ರಾದ್ಧಕ್ಕೆ ಅರ್ಹರಾಗಿರುವರು.

೪. ಪಂಚಾಗ್ನಿ ಗ್ರಂಥವನ್ನು ಅಧ್ಯಯನಮಾಡಿರುವ ಯಜುರ್ವೇದಜ್ಞನೂ ಅಥವಾ ತ್ರಿಸುಪರ್ಣ ತ್ರಿಮಧುಸೂಕ್ತಗಳನ್ನು ಅಧ್ಯಯನಮಾಡಿದ ಋಗ್ವೇದಜ್ಞನೂ ಶ್ರಾದ್ಧಾರ್ಹರಾದ ಬ್ರಾಹ್ಮಣರಾಗಿರುವರು.

೫. ತ್ರಿಣಾಚಿಕೇತನೂ, ಸಾಮವೇದಿಯಾಗಿ ಜೇಷ್ಠ ಸಾಮವೇದವನ್ನು ಅಧ್ಯ ಯನ ಮಾಡಿದವನೂ, ಅಥರ್ವಶಿರಸ್ಸುಗಳನ್ನು ಪಠಿಸಿದವನೂ ಮತ್ತು ವಿಶೇಷವಾಗಿ ರುದ್ರಾಧ್ಯಾಯಿಯೂ ಶ್ರಾದ್ಧಕ್ಕೆ ಉತ್ತಮರಾದ ಬ್ರಾಹ್ಮಣರಾಗಿರುವರು.

೬. ಅಗ್ನಿಹೋತ್ರ ಹೋಮದಲ್ಲಿ ಆಸಕ್ತನೂ, ನ್ಯಾಯವಿದ್ಯೆಯನ್ನು ಅರಿತ ವನೂ, ಷಡಂಗಗಳನ್ನು ಕಲಿತವನೂ, ಮಂತ್ರ ಬ್ರಾಹ್ಮಣಗಳನ್ನು ತಿಳಿದವನೂ ಮತ್ತು ಧರ್ಮಶಾಸ್ತ್ರ ಪಾಠಕನೂ ಶ್ರಾದ್ಧಾರ್ಹರಾಗಿರುವರು.

ಋಷಿವ್ರತೀ ಋಷೀಕಶ್ಚ ಶಾಂತಚೇತಾ ಜಿತೇಂದ್ರಿಯಃ ।
ಬ್ರಹ್ಮದೇಯಾನುಸಂತಾನೋ ಗರ್ಭಶುದ್ಧಃ ಸಹಸ್ರದಃ ॥ ೭ ॥

ಚಾಂದ್ರಾಯಣವ್ರತಚರಃ ಸತ್ಯವಾದೀ ಪುರಾಣವಿತ್ ।
ಗುರುದೇವಾಗ್ನಿಪೂಜಾಸು ಪ್ರಸಕ್ತೋ ಜ್ಞಾನತತ್ಪರಃ ॥ ೮ ॥

ವಿಮುಕ್ತಃ ಸರ್ವತೋ ಧೀರೋ ಬ್ರಹ್ಮಭೂತೋ ದ್ವಿಜೋತ್ತಮಃ ।
ಮಹಾದೇವಾರ್ಚನರತೋ ವೈಷ್ಣವಃ ಪಂಕ್ತಿಪಾವನಃ ॥ ೯ ॥

ಅಹಿಂಸಾನಿರತೋ ನಿತ್ಯಮಪ್ರತಿಗ್ರಹಣಸ್ತಥಾ ।
ಸತ್ರೀ ಚ ದಾನನಿರತೋ ವಿಜ್ಞೇಯಃ ಪಂಕ್ತಿಪಾವನಃ ॥ ೧೦ ॥

---

೭. ಋಷಿ ವ್ರತಾಚಾರವುಳ್ಳವನೂ, ಋಷೀಕನೂ, ಶಾಂತವಾದ ಮಾನಸವುಳ್ಳವನೂ, ಜಿತೇಂದ್ರಿಯನೂ, ವೇದಪ್ರವಚನ ಮಾಡುವ ವಂಶದಲ್ಲಿ ಜನಿಸಿದವನೂ ಗರ್ಭಶುದ್ಧಿಯುಳ್ಳವನೂ ಮತ್ತು ಸಹಸ್ರಾರು ಜನರಿಗೆ ದಾನಮಾಡುವವನೂ ಶ್ರಾದ್ಧಕ್ಕೆ ಯೋಗ್ಯರಾಗಿರುವರು.

೮. ಚಾಂದ್ರಾಯಣ ವ್ರತವನ್ನು ಆಚರಿಸುವವನೂ, ಸತ್ಯವಾದಿಯೂ, ಪುರಾಣಜ್ಞನೂ, ಗುರು-ದೇವತೆ ಮತ್ತು ಅಗ್ನಿಗಳ ಪೂಜೆಯಲ್ಲಿ ಆಸಕ್ತನೂ, ಜ್ಞಾನನಿಷ್ಠೆಯಲ್ಲಿ ತತ್ಪರನೂ ಆದ ವಿಪ್ರನು ಶ್ರಾದ್ಧಾರ್ಹನಾಗಿರುವನು.

೯. ಸರ್ವವ್ಯಾಮೋಹಗಳಿಂದ ವಿಮುಕ್ತನೂ ಜ್ಞಾನಿಯೂ ಬ್ರಹ್ಮಭೂತನೂ ಮಹಾದೇವನ ಅರ್ಚನೆಯಲ್ಲಿ ಆಸಕ್ತನೂ ಅಥವಾ ವಿಷ್ಣುಭಕ್ತನೂ ಆದ ದ್ವಿಜೋತ್ತಮನು ಪಂಕ್ತಿಪಾವನನೆನಿಸಿರುವನು.

೧೦. ಅಹಿಂಸೆಯಲ್ಲಿ ಆಸಕ್ತನೂ, ಯಾವಾಗಲೂ ಪ್ರತಿಗ್ರಹವನ್ನು ವರ್ಜಿಸಿದವನೂ, ಸತ್ರಯಾಗವನ್ನು ಮಾಡುವವನೂ ಮತ್ತು ದಾನ ಮಾಡುವುದರಲ್ಲಿ ಪ್ರೀತಿಯುಳ್ಳವನೂ ಆದ ಮಾನವನು ಪಂಕ್ತಿಪಾವನನೆಂದು ಅರಿಯಬೇಕು.

ಮಾತಾಪಿತ್ರೋರ್ಹಿತೇ ಯುಕ್ತಃ ಪ್ರಾತಃಸ್ನಾಯೀ ತಥಾ ದ್ವಿಜಃ ।
ಅಧ್ಯಾತ್ಮವಿನ್ಮುನಿರ್ದಾಂತೋ ವಿಜ್ಞೇಯಃ ಪಂಕ್ತಿಪಾವನಃ ॥ ೧೧ ॥

ಜ್ಞಾನನಿಷ್ಠೋ ಮಹಾಯೋಗೀ ವೇದಾಂತಾರ್ಥವಿಚಿಂತಕಃ ।
ಶ್ರದ್ಧಾಲುಃ ಶ್ರಾದ್ಧನಿರತೋ ಬ್ರಾಹ್ಮಣಃ ಪಂಕ್ತಿಪಾವನಃ ॥ ೧೨ ॥

ವೇದವಿದ್ಯಾರತಃ ಸ್ನಾತೋ ಬ್ರಹ್ಮಚರ್ಯಪರಃ ಸದಾ ।
ಅಥರ್ವಣೋ ಮುಮುಕ್ಷುಶ್ಚ ಬ್ರಾಹ್ಮಣಃ ಪಂಕ್ತಿಪಾವನಃ ॥ ೩ ॥

ಅಸಮಾನಪ್ರವರಕೋ ಹ್ಯಸಗೋತ್ರಸ್ತಥೈವ ಚ ।
ಸಂಬಂಧಶೂನ್ಯೋ ವಿಜ್ಞೇಯೋ ಬ್ರಾಹ್ಮಣಃ ಪಂಕ್ತಿಪಾವನಃ ॥ ೧೪ ॥

---

೧೧. ಮಾತಾ-ಪಿತೃಗಳ ಹಿತವನ್ನು ಆಚರಿಸುವವನೂ, ಪ್ರಾತಸ್ಸ್ನಾನಮಾಡುವವನೂ, ಅಧ್ಯಾತ್ಮವನ್ನು ಅರಿತವನೂ, ಮುನಿಯೂ ಮತ್ತು ಜಿತೇಂದ್ರಿಯನೂ ಆದ ದ್ವಿಜನು ಪಂಕ್ತಿಪಾವನನೆಂದು ಅರಿಯಬೇಕು.

೧೨. ಜ್ಞಾನನಿಷ್ಠನೂ, ಮಹಾಯೋಗಿಯೂ, ವೇದಾಂತಗಳ ಅರ್ಥವನ್ನು ವಿಚಾರಮಾಡುವವನೂ, ಶ್ರದ್ಧಾವಂತನೂ, ಶ್ರಾದ್ಧಕರ್ಮದಲ್ಲಿ ಆಸಕ್ತನೂ ಆದ ಬ್ರಾಹ್ಮಣನು ಪಂಕ್ತಿ ಪಾವನನೆಂದು ಅರಿಯಬೇಕು.

೧೩. ವೇದ ವಿದ್ಯೆಯಲ್ಲಿ ಪಾರಂಗತನೂ, ಗುರುಕುಲದಿಂದ ನಿವೃತ್ತನೂ, ಯಾವಾಗಲೂ ಬ್ರಹ್ಮಚರ್ಯ ನಿಯಮಗಳಲ್ಲಿ ಆಸಕ್ತನೂ, ಅಥರ್ವವೇದಾಧ್ಯಾಯಿಯೂ, ಮೋಕ್ಷವನ್ನು ಬಯಸುವವನೂ ಆದ ಬ್ರಾಹ್ಮಣನು ಪಂಕ್ತಿಪಾವನನಾಗುವನು.

೧೪. ಬೇರೆಯಾದ ಪ್ರವರ ಮತ್ತು ಗೋತ್ರಗಳಿಂದ ಕೂಡಿದವನೂ, ಸಂಬಂಧವಿಲ್ಲದವನೂ ಆದ ಬ್ರಾಹ್ಮಣನು ಶ್ರಾದ್ಧದಲ್ಲಿ ಪಂಕ್ತಿಪಾವನನೆಂದು ತಿಳಿಯಬೇಕು.

ಭೋಜಯೇದ್ಯೋಗಿನಂ ಶಾಂತಂ ತತ್ತ್ವಜ್ಞಾನರತಂ ಯತಃ ।
ಅಭಾವೇ ನೈಷ್ಠಿಕಂ ದಾಂತಮುಪಕುರ್ವಾಣಕಂ ತಥಾ ॥ ೧೫ ॥

ತದಲಾಭೇ ಗೃಹಸ್ಥಂ ತು ಮುಮುಕ್ಷುಂ ಸಂಗವರ್ಜಿತಮ್ ।
ಸರ್ವಾಲಾಭೇ ಸಾಧಕಂ ವಾ ಗೃಹಸ್ಥಮಪಿ ಭೋಜಯೇತ್ ॥ ೧೬ ॥

ಪ್ರಕೃತೇರ್ಗುಣತತ್ತ್ವಜ್ಞೋ ಯಸ್ಯಾಶ್ನಾತಿ ಯತಿರ್ಹವಿಃ ।
ಫಲಂ ವೇದಾಂತವಿತ್ತಸ್ಯ ಸಹಸ್ರಾದತಿರಿಚ್ಯತೇ ॥ ೧೭ ॥

ತಸ್ಮಾದ್ಯತ್ನೇನ ಯೋಗೀಂದ್ರಮೀಶ್ವರಜ್ಞಾನತತ್ಪರಮ್ ।
ಭೋಜಯೇದ್ಧವ್ಯಕವ್ಯೇಷು ಅಲಾಭಾದಿತರಾನ್ ದ್ವಿಜಾನ್ ॥ ೧೮ ॥

---

೧೫. ಯೋಗಿಯೂ, ಶಾಂತನೂ ಮತ್ತು ತತ್ತ್ವಜ್ಞಾನದಲ್ಲಿ ಆಸಕ್ತನೂ ಆದ ವಿಪ್ರನನ್ನು ಭೋಜನ ಮಾಡಿಸಬೇಕು, ಅಂತಹವನು ಲಭಿಸದಿದ್ದರೆ ಜಿತೇಂದ್ರಿಯನಾದ ನೈಷ್ಠಿಕ ಅಥವಾ ಉಪಕುರ್ವಾಣ ಎಂಬ ಬ್ರಹ್ಮಚಾರಿಯನ್ನು ಭೋಜನ ಮಾಡಿಸಬೇಕು.

೧೬. ಅವನು ಲಭಿಸದಿದ್ದರೆ ಮೋಕ್ಷವನ್ನು ಆಕಾಂಕ್ಷಿಸುವ ಸಂಗಶೂನ್ಯನಾದ ಗೃಹಸ್ಥನನ್ನು ಭೋಜನಮಾಡಿಸಬೇಕು, ಇವರಿಬ್ಬರೂ ಸಿಕ್ಕದಿದ್ದರೆ ಸಾದಕನಾದ ಗೃಹಸ್ಥನಿಗೆ ಭೋಜನ ಮಾಡಿಸಬೇಕು.

೧೭. ಪ್ರಕೃತಿಯ ಗುಣತತ್ತ್ವಗಳನ್ನು ತಿಳಿದವನೂ ವೇದಾಂತಜ್ಞನೂ ಆದ ಯತಿಯು ಯಾವ ಮಾನವನ ಹವಿಸ್ಸನ್ನು ಭುಂಜಿಸುವನೋ ಅವನಿಗೆ ಆ ಹವಿಸ್ಸು ಸಹಸ್ರಕ್ಕಿಂತ ಅಧಿಕವಾಗಿ ಫಲವನ್ನು ಕೊಡುವುದು.

೧೮. ಆದುದರಿಂದ ಹವ್ಯ-ಕವ್ಯಗಳಲ್ಲಿ ಈಶ್ವರಜ್ಞಾನದಲ್ಲಿ ತತ್ಪರನಾದ ಯೋಗೀಂದ್ರನಿಗೆ ಭೋಜನ ಮಾಡಿಸಬೇಕು. ಅಂತಹವರು ಲಭಿಸದಿದ್ದರೆ ಇತರ ದ್ವಿಜರಿಗೆ ಭೋಜನ ಮಾಡಿಸಬೇಕು.

ಏಷ ವೈ ಪ್ರಥಮಃ ಕಲ್ಪಃ ಪ್ರದಾನೇ ಹವ್ಯಕವ್ಯಯೋಃ ।
ಅನುಕಲ್ಪಸ್ತ್ವಯಂ ಜ್ಞೇಯಃ ಸದಾ ಸದ್ಭಿರನುಷ್ಠಿತಃ ॥ ೧೯ ॥

ಮಾತಾಮಹಂ ಮಾತುಲಂ ಚ ಸ್ವಸ್ರೀಯಂ ಶ್ವಶುರಂ ಗುರುಮ್ ।
ದೌಹಿತ್ರಂ ವಿಟ್ಪತಿಂ ಬಂಧುಮೃತ್ವಿಗ್ಯಾಜ್ಯೌ ಚ ಭೋಜಯೇತ್ ॥ ೨೦ ॥

ನ ಶ್ರಾದ್ಧೇ ಭೋಜಯೇನ್ಮಿತ್ರಂ ಧನೈಃ ಕಾರ್ಯೋಽಸ್ಯ ಸಂಗ್ರಹಃ ।
ಪೈಶಾಚೀ ದಕ್ಷಿಣಾಶಾ ಹಿ ನೇಹಾಮುತ್ರಫಲಪ್ರದಾ ॥ ೨೧ ॥

ಕಾಮಂ ಶ್ರಾದ್ಧೇಽರ್ಚಯೇನ್ಮಿತ್ರಂ ನಾಭಿರೂಪಮಪಿ ತ್ವರಿಮ್ ।
ದ್ವಿಷತಾ ಹಿ ಹವಿರ್ಭುಕ್ತಂ ಭವತಿ ಪ್ರೇತ್ಯ ನಿಷ್ಫಲಮ್ ॥ ೨೨ ॥

---

೧೯. ಹವ್ಯ-ಕವ್ಯಗಳ ದಾನದಲ್ಲಿ ಯೋಗೀಂದ್ರರಿಗೆ ಅರ್ಪಿಸುವುದು ಮೊದಲನೆಯ ಉತ್ತಮ ಕಲ್ಪವಾಗಿದೆ. ಇತರ ದ್ವಿಜರನ್ನು ಕರೆಯುವುದು ದ್ವಿತೀಯ ಕಲ್ಪವಾಗಿ ಯಾವಾಗಲೂ ಶಿಷ್ಟರಿಂದ ಆಚರಿಸಲ್ಪಟ್ಟದೆ ಯೆಂದು ತಿಳಿಯಬೇಕು.

೨೦. ಮಾತಾಮಹ ಮಾತುಲ ಭಗಿನೀಪುತ್ರ ಶ್ವಶುರ ಗುರು ದೌಹಿತ್ರ ವಿಟ್ಪತಿ ಬಂಧು ಋತ್ವಿಜ ಅಥವಾ ಯಾಜನಾರ್ಹ-ಇವರನ್ನು ಶ್ರಾದ್ಧಭೋಜನಕ್ಕೆ ನಿಮಂತ್ರಿಸಬಾರದು.

೨೧. ಶ್ರಾದ್ಧದಲ್ಲಿ ಮಿತ್ರನನ್ನು ಭೋಜನ ಮಾಡಿಸಬಾರದು. ಇವನನ್ನು ಧನದ ಆಸೆಯಿಂದ ಸಂಗ್ರಹಿಸಬೇಕಾಗುವುದು. ಪಿಶಾಚದಂತಿರುವ ದಕ್ಷಿಣೆಯ ಆಶೆಯು ಇಹ-ಪರಲೋಕಗಳಲ್ಲಿ ಸೌಖ್ಯವನ್ನು ಕೊಡುವುದಿಲ್ಲ.

೨೨. ಶ್ರಾದ್ಧದಲ್ಲಿ ಮಿತ್ರನನ್ನಾದರೂ ಯಥೇಚ್ಛವಾಗಿ ನಿಮಂತ್ರಿಸಬಹುದು. ಆದರೆ ಯೋಗ್ಯನಾಗಿದ್ದರೂ ಶತ್ರುವನ್ನು ಮಾತ್ರ ನಿಮಂತ್ರಿಸಬಾರದು. ಶತ್ರುವಿನಿಂದ ಭುಂಜಿಸಲ್ಪಟ್ಟ ಹವಿಸ್ಸು ಮರಣಾನಂತರದಲ್ಲಿ ವ್ಯರ್ಥವಾಗುವುದು.

ಬ್ರಾಹ್ಮಣೋ ಹ್ಯನಧೀಯಾನಸ್ತೃಣಾಗ್ನಿರಿವ ಶಾಮ್ಯತಿ ।
ತಸ್ಮೈ ಹವ್ಯಂ ನ ದಾತವ್ಯಂ ನ ಹಿ ಭಸ್ಮನಿ ಹೂಯತೇ ॥ ೨೩ ॥

ಯಥೋಷರೇ ಬೀಜಮುಪ್ತ್ವಾ ನ ವಪ್ತಾ ಲಭತೇ ಫಲಮ್ ।
ತಥಾನೃಚೇ ಹವಿರ್ದತ್ವಾ ನ ದಾನಾಲ್ಲಭತೇ ಫಲಮ್ ॥ ೨೪ ॥

ಯಾವತೋ ಗ್ರಸತೇ ಪಿಂಡಾನ್ ಹವ್ಯಕವ್ಯೇಷ್ವಮಂತ್ರವಿತ್ ।
ತಾವತೋ ಗ್ರಸತೇ ಪ್ರೇತ್ಯ ದೀಪ್ತಾಂಸ್ಥೂಲಾಂಸ್ತ್ವಯೋಗುಡಾನ್ ॥

ಅಪಿ ವಿದ್ಯಾಕುಲೈರ್ಯುಕ್ತಾ ಹೀನವೃತ್ತಾ ನರಾಧಮಾಃ ।
ಯತ್ರೈತೇ ಭುಂಜತೇ ದಹ್ಯಂ ತದ್ಭವೇದಾಸುರಂ ದ್ವಿಜಾಃ ॥ ೨೬ ॥

---

೨೩. ವೇದಾಧ್ಯಯನವನ್ನು ಮಾಡದಿರುವ ಬ್ರಾಹ್ಮಣನು ಹುಲ್ಲಿನ ಬೆಂಕಿಯಂತೆ ತಾನಾಗಿ ನಿಸ್ತೇಜಸನಾಗುವನು. ಅಂತಹವನಿಗೆ ಹವಿಸ್ಸನ್ನು ಅರ್ಪಿಸಬಾರದು. ಭಸ್ಮದಲ್ಲಿ ಹೋಮಮಾಡುವುದು ಉಚಿತವಲ್ಲ.

೨೪. ಮರುಭೂಮಿಯಲ್ಲಿ ಬೀಜವನ್ನು ನೆಡುವುದರಿಂದ ಬೀಜ ನೆಟ್ಟವನು ಹೇಗೆ ಫಲ ಹೊಂದಲಾರನೋ, ಹಾಗೆ ಋಜ್ಮಂತ್ರಗಳನ್ನು ಕಲಿಯದಿರುವವನಲ್ಲಿ ಹವಿಸ್ಸನ್ನು ದಾನಮಾಡುವುದರಿಂದ ಹವಿರ್ದಾನದಿಂದಾಗುವ ಫಲವನ್ನು ಹೊಂದುವುದಿಲ್ಲ.

೨೫. ಮಂತ್ರಗಳನ್ನರಿಯದವನೂ ಹವ್ಯ-ಕವ್ಯಗಳಲ್ಲಿ ಎಷ್ಟು ಹವ್ಯ ಪಿಂಡಗಳನ್ನು ಭುಂಜಿಸುವನೋ, ಮರಣಾನಂತರದಲ್ಲಿ ಅಷ್ಟು ಸಂಖ್ಯೆಯ ಉರಿಯುತ್ತಿರುವ ದಪ್ಪವಾದ ಉಕ್ಕಿನ ಗುಂಡುಗಳನ್ನು ನುಂಗುವನು.

೨೬. ದ್ವಿಜರೇ ! ಆದರೆ ವಿದ್ಯೆ ಸತ್ಕುಲಗಳಿಂದ ಕೂಡಿದ್ದರೂ ಆಚಾರಹೀನರಾದ ನರಾಧಮರು ಯಾವ ಕರ್ಮದಲ್ಲಿ ಹವ್ಯವನ್ನು ಭುಂಜಿಸುವರೋ, ಆ ಕರ್ಮವು ಅಸುರರ ಪಾಲಿಗೆ ಸೇರುವುದು.

ಯಸ್ಯ ವೇದಶ್ಚ ವೇದೀ ಚ ವಿಚ್ಛಿದ್ಯೇತೇ ತ್ರಿಪೂರುಷಮ್ ।
ಸ ವೈ ದುರ್ಬ್ರಾಹ್ಮಣೋ ನಾರ್ಹಃ ಶ್ರಾದ್ಧಾದಿಷು ಕದಾಚನ ॥ ೨೭ ॥

ಶೂದ್ರಪ್ರೇಷ್ಯೋ ಭೃತೋ ರಾಜ್ಞೋ ವೃಷಲಾನಾಂ ಚ ಯಾಜಕಃ ।
ವಧಬಂಧೋಪಜೀವೀ ಚ ಷಡೇತೇ ಬ್ರಹ್ಮಬಂಧವಃ ॥ ೨೮ ॥

ದತ್ತ್ವಾನುಯೋಗೋ ದ್ರವ್ಯಾರ್ಥಂ ಪತಿತಾನ್ ಮನುರಬ್ರವೀತ್ ।
ವೇದವಿಕ್ರಯಿಣೋ ಹ್ಯೇತೇ ಶ್ರಾದ್ಧಾದಿಷು ವಿಗರ್ಹಿತಾಃ ॥ ೨೯ ॥

ಸುತವಿಕ್ರಯಿಣೋ ಯೇ ತು ಪರಪೂರ್ವಾಸಮುದ್ಭವಾಃ ।
ಅಸಾಮಾನ್ಯಾನ್ ಯಜಂತೇ ಯೇ ಪತಿತಾಸ್ತೇ ಪ್ರಕೀರ್ತಿತಾಃ ॥೩೦॥

---

೨೭. ಯಾವ ಮಾನವನ ವಂಶದಲ್ಲಿ ವೇದ ಮತ್ತು ವೇದವನ್ನು ಕಲಿತವರು ತ್ರಿಪುರುಷರಲ್ಲಿ ವಿಚ್ಛೇದ ಹೊಂದುವರೋ, ಅಂತಹ ಮಾನವನು ದುರ್ಬ್ರಾಹ್ಮಣನೆನಿಸಿಕೊಂಡು ಶ್ರಾದ್ಧ ಮುಂತಾದುವುಗಳಿಗೆ ಯಾವಾಗಲೂ ಅರ್ಹನಲ್ಲ.

೨೮. ಶೂದ್ರನಿಗೆ ಭೃತ್ಯನೂ ಸೇವಕನೂ ರಾಜನಿಗೂ ಶೂದ್ರರಿಗೂ ಯಾಗ ಮಾಡಿಸುವವನೂ ವಧ-ಬಂಧಗಳಿಂದ ಉಪಜೀವಿಸುವವನೂ ಈ ಆರು ಮಂದಿಯೂ ಬ್ರಹ್ಮಬಂಧು ಎನಿಸಿರುವರು.

೨೯. ಧನದ ಆಸೆಗೋಸ್ಕರ ಬ್ರಹ್ಮಬಂಧುಗಳಿಗೆ ಕೊಡುವುದರಿಂದ ಮಾನವನು ಪತಿತನಾಗುವನೆಂದು ಮನುವು ಹೇಳಿರುವನು. ವೇದವಿಕ್ರಯವನ್ನು ಮಾಡಿದ ಇವರು ಶ್ರಾದ್ಧಾದಿ ಕರ್ಮಗಳಲ್ಲಿ ನಿಂದ್ಯರಾಗಿರುವರು.

೩೦. ಪುತ್ರರನ್ನು ವಿಕ್ರಯಿಸಿದವರೂ ವಿಲೋಮ ಜಾತಿಯಲ್ಲಿ ಹುಟ್ಟಿದವರೂ ಅಸಾಮಾನ್ಯವಾಗಿ ಯಾಗಮಾಡುವವರೂ ಆದ ಮಾನವರು ಪತಿತರೆಂದು ಕೀರ್ತಿಸಲ್ಪಟ್ಟಿರುವರು.

ಅಸಂಸ್ಕೃತಾಧ್ಯಾಪಕಾ ಯೇ ಭೃತ್ಯರ್ಥೇಽಧ್ಯಾಪಯಂತಿ ಯೇ ।
ಅಧೀಯತೇ ತಥಾ ವೇದಾನ್ ಪತಿತಾಸ್ತೇ ಪ್ರಕೀರ್ತಿತಾಃ ॥ ೩೧ ॥

ವೃದ್ಧಶ್ರಾವಕನಿರ್ಗ್ರಂಥಾಃ ಪಂಚರಾತ್ರವಿದೋ ಜನಾಃ ।
ಕಾಪಾಲಿಕಾಃ ಪಾಶುಪತಾಃ ಪಾಷಂಡಾ ಯೇ ಚ ತದ್ವಿಧಾಃ ॥ ೩೨ ॥

ಯಸ್ಯಾಶ್ನಂತಿ ಹವೀಂಷ್ಯೇತೇ ದುರಾತ್ಮಾನಸ್ತು ತಾಮಸಾಃ ।
ನ ತಸ್ಯ ತದ್ಭವೇಚ್ಛ್ರಾದ್ಧಂ ಪ್ರೇತ್ಯ ಚೇಹ ಫಲಪ್ರದಮ್ ॥ ೩೩ ॥

ಅನಾಶ್ರಮೀ ದ್ವಿಜೋಽಯಃ ಸ್ಯಾದಾಶ್ರಮೀ ವಾ ನಿರರ್ಥಕಃ ।
ಮಿಥ್ಯಾಶ್ರಮೀ ಚ ತೇ ವಿಪ್ರಾ ವಿಜ್ಞೇಯಾಃ ಪಂಕ್ತಿದೂಷಕಾಃ ॥ ೩೪ ॥

---

೩೧. ಹಾಗು ಸಂಸ್ಕಾರಹೀನರಿಗೆ ಅಧ್ಯಯನಮಾಡಿಸಿದವರೂ ಜೀವಿಕೆಗೋಸ್ಕರ ಅಧ್ಯಯನಮಾಡಿಸುವವರೂ ಮತ್ತು ಜೀವನದ ಆಸೆಯಿಂದ ವೇದವನ್ನು ಅಧ್ಯಯನಮಾಡಿದವರೂ ಪತಿತರೆಂದು ಕೀರ್ತಿಸಲ್ಪಟ್ಟಿರುವರು.

೩೨. ವೃದ್ಧರೂ ಶ್ರಾವಕರೂ ಬೌದ್ಧರೂ ಪಾಂಚರಾತ್ರ ಆಗಮಜ್ಞರೂ ಕಾಪಾಲಿಕರೂ ಪಾಶುಪತರೂ ಪಾಖಂಡಿಗಳೂ ಮತ್ತು ಇಂತಹವರಿಗೆ ಸಮಾನರಾದವರೂ ಶ್ರಾದ್ಧ ನಿಮಂತ್ರಣಕ್ಕೆ ಅರ್ಹರಲ್ಲ.

೩೩. ತಮೋಗುಣ ಪೂರ್ಣರಾದ ಈ ದುರಾತ್ಮರು ಯಾರ ಹವಿಸ್ಸುಗಳನ್ನು ಭುಂಜಿಸುವರೋ ಅವರ ಆ ಶ್ರಾದ್ಧದಾನವು ಮರಣಾನಂತರದಲ್ಲಿ ಉತ್ತಮ ಫಲದಾಯಕವು ಆಗುವುದಿಲ್ಲ.

೩೪. ಯಾವ ದ್ವಿಜನು ಆಶ್ರಮವರ್ಜಿತನಾಗಿರುವನೋ, ಹಾಗೂ ನಿರರ್ಥಕವಾಗಿ ಆಶ್ರಮವನ್ನು ಸ್ವೀಕರಿಸುವನೋ ಅಥವಾ ಕಪಟವಾ [illegible] ವನೋ, ಅಂತಹ ವಿಪ್ರರು ಪಂಕ್ತಿದೂಷಕರೆಂದು ತಿಳಿಯಬೇಕು.

ದುಶ್ಚರ್ಮಾ ಕುನಖೀ ಕುಷ್ಠೀ ಶ್ವಿತ್ರೀ ಚ ಶ್ಯಾವದಂತಕಃ ।
ವಿದ್ಧಪ್ರಜನನಶ್ಚೈವ ಸ್ತೇನಃ ಕ್ಲೀಬೋಽಥ ನಾಸ್ತಿಕಃ ॥ ೩೫ ॥

ಮದ್ಯಪಾ ವೃಷಲೀಸಕ್ತೋ ವೀರಹಾ ದಿಧಿಷೂಪತಿಃ ।
ಅಗಾರದಾಹೀ ಕುಂಡಾಶೀ ಸೋಮವಿಕ್ರಯಿಣೋ ದ್ವಿಜಾಃ ॥ ೩೬ ॥

ಪರಿವೇತ್ತಾ ಚ ಹಿಂಸ್ರಶ್ಚ ಪರಿವಿತ್ತಿರ್ನಿರಾಕೃತಿಃ ।
ಪೌನರ್ಭವಃ ಕುಸೀದಶ್ಚ ತಥಾ ನಕ್ಷತ್ರದರ್ಶಕಃ ॥ ೩೭ ॥

ಗೀತವಾದಿತ್ರಶೀಲಶ್ಚ ವ್ಯಾಧಿತಃ ಕಾಣ ಏವ ಚ ।
ಹೀನಾಂಗಶ್ಚಾತಿರಿಕ್ತಾಂಗೋ ಹ್ಯವಕೀರ್ಣೀ ತಥೈವ ಚ ॥ ೩೮ ॥

---

೩೫. ಚರ್ಮ ರೋಗವುಳ್ಳವನೂ, ನಖರೋಗವುಳ್ಳವನೂ, ಕುಷ್ಠಿಯೂ, ಶ್ವಿತ್ರಿಯೂ. ಶ್ಯಾವದಂತನೂ, ಜನನೇಂದ್ರಿಯ ಶೂನ್ಯನೂ, ಚೋರನೂ, ಷಂಢನೂ ಮತ್ತು ನಾಸ್ತಿಕನೂ ಕೂಡ ಪಂಕ್ತಿದೂಷಕರೆಂದು ತಿಳಿಯಬೇಕು.

೩೬. ಮದ್ಯಪಾಯಿಯೂ, ಶೂದ್ರ ಸ್ತ್ರೀಸಂಗಿಯೂ, ವೀರಹತ್ಯೆಮಾಡಿದವನೂ ಪುನರ್ವಿವಾಹಿತಳ ಪತಿಯೂ, ಗೃಹವನ್ನು ದಹಿಸಿದವನೂ, ಕುಂಡಾನ್ನವನ್ನು ಭುಂಜಿಸಿದವನೂ, ಸೋಮವಿಕ್ರಯಿಯೂ ಶ್ರಾದ್ಧದಲ್ಲಿ ಭೋಜನಕ್ಕೆ ಅರ್ಹರಲ್ಲ.

೩೭. ವಿವಾಹಿತನಾದ ಅವಿವಾಹಿತನ ಅನುಜನೂ ಹಿಂಸಕನೂ ಅವಿವಾಹಿತನಾದ ಅಗ್ರಜನೂ ವೇದಾಧ್ಯಯನ ಶೂನ್ಯನೂ ಪುನರ್ವಿವಾಹಿತಳ ಪುತ್ರನೂ ವೃದ್ಧಿ ದ್ರವ್ಯದಿಂದ ಜೀವಿಸುವವನೂ ಮತ್ತು ನಕ್ಷತ್ರಗಳನ್ನು ತೋರಿಸುವವನೂ ಶ್ರಾದ್ಧ ಭೋಜನಕ್ಕೆ ಅರ್ಹರಲ್ಲ.

೩೮. ಗೀತ-ವಾದ್ಯಗಳಲ್ಲಿ ಆಸಕ್ತಿಯುಳ್ಳವನೂ, ರೋಗಿಯೂ, ಕುರುಡನೂ, ಹೀನಾಂಗಿಯೂ, ಅಧಿಕಾಂಗಿಯೂ ಮತ್ತು ವ್ರತಭ್ರಷ್ಟನೂ ಶ್ರಾದ್ಧಭೋಜನಕ್ಕೆ ಅರ್ಹರಲ್ಲ.

ಅನ್ನದೂಷೀ ಕುಂಡಗೋಲಾವಭಿಶಸ್ತೋऽಥ ದೇವಲಃ ।
ಮಿತ್ರಧ್ರುಕ್ ಪಿಶುನಶ್ಚೈವ ನಿತ್ಯಂ ಭಾರ್ಯಾನುವರ್ತಿತಃ ॥ ೩೯ ॥

ಮಾತಾಪಿತ್ರೋರ್ಗುರೋಸ್ತ್ಯಾಗೀ ದಾರತ್ಯಾಗೀ ತಥೈವ ಚ ।
ಗೋತ್ರಸ್ಪೃಕ್ ಭ್ರಷ್ಟಶೌಚಶ್ಚ ಕಾಂಡಸ್ಪೃಷ್ಟಸ್ತಥೈವ ಚ ॥ ೪೦ ॥

ಅನಪತ್ಯಃ ಕೂಟಸಾಕ್ಷೀ ಯಾಚಕೋ ರಂಗಜೀವಕಃ ।
ಸಮುದ್ರಯಾಯೀ ಕೃತಹಾ ತಥಾ ಸಮಯಭೇದಕಃ ॥ ೪೧ ॥

ವೇದನಿಂದಾರತಶ್ಚೈವ ದೇವನಿಂದಾಪರಸ್ತಥಾ ।
ದ್ವಿಜನಿಂದಾರತಶ್ಚೈವ ವರ್ಜ್ಯಾಃ ಶ್ರಾದ್ಧಾದಿಕರ್ಮಣಿ ॥ ೪೨ ॥

---

೩೯. ಅನ್ನವನ್ನು ನಿಂದಿಸುವವನೂ, ಕುಂಡ ಗೋಳರೂ, ಅಪವಾದ ಗ್ರಸ್ತನೂ, ದೇವಲನೂ, ಮಿತ್ರ ದ್ರೋಹಿಯೂ ಚಾಡಿಗಾರನೂ, ಮತ್ತು ಯಾವಾಗಲೂ ಪತ್ನಿಯನ್ನು ಅನುವರ್ತಿಸುವವವನೂ ಶ್ರಾದ್ಧಭೋಜನಕ್ಕೆ ಅನರ್ಹರಾಗಿರುವರು.

೪೦. ಮಾತೆ-ಪಿತ-ಗುರುಗಳನ್ನು ತ್ಯಜಿಸಿದವನೂ ಪತ್ನಿಯನ್ನು ಬಿಟ್ಟವನೂ, ಕುಲಕಂಟಕನೂ, ಶೌಚಾಚಾರಭ್ರಷ್ಟನೂ ಮತ್ತು ಬಾಣಧಾರಿಯೂ ಶ್ರಾದ್ಧಭೋಜನಕ್ಕೆ ಅನರ್ಹರಾಗಿರುವರು.

೪೧. ಸಂತತಿ ರಹಿತನೂ, ಕೂಟಸಾಕ್ಷಿ ಹೇಳುವವನೂ, ಯಾಚಕನೂ, ರಂಗ ಶಿಲ್ಪದಿಂದ ಜೀವಿಸುವವನೂ, ಸಮುದ್ರಯಾನ ಮಾಡಿದವನೂ, ಕೃತಘ್ನನೂ ಮತ್ತು ಶಪಥವನ್ನು ಭೇದಿಸುವವನೂ ಶ್ರಾದ್ಧಕ್ಕೆ ಅರ್ಹನಲ್ಲ.

೪೨. ಮತ್ತು ವೇದಗಳನ್ನು ನಿಂದಿಸುವವನೂ, ದೇವತಾನಿಂದೆಯಲ್ಲಿ ತತ್ಪರನೂ, ಮತ್ತು ಬ್ರಾಹ್ಮಣನಿಂದೆಯಲ್ಲಿ ಆಸಕ್ತಿಯುಳ್ಳವನೂ, ಶ್ರಾದ್ಧಭೋಜನಕ್ಕೆ ಅನರ್ಹರಾಗಿರುವರು.

ಕೃತಘ್ನಃ ಪಿಶುನಃ ಕ್ರೂರೋ ನಾಸ್ತಿಕೋ ವೇದನಿಂಗಕಃ ।
ಮಿತ್ರಧ್ರುಕ್ ಕುಹಕಶ್ಚೈವ ವಿಶೇಷಾತ್ಪಂಕ್ತಿದೂಷಕಃ ॥ ೪೩ ॥

ಸರ್ವೇ ಪುನರಭೋಜ್ಯಾನ್ನಾ ನ ದಾನಾರ್ಹಾಃ ಸ್ವಕರ್ಮಸು ।
ಬ್ರಹ್ಮಹಾ ಚಾಭಿಶಸ್ತಾಶ್ಚ ವರ್ಜನೀಯಾಃ ಪ್ರಯತ್ನತಃ ॥ ೪೪ ॥

ಶೂದ್ರಾನ್ನರಸಪುಷ್ಟಾಂಗಃ ಸಂಧ್ಯೋಪಾಸನವರ್ಜಿತಃ ।
ಮಹಾಯಜ್ಞವಿಹೀನಶ್ಚ ಬ್ರಾಹ್ಮಣಃ ಪಂಕ್ತಿದೂಷಕಃ ॥ ೪೫ ॥

ಅಧೀತನಾಶನಶ್ಚೈವ ಸ್ನಾನದಾನವಿವರ್ಜಿತಃ ।
ತಾಮಸೋ ರಾಜಸಶ್ಚೈವ ಬ್ರಾಹ್ಮಣಃ ಪಂಕ್ತಿದೂಷಕಃ ॥ ೪೬ ॥

---

೪೩. ಕೃತಘ್ನನೂ, ಚಾಡಿಗಾರನೂ, ಕ್ರೂರನೂ, ನಾಸ್ತಿಕನೂ, ವೇದನಿಂದಾಪರನೂ, ಮಿತ್ರದ್ರೋಹಿಯೂ, ಮತ್ತು ವಂಚಕನೂ ಆದ ಬ್ರಾಹ್ಮಣನು ವಿಶೇಷವಾಗಿ ಪಂಕ್ತಿದೂಷಕನಾಗಿರುವನು.

೪೪. ಹಿಂದೆ ಹೇಳಿದ ದೋಷಿಗಳೆಲ್ಲರೂ ಭೋಜನಕ್ಕೂ, ಶ್ರಾದ್ಧಕ್ಕೂ, ದಾನಕ್ಕೂ ಮತ್ತು ಸ್ವಕರ್ಮಾಚರಣೆಯಲ್ಲಿಯೂ ಅರ್ಹರಲ್ಲ. ಹೀಗೆ ಬ್ರಹ್ಮಹತ್ಯೆಯನ್ನು ಮಾಡಿದವರು ಅಪವಾದಗ್ರಸ್ತರು ಯತ್ನದಿಂದ ವರ್ಜಿಸಲ್ಪಡಬೇಕು.

೪೫. ಮತ್ತು ಶೂದ್ರನ ಅನ್ನರಸದಿಂದ ಪುಷ್ಟನಾದವನೂ, ಸಂಧ್ಯಾವಂದನೆಯಿಂದ ಶೂನ್ಯನೂ. ಮಹಾಯಜ್ಞಗಳನ್ನು ಆಚರಿಸದವನೂ ಆದ ಬ್ರಾಹ್ಮಣನು ಪಂಕ್ತಿದೂಷಕನಾಗಿರುವನು.

೪೬. ಮತ್ತು ಅಧ್ಯಯನ ಮಾಡಿರುವುದನ್ನು ತ್ಯಜಿಸಿದವನೂ, ಸ್ನಾನ-ದಾನಗಳಿಂದ ವರ್ಜಿತನೂ, ತಮೋಗುಣ ರಜೋಗುಣಗಳಿಂದ ಪೂರ್ಣನೂ ಆದ ಬ್ರಾಹ್ಮಣನೂ ಪಂಕ್ತಿದೂಷಕನೆಂದು ತಿಳಿಯಬೇಕು.

ಬಹುನಾತ್ರ ಕಿಮುಕ್ತೇನ ವಿಹಿತಾನ್ ಯೇ ನ ಕುರ್ವತೇ ।
ನಿಂದಿತಾನಾಚರಂತ್ಯೇತೇ ವರ್ಜ್ಯಾಃ ಶ್ರಾದ್ಧೇ ಪ್ರಯತ್ನತಃ ॥ ೪೭ ॥

ಇತಿ ಶ್ರೀ ಕೂರ್ಮಪುರಾಣೇ ಚತುಃಸಪ್ತತಿತಮೋಽಧ್ಯಾಯಃ.

---

೪೭. ಈ ಅನರ್ಹರನ್ನು ಹೆಚ್ಚಾಗಿ ವರ್ಣಿಸಿ ಫಲವೇನು. ವಿಹಿತಕರ್ಮಗಳನ್ನು ಆಚರಿಸದವರೂ ಮತ್ತು ನಿಷಿದ್ಧಕರ್ಮಗಳನ್ನು ಆಚರಿಸಿದವರೂ ಆದ ದುಷ್ಟರು ಶ್ರಾದ್ಧದಲ್ಲಿ ವಿಶೇಷವಾಗಿ ವರ್ಜ್ಯರಾಗಿರುವರು.

ಕೂರ್ಮ ಪುರಾಣದಲ್ಲಿ ಎಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.

---

ಶ್ರೀಃ

# ಕೂರ್ಮಪುರಾಣಂ

---

## ಪಂಚಸಪ್ತತಿತಮೋಽಧ್ಯಾಯಃ.

ವ್ಯಾಸ ಉವಾಚ :—

ಗೋಮಯೇನೋದಕೈರ್ಭೂಮಿಂ ಶೋಧಯಿತ್ವಾ ಸಮಾಹಿತಃ ।
ಸನ್ನಿಮಂತ್ರ್ಯ ದ್ವಿಜಾನ್ ಸರ್ವಾನ್ ಸಾಧುಭಿಃ ಸನ್ನಿಮಂತ್ರಯೇತ್॥೧॥

ಶ್ವೋ ಭವಿಷ್ಯತಿ ಮೇ ಶ್ರಾದ್ಧಂ ಪೂರ್ವೇದ್ಯುರಭಿಪೂಜ್ಯ ಚ ।
ಅಸಂಭವೇ ಪರೇದ್ಯುರ್ವಾ ಯಥೋಕ್ತೈರ್ಲಕ್ಷಣೈರ್ಯುತಾನ್ ॥ ೨ ॥

---

## ಎಪ್ಪತ್ತೈದನೆಯ ಅಧ್ಯಾಯವು.

ವ್ಯಾಸಮುನಿಯು ಹೇಗೆಂದನು :—ಸಮಾಧಾನವುಳ್ಳಮಾನವನುಗೋಮಯ ದಿಂದಲೂ ಜಲದಿಂದಲೂ ಭೂಮಿಯನ್ನು ಶೋಧನೆಮಾಡಿ ಬ್ರಾಹ್ಮಣರನ್ನು ಕರೆತಂದು ಎಲ್ಲರನ್ನೂ ಸಾಧುವಾದ ವಚನಗಳಿಂದ ನಿಮಂತ್ರಿಸಬೇಕು.

೨. ಬ್ರಾಹ್ಮಣರನ್ನು ಕುರಿತು ನಾಳೆಯದಿನ ನಾನು ಮಾಡುವ ಶ್ರಾದ್ಧವು ಬರುವುದು ಎಂದು ಹೇಳಿ ಪೂರ್ವದಿನದಲ್ಲಿ ಅರ್ಚಿಸಬೇಕು. ಅಶಕ್ತಿಸಮಯದಲ್ಲಿ ಆ ದಿನವೇ ಹಿಂದೆ ಹೇಳಿದ ಲಕ್ಷಣಗಳಿಂದ ಕೂಡಿದ ಬ್ರಾಹ್ಮಣರನ್ನು ನಿಮಂತ್ರಿಸಬೇಕು.

ತಸ್ಯ ತೇ ಪಿತರಃ ಶ್ರುತ್ವಾ ಶ್ರಾದ್ಧಕಾಲಮುಪಸ್ಥಿತಮ್ ।
ಅನ್ಯೋನ್ಯಂ ಮನಸಾ ಧ್ಯಾತ್ವಾ ಸಂಪತಂತಿ ಮನೋಜವಾಃ ॥ ೩ ॥

ತೈರ್ಬ್ರಾಹ್ಮಣೈಃ ಸಹಾಶ್ನಂತಿ ಪಿತರೋ ಹ್ಯಂತರಿಕ್ಷಗಾಃ ।
ವಾಯುಭೂತಾಸ್ತು ತಿಷ್ಠಂತಿ ಭುಕ್ತ್ವಾ ಯಾಂತಿ ಪರಾಂ ಗತಿಮ್ ॥ ೪ ॥

ಆಮಂತ್ರಿತಾಶ್ಚ ತೇ ವಿಪ್ರಾಃ ಶ್ರಾದ್ಧಕಾಲ ಉಪಸ್ಥಿತೇ ।
ವಸೇಯುರ್ನಿಯತಾಃ ಸರ್ವೇ ಬ್ರಹ್ಮಚರ್ಯಪರಾಯಣಾಃ ॥ ೫ ॥

ಅಕ್ರೋಧನೋಽತ್ವರೋಽಮತ್ತಃ ಸತ್ಯವಾದೀ ಸಮಾಹಿತಃ ।
ಭಾರಂ ಮೈಥುನಮಧ್ವಾನಂ ಶ್ರಾದ್ಧಕೃದ್ವರ್ಜಯೇದ್ಧ್ರುವಮ್ ॥ ೬ ॥

---

೩. ಆಚಾರವಂತನ ಪಿತೃಗಳು ಶ್ರಾದ್ಧಸಮಯವು ಬಂದಿರುವುದನ್ನು ತಿಳಿದು ಅನ್ಯೋನ್ಯವಾಗಿ ಸೇರಿ ಮನಸ್ಸಿನಲ್ಲಿ ಧ್ಯಾನಮಾಡಿ ಮನಸ್ಸಿನಂತೆ ಹೆಚ್ಚಾದ ವೇಗದಿಂದ ಬಂದು ಸಿದ್ಧರಾಗುವರು.

೪. ಅಂತಹ ಬ್ರಾಹ್ಮಣರ ಮೂಲಕವಾಗಿ ಅಂತರಿಕ್ಷವಲ್ಲಿರುವ ಪಿತೃಗಳು ಕವ್ಯವನ್ನು ಭುಂಜಿಸುವರು. ಶ್ರಾದ್ಧಸಮಯದಲ್ಲಿ ವಾಯುರೂಪದಿಂದ ಪಿತೃಗಳು ಬಂದಿರುವರು. ಭೋಜನಾಂತರದಲ್ಲಿ ಉತ್ತಮವಾದ ಗತಿಯನ್ನು ಹೊಂದುವರು.

೫. ಶ್ರಾದ್ಧಕಾಲದ ಸಮೀಪ ಸಮಯದಲ್ಲಿ ಆಮಂತ್ರಿಸಲ್ಪಟ್ಟ ಬ್ರಾಹ್ಮಣರು ನಿಯಮವಂತರೂ ಬ್ರಹ್ಮಚರ್ಯದಲ್ಲಿ ಆಸಕ್ತರೂ ಆಗಿರಬೇಕು.

೬. ಮತ್ತು ಶ್ರಾದ್ಧವನ್ನು ಅನುಷ್ಠಾನಮಾಡುವವನೂ, ಕ್ರೋಧವಿಲ್ಲದವನೂ, ತ್ವರಾಹೀನನೂ, ಮದಲಿಲ್ಲದವನೂ, ಸತ್ಯವಾದಿಯೂ, ಸಮಾಧಾನಚಿತ್ತನೂ ಆಗಿರಬೇಕು ಮತ್ತು ಭಾರವಹನ, ಮೈಥುನ ದೂರಪ್ರಯಾಣಗಳನ್ನು ತಪ್ಪದೆ ಬಿಡಬೇಕು.

ಆಮಂತ್ರಿತೋ ಬ್ರಾಹ್ಮಣೋ ವೈ ಯೋऽನ್ಯಸ್ಮೈ ಕುರುತೇ ಕ್ಷಣಮ್ ।
ಸ ಯಾತಿ ನರಕಂ ಘೋರಂ ಸೂಕರತ್ವಂ ಪ್ರಯಾತಿ ಚ ॥ ೭ ॥

ಆಮಂತ್ರಯಿತ್ವಾ ಯೋ ಮೋಹಾದನ್ಯಂ ಚಾಮಂತ್ರಯೇದ್ದ್ವಿಜಃ ।
ಸ ತಸ್ಮಾದಧಿಕಃ ಪಾಪೀ ವಿಷ್ಠಾಕೀಟೋऽಭಿಜಾಯತೇ ॥ ೮ ॥

ಶ್ರಾದ್ಧೇ ನಿಮಂತ್ರಿತೋ ವಿಪ್ರೋ ಮೈಥುನಂ ಯೋऽಧಿಗಚ್ಛತಿ ।
ಬ್ರಹ್ಮಹತ್ಯಾಮವಾಪ್ನೋತಿ ತಿರ್ಯಗ್ಯೋನೌ ವಿಧೀಯತೇ ॥ ೯ ॥

ನಿಮಂತ್ರಿತಸ್ತು ಯೋ ವಿಪ್ರೋ ಹ್ಯಧ್ವಾನಂ ಯಾತಿ ದುರ್ಮತಿಃ
ಭವಂತಿ ಪಿತರಸ್ತಸ್ಯ ತನ್ಮಾಸಂ ಪಾಪಭೋಜನಾಃ । ॥ ೧೦ ॥

---

೭ ಆಮಂತ್ರಣಹೊಂದಿದ ಬ್ರಾಹ್ಮಣನು ಅದನ್ನು ಬಿಟ್ಟು ಮತ್ತೊಂದು ಕಡೆ ಕ್ಷಣವನ್ನು ಮಾಡುವುದಾದರೆ ಅವನು ಉಗ್ರವಾದ ನರಕವನ್ನು ಹೊಂದಿ ಅನಂತರದಲ್ಲಿ ವರಾಹ ಜನ್ಮವನ್ನು ಎತ್ತುತ್ತಾನೆ.

೮. ಯಾವ ದ್ವಿಜನು ಮೊದಲು ಬ್ರಾಹ್ಮಣನನ್ನು ಆಮಂತ್ರಿಸಿ ತರುವಾಯ ಅವನನ್ನು ಬಿಟ್ಟು ಮೋಹದಿಂದ ಮತ್ತೊಬ್ಬನನ್ನು ಆಮಂತ್ರಿಸುವನೋ, ಅವನು ಆ ಬ್ರಾಹ್ಮಣನಿಗಿಂತ ಹೆಚ್ಚಾದ ಪಾಪಿಯೂ ಮಲದಲ್ಲಿ ಹುಟ್ಟುವ ಕ್ರಿಮಿಯೂ ಆಗುವನು.

೯. ಶ್ರಾದ್ಧದಲ್ಲಿ ನಿಮಂತ್ರಿತನಾದ ಯಾವ ವಿಪ್ರನು ಮೈಥುನ ಕರ್ಮವನ್ನು ಆಚರಿಸುವನೋ, ಅವನು ಬ್ರಹ್ಮಹತ್ಯಾಪಾತಕವನ್ನು ಹೊಂದುವನು. ಮತ್ತು ತಿರ್ಯಗ್ ಯೋನಿಯಲ್ಲಿ ಜನ್ಮವನ್ನು ಹೊಂದುವನು.

೧೦. ಶ್ರಾದ್ಧದಲ್ಲಿ ನಿಮಂತ್ರಣವನ್ನು ಹೊಂದಿದ ಯಾವ ವಿಪ್ರನು ಅವಿವೇಕಿಯಾಗಿ ದಾರಿಯನ್ನು ನಡೆಯುವನೋ, ಅವನ ಪಿತೃಗಳು ಆ ಮಾಸವೆಲ್ಲಾ ಪಾಪ ಫಲವನ್ನು ಭುಂಜಿಸುವವರಾಗುತ್ತಾರೆ.

ನಿಮಂತ್ರಿತಸ್ತು ಯಃ ಶ್ರಾದ್ಧೇ ಕುರ್ಯಾದ್ವೈ ಕಲಹಂ ದ್ವಿಜಃ ।
ಭವಂತಿ ಪಿತರಸ್ತಸ್ಯ ತನ್ಮಾಸಂ ಮಲಭೋಜನಾಃ ॥ ೧೧ ॥

ತಸ್ಮಾನ್ನಿಮಂತ್ರಿತಃ ಶ್ರಾದ್ಧೇ ನಿಯತಾತ್ಮಾ ಭವೇದ್ದ್ವಿಜಃ ।
ಅಕ್ರೋಧನಃ ಶೌಚಪರಃ ಕರ್ತಾ ಚೈವ ಜಿತೇಂದ್ರಿಯಃ ॥ ೧೨ ॥

ಶ್ವೋಭೂತೇ ದಕ್ಷಿಣಾಂ ಗತ್ವಾ ದಿಶಂ ದರ್ಭಾನ್ ಸಮಾಹಿತಃ ।
ಸಮೂಲಾನಾಹರೇದ್ವಾರಿ ದಕ್ಷಿಣಾಗ್ರಾನ್ ಸುನಿರ್ಮಲಾನ್ ॥ ೧೩ ॥

ದಕ್ಷಿಣಾಪ್ರವಣಂ ಸ್ನಿಗ್ಧಂ ವಿಭಕ್ತಂ ಶುಭಲಕ್ಷಣಮ್ ।
ಶುಚಿಂ ದೇಶಂ ವಿವಿಕ್ತಂ ಚ ಗೋಮಯೇನೋಪಲೇಪಯೇತ್ ॥೧೪॥

---

೧೧. ಶ್ರಾದ್ಧದಲ್ಲಿ ನಿಮಂತ್ರಣವನ್ನು ಹೊಂದಿದ ಯಾವ ದ್ವಿಜನು ಕಲಹವನ್ನು ಮಾಡುವನೋ, ಅವನ ಪಿತೃಗಳು ಆ ಮಾಸವು ಪೂರ್ತಿಯಾಗಿ ಮಲವನ್ನು ಭುಂಜಿಸು ವವರಾಗುವರು.

೧೨. ಆದುದದರಿಂದ ಶ್ರಾದ್ಧದಲ್ಲಿ ನಿಮಂತ್ರಣೆಯನ್ನು ಹೊಂದಿದ ದ್ವಿಜನು ಮತ್ತು ಶ್ರಾದ್ಧಕರ್ತೃವು ವಶಪಡಿಸಲ್ಪಟ್ಟ ಮನಸ್ಸುಳ್ಳವನೂ ಕ್ರೋಧರಹಿತನೂ ಶೌಚವಿಧಿಯಲ್ಲಿ ಆಸಕ್ತನೂ ಮತ್ತು ಜಿತೇಂದ್ರಿಯನೂ ಆಗಿರಬೇಕು.

೧೩. ಶ್ರಾದ್ಧವು ನಾಳೆಯು ನಡೆಯುವುದಾದರೆ ಹಿಂದಿನ ದಿನದಲ್ಲಿ ಸಮಾಧಾನ ಚಿತ್ತದಿಂದ ದಕ್ಷಿಣದಿಕ್ಕಿಗೆ ಹೋಗಿ ಮೂಲಸಹಿತವೂ ನಿರ್ಮಲವೂ ಆದ ದರ್ಭೆಗಳನ್ನು ತಂದು ಬಾಗಿಲಿನಲ್ಲಿ ದಕ್ಷಿಣಾಗ್ರವಾಗಿ ಇರಿಸಬೇಕು.

೧೪. ದಕ್ಷಿಣದಿಕ್ಕಿನಲ್ಲಿ ಹಳ್ಳವಾಗಿರುವ ಸ್ನೇಹದಿಂದ ಕೂಡಿದ ಬೇರೆ ಸ್ಥಳ ಗಳಿಂದ ವಿಂಗಡಿಸಲ್ಪಟ್ಟ ಶುಭಕರವಾದ ಪವಿತ್ರವಾದ ಮತ್ತು ನಿರ್ಜನವಾದ ಪ್ರದೇಶವನ್ನು ಗೋಮಯದಿಂದ ಲೇಪಿಸಿ ಶುದ್ಧಮಾಡಬೇಕು.

ನದೀತೀರೇಷು ತೀರ್ಥೇಷು ಸ್ವಭೂಮೌ ಚೈವ ನಾಂಬುಷು ।
ವಿವಿಕ್ತೇಷು ಚ ತುಷ್ಯಂತಿ ದತ್ತೇನ ಪಿತರಃ ಸದಾ ॥ ೧೫ ॥

ಪಾರಕ್ಯೇ ಭೂಮಿಭಾಗೇ ತು ಪಿತೄಣಾಂ ನೈವ ನಿರ್ವಪೇತ್ ।
ಸ್ವಾಮಿಭಿಸ್ತದ್ವಿಹನ್ಯೇತ ಮೋಹಾದ್ಯತ್ಕ್ರಿಯತೇ ನರೈಃ ॥ ೧೬ ॥

ಅಟವ್ಯಃ ಪರ್ವತಾಃ ಪುಣ್ಯಾಸ್ತೀರ್ಥಾನ್ಯಾಯತನಾನಿ ಚ ।
ಸರ್ವಾಣ್ಯಸ್ವಾಮಿಕಾನ್ಯಾಹುರ್ನ ಹ್ಯೇತೇಷು ಪರಿಗ್ರಹಃ ॥ ೧೭ ॥

ತಿಲಾನ್ ಪ್ರವಿಕಿರೇತ್ತತ್ರ ಸರ್ವತೋ ಬಂಧಯೇದಜಾನ್ ।
ಅಸುರೋಪಹತಂ ಶ್ರಾದ್ಧಂ ತಿಲೈಃ ಶುದ್ಧ್ಯತ್ಯಜೇನ ತು ॥ ೧೮ ॥

---

೧೫. ನದೀತೀರಗಳಲ್ಲಿಯೂ ತೀರ್ಥಗಳಲ್ಲಿಯೂ ತನ್ನ ಭೂಮಿಯಲ್ಲಿಯೂ ಮತ್ತು ನಿರ್ಜನ ಪ್ರದೇಶದಲ್ಲಿಯೂ ಕೊಟ್ಟ ಶ್ರಾದ್ಧಾನ್ನದಾನದಿಂದ ಪಿತೃಗಳು ಯಾವಾಗಲೂ ತೃಪ್ತಿಹೊಂದುವರು. ಜಲದಲ್ಲಿ ಮಾತ್ರ ಶ್ರಾದ್ಧಾನ್ನದಾನವು ಪಿತೃಗಳಿಗೆ ತೃಪ್ತಿದಾಯಕವಲ್ಲ.

೧೬. ಪರರಿಗೆ ಸೇರಿದ ಭೂಮಿಪ್ರದೇಶದಲ್ಲಿ ಪಿತೃಗಳಿಗೆ ಪಿಂಡದಾನವನ್ನು ಮಾಡಬಾರದು. ಪರಕೀಯವಾದ ಸ್ಥಳದಲ್ಲಿ ಮೋಹದಿಂದ ಮಾನವರು ಮಾಡಿದ ಶ್ರಾದ್ಧವು ಆ ಸ್ಥಳದ ಸ್ವಾಮಿಗಳಿಂದ ವಿಘಾತಮಾಡಲ್ಪಡುವುದು.

೧೭. ಅರಣ್ಯ ಪುಣ್ಯಪರ್ವತ ತೀರ್ಥ ಮತ್ತು ದೇವಾಲಯ ಮುಂತಾದ ಸಮಸ್ತ ಸ್ಥಳಗಳನ್ನೂ ಅದರ ಮೇಲಿನ ಸ್ವತ್ವವನ್ನು ಹೊಂದಿದ ಸ್ವಾಮಿಯಿಂದ ರಹಿತವೆಂದು ಪ್ರಾಜ್ಞರು ಹೇಳುವರು. ಇವುಗಳಲ್ಲಿ ಸ್ವಾಮಿಯ ಪರಿಗ್ರಹವು ಇರುವುದಿಲ್ಲ.

೧೮. ಆ ಸ್ಥಳದಲ್ಲಿ ಎಲ್ಲ ಕಡೆಯಲ್ಲಿಯೂ ತಿಲಗಳನ್ನು ಚೆಲ್ಲಬೇಕು. ಮತ್ತು ಆಡನ್ನು ಕಟ್ಟಬೇಕು. ರಾಕ್ಷಸರಿಂದ ದುಷ್ಟವಾಗಿರುವ ಶ್ರಾದ್ಧವು ತಿಲಗಳಿಂದಲೂ ಆಡಿನಿಂದಲೂ ಶುದ್ಧಿಹೊಂದುವುದು.

ತತೋನ್ನಂ ಬಹುಸಂಸ್ಕಾರಂ ನೈಕವ್ಯಂಜನಮಧ್ಯಗಮ್ ।
ಚೋಷ್ಯಂ ಪೇಯಂ ಸಂಸ್ಕೃತಂ ಚ ಯಥಾಶಕ್ತಿ ಪ್ರಕಲ್ಪಯೇತ್ ॥

ತತೋ ನಿವೃತ್ತೇ ಮಧ್ಯಾಹ್ನೇ ಲುಪ್ತರೋಮನಖಾನ್ ದ್ವಿಜಾನ್ ।
ಅವಗಮ್ಯ ಯಥಾಮಾರ್ಗಂ ಪ್ರಯಚ್ಛೇದ್ದಂತಧಾವನಮ್ ॥ ೨೦ ॥

ಆಸಧ್ವಮಿತಿ ಸಂಜಲ್ಪನ್ನಾಸೀರನ್ ತೇ ಪೃಥಕ್ ಪೃಥಕ್ ।
ತೈಲಮಭ್ಯಂಜನಂ ಸ್ನಾನಂ ಸ್ನಾನೀಯಂ ಚ ಪೃಥಗ್ವಿಧಮ್ ।
ಪಾತ್ರೈರೌದುಂಬರೈರ್ದದ್ಯಾದ್ವೈಶ್ವದೇವತ್ಯಪೂರ್ವಕಮ್ ॥ ೨೧ ॥

ತತಃ ಸ್ನಾನಾನ್ನಿವೃತ್ತೇಭ್ಯಃ ಪ್ರತ್ಯುತ್ಥಾಯ ಕೃತಾಂಜಲಿಃ ।
ಪಾದ್ಯಮಾಚಮನೀಯಂ ಚ ಸಂಪ್ರಯಚ್ಛೇದ್ಯಥಾಕ್ರಮಮ್ ॥ ೨೨ ॥

---

೧೯. ತರುವಾಯ ಅನೇಕ ಸಂಸ್ಕಾರಗಳಿಂದ ಕೂಡಿರುವುದೂ ಅನೇಕ ವ್ಯಂಜನಗಳಿಂದ ಸಹಿತವೂ ಚೋಷ್ಯ-ಪೇಯಗಳಿಂದ ಸಮೃದ್ಧಿ ಹೊಂದಿರುವುದೂ ಆದ ಅನ್ನವನ್ನು ಯಥಾಶಕ್ತಿಯಾಗಿ ಸಿದ್ಧಮಾಡಬೇಕು.

೨೦. ತರುವಾಯ ಮಧ್ಯಾಹ್ನಕಾಲವು ಕಳೆಯಲಾಗಿ ರೋಮ-ನಖಗಳನ್ನು ತೆಗೆದಿರುವ ದ್ವಿಜರನ್ನು ಅವರ ಮಾರ್ಗಾನುಸಾರವಾಗಿ ಹೊಂದಿ ಅವರಿಗೆ ದಂತಧಾವನವನ್ನು ಕೊಡಬೇಕು.

೨೧. ಯಜಮಾನನು ಕೂತುಕೊಳ್ಳಿ, ಎಂದು ಹೇಳಿದ ಮೇಲೆ ದ್ವಿಜರು ಪ್ರತ್ಯೇಕವಾಗಿ ಕೂತುಕೊಳ್ಳಬೇಕು. ತರುವಾಯ ಉದುಂಬರ ಪಾತ್ರಗಳಿಂದ ವಿಶ್ವೇದೇವ ದ್ವಿಜನಿಗೆ ಪ್ರಾರಂಭಿಸಿ ತೈಲ ಅಭ್ಯಂಜನಸ್ನಾನ ಸ್ನಾನೀಯ ಸಾಮಗ್ರಿಗಳನ್ನು ಬೇರೆಬೇರೆ ವಿಧವಾಗಿ ಅರ್ಪಿಸಬೇಕು.

೨೨. ತರುವಾಯ ಸ್ನಾನಮಾಡಿ ಹಿಂತಿರುಗಿ ಬಂದವರನ್ನು ಅಂಜಲಿಬದ್ಧನಾಗಿ ಎದುರುಗೊಂಡು ಕ್ರಮವಾಗಿ ಪಾದ್ಯ ಆಚಮನೀಯ ಮುಂತಾದುವುಗಳನ್ನು ಅರ್ಪಿಸಬೇಕು.

ಯೇ ಚಾತ್ರ ವಿಶ್ವದೇವಾನಾಂ ದ್ವಿಜಾಃ ಪೂರ್ವಂ ನಿಮಂತ್ರಿತಾಃ ।
ಪ್ರಾಙ್ಮುಖಾನ್ಯಾಸನಾನ್ಯೇಷಾಂ ತ್ರಿದರ್ಭೋಪಹತಾನಿ ಚ ॥ ೨೩ ॥

ದಕ್ಷಿಣಾಮುಖಮುಕ್ತಾನಿ ಪಿತ್ರ್ಯಾಣಾಮಾಸನಾನಿ ಚ ।
ದಕ್ಷಿಣಾಗ್ರೇಷು ದರ್ಭೇಷು ಪ್ರೋಕ್ಷಿತಾನಿ ತಿಲೋದಕೈಃ ॥ ೨೪ ॥

ತೇಷೂಪವೇಶಯೇದೇತಾನಾಸನಂ ಸಂಸ್ಪೃಶನ್ನಪಿ ।
ಆಸಧ್ವಮಿತಿ ಸಂಜಲ್ಪನ್ನಾಸೀರಂಸ್ತೇ ಪೃಥಕ್ ಪೃಥಕ್ ॥ ೨೫ ॥

ದ್ವೌ ದೈವೇ ಪ್ರಾಙ್ಮುಖೌ ಪಿತ್ರ್ಯೇ ತ್ರಯಶ್ಚೋದಙ್ಮುಖಾಸ್ತಥಾ ।
ಏಕೈಕಂ ತತ್ರ ದೈವಂ ತು ಪಿತೃಮಾತಾಮಹೇಷ್ವಪಿ ॥ ೨೬ ॥

---

೨೩. ವಿಶ್ವೇದೇವರ ಸ್ಥಾನದಲ್ಲಿ ಯಾವ ದ್ವಿಜರು ಪೂರ್ವದಲ್ಲಿ ನಿಮಂತ್ರಿಸಲ್ಪಟ್ಟಿದ್ದರೋ, ಆ ದ್ವಿಜರಿಗೆ ಮೂರು ದರ್ಭೆಗಳಿಂದ ಕೂಡಿದ ಪೂರ್ವಾಭಿಮುಖವಾದ ಆಸನಗಳನ್ನು ಕಲ್ಪಿಸಬೇಕು.

೨೪. ಪಿತೃಸ್ಥಾನದ ದ್ವಿಜರಿಗೆ ತಿಲೋದಕಗಳಿಂದ ಪ್ರೋಕ್ಷಿಸಲ್ಪಟ್ಟ ದಕ್ಷಿಣಾಗ್ರವಾದ ದರ್ಭೆಗಳಲ್ಲಿ ಇರಿಸಿದ ದಕ್ಷಿಣದಿಕ್ಕಿಗೆ ಅಭಿಮುಖವಾದ ಆಸನಗಳು ಸ್ಮರಿಸಲ್ಪಟ್ಟಿವೆ.

೨೫. ಹಾಗೆ ಸಿದ್ಧವಾದ ಆಸನಗಳಲ್ಲಿ ಆ ದ್ವಿಜರನ್ನು ಕುರಿತು ಕುಳಿತುಕೊಳಿ ಎಂದು ಹೇಳಿ ಆಸನಗಳನ್ನು ನಿರ್ದೇಶಿಸುತ್ತಾ ದ್ವಿಜರನ್ನು ಕುಳ್ಳಿರಿಸಬೇಕು. ಆ ದ್ವಿಜರು ಬೇರೆ ಬೇರೆ ಆಸನಗಳಲ್ಲಿ ಕುಳಿತುಕೊಳ್ಳಬೇಕು.

೨೬. ದೇವಸ್ಥಾನದಲ್ಲಿ ಪೂರ್ವಾಭಿಮುಖರಾಗಿ ಇಬ್ಬರು ದ್ವಿಜರು ಪಿತೃಸ್ಥಾನದಲ್ಲಿ ಉತ್ತರಾಭಿಮುಖರಾಗಿ ಮೂರುಮಂದಿ ದ್ವಿಜರು ಕುಳಿತುಕೊಳ್ಳಬೇಕು. ಅಥವಾ ದೈವಪಿತೃಮಾತಾಮಹಾದಿಸ್ಥಾನಗಳಲ್ಲಿ ಒಬ್ಬೊಬ್ಬದ್ವಿಜನನ್ನು ಕುಳ್ಳಿರಿಸಬೇಕು.

ಸತ್ಕ್ರಿಯಾಂ ದೇಶಕಾಲೌ ಚ ಶೌಚಂ ಬ್ರಾಹ್ಮಣಸಂಪದಮ್ ।
ಪಂಚೈತಾನ್ ವಿಸ್ತರೋ ಹಂತಿ ತಸ್ಮಾನ್ನೇಹೇತ ವಿಸ್ತರಮ್ ॥ ೨೭ ॥

ಅಪಿ ವಾ ಭೋಜಯೇದೇಕಂ ಬ್ರಾಹ್ಮಣಂ ವೇದಪಾರಗಮ್ ।
ಶ್ರುತಶೀಲಾದಿಸಂಪನ್ನಮಲಕ್ಷಣವರ್ಜಿತಮ್ ॥ ೨೮ ॥

ಉದ್ಧೃತ್ಯ ಪಾತ್ರೇ ಚಾನ್ನಂ ತತ್ ಸರ್ವಸ್ಮಾತ್ಪ್ರಕೃತಾತ್ತತಃ ।
ದೇವತಾಯತನೇ ವಾಸೌ ನಿವೇದ್ಯಾನ್ಯತ್ಪ್ರವರ್ತಯೇತ್ ॥ ೨೯ ॥

ಪ್ರಾಶ್ಯೇದನ್ನಂ ತದಗ್ನೌ ತು ದದ್ಯಾದ್ವಾ ಬ್ರಹ್ಮಚಾರಿಣೇ ।
ತಸ್ಮಾದೇಕಮಪಿ ಶ್ರೇಷ್ಠಂ ವಿದ್ವಾಂಸಂ ಭೋಜಯೇದ್ದ್ವಿಜಮ್ ॥ ೩೦ ॥

---

೨೭. ಶ್ರಾದ್ಧಕ್ರಿಯೆಯಲಿ ಮಾಡುವ ಆಡಂಬರವು ಸತ್ಕಾರ ದೇಶ ಕಾಲ ಶೌಚ ಮತ್ತು ಬ್ರಾಹ್ಮಣ ಸಂಪತ್ತಿ ಈ ಐದು ಸಮೃದ್ಧಿಗಳನ್ನೂ ನಾಶಮಾಡುತ್ತದೆ. ಆದ್ದರಿಂದ ಹೆಚ್ಚಿನ ಆಡಂಬರವನ್ನು ಅಪೇಕ್ಷಿಸಬಾರದು.

೨೮. ಅಥವಾ ವೇದಪಾರಂಗತನೂ ಶಾಸ್ತ್ರಾಧ್ಯಯನ ಸದಾಚಾರಾದಿಗಳಿಂದ ಸಂಪನ್ನನೂ ಮತ್ತು ದುಷ್ಟ ಲಕ್ಷಣಗಳಿಂದ ವರ್ಜಿತನೂ ಆದ ಒಬ್ಬ ಬ್ರಾಹ್ಮಣನನ್ನಾದರೂ ಭೋಜನ ಮಾಡಿಸಬೇಕು.

೨೯. ಶ್ರಾದ್ಧೀಯವಾದ ಎಲ್ಲಾ ಅನ್ನದಿಂದ ಒಂದು ಪ್ರತ್ಯೇಕವಾದ ಪಾತ್ರೆಯಲ್ಲಿ ಸ್ವಲ್ಪ ಅನ್ನವನ್ನು ಬೇರೆ ತೆಗೆದು ದೇವಾಲಯದಲ್ಲಿ ದೇವತೆಗೆ ನಿವೇದನಮಾಡಿ ಬೇರೆ ಅನ್ನವನ್ನು ಉಪಯೋಗಿಸಬಹುದು.

೩೦. ಮತ್ತು ಆ ಅನ್ನವನ್ನು ಅಗ್ನಿಯಲ್ಲಿ ಹೋಮಮಾಡಬಹುದು. ಅಥವಾ ಬ್ರಹ್ಮಚಾರಿಗೆ ಆ ಅನ್ನವನ್ನು ದಾನಮಾಡಬಹುದು. ಆದ್ದರಿಂದ ಒಬ್ಬನಾದರೂ ಶ್ರೇಷ್ಠನೂ ವಿದ್ವಾಂಸನೂ ಆದ ದ್ವಿಜನಿಗೆ ಭೋಜನ ಮಾಡಿಸಬೇಕು.

ಭಿಕ್ಷುಕೋ ಬ್ರಹ್ಮಚಾರೀ ವಾ ಭೋಜನಾರ್ಥಮುಪಸ್ಥಿತಃ ।
ಉಪವಿಷ್ಟಸ್ತು ಯಃ ಶ್ರಾದ್ಧೇ ಕಾಮಂ ತಮಪಿ ಭೋಜಯೇತ್॥ ೩೧ ॥

ಅತಿಥಿರ್ಯಸ್ಯ ನಾಶ್ನಾತಿ ನ ತಚ್ಛ್ರಾದ್ಧಂ ಪ್ರಶಸ್ಯತೇ ।
ತಸ್ಮಾತ್ಪ್ರಯತ್ನಾಚ್ಛ್ರಾದ್ಧೇಷು ಪೂಜ್ಯಾ ಹ್ಯತಿಥಯೋ ದ್ವಿಜೈಃ ॥೩೨॥

ಆತಿಥ್ಯರಹಿತೇ ಶ್ರಾದ್ಧೇ ಭುಂಜತೇ ಯೇ ದ್ವಿಜಾತಯಃ ।
ಕಾಕಯೋನಿಂ ವ್ರಜಂತ್ಯೇತೇ ದಾತಾ ಚೈವ ನ ಸಂಶಯಃ ॥ ೩೩ ॥

ಹೀನಾಂಗಃ ಪತಿತಃ ಕುಷ್ಠೀ ವ್ರಣಯುಕ್ತಸ್ತು ನಾಸ್ತಿಕಃ ।
ಕುಕ್ಕುಟಃ ಸೂಕರಶ್ವಾನೌ ವರ್ಜ್ಯಾಃ ಶ್ರಾದ್ಧೇಷು ದೂರತಃ ॥ ೩೪ ॥

---

೩೧. ಭೋಜನಕ್ಕೋಸ್ಕರ ಬಂದಿರುವ ಭಿಕ್ಷುಕ ಅಥವಾ ಬ್ರಹ್ಮಚಾರಿಯು ಶ್ರಾದ್ಧದಲ್ಲಿ ಕುಳಿತುಕೊಳ್ಳುವನಾದರೆ ಯಥೇಚ್ಛವಾಗಿ ಅವನಿಗೂ ಶ್ರಾದ್ಧದಲ್ಲಿ ಭೋಜನ ಮಾಡಿಸಬೇಕು.

೩೨. ಯಾವ ಮಾನವನ ಶ್ರಾದ್ಧದಲ್ಲಿ ಅತಿಥಿಯು ಅನ್ನವನ್ನು ಭುಂಜಿಸುವುದಿಲ್ಲವೋ, ಆ ಶ್ರಾದ್ಧವು ಪ್ರಶಸ್ತವಾಗಲಾರದು. ಆದ್ದರಿಂದ ಶ್ರಾದ್ಧಗಳಲ್ಲಿ ದ್ವಿಜರಿಂದ ಅತಿಥಿಗಳು ಪ್ರಯತ್ನ ಪೂರ್ವಕವಾಗಿ ಸತ್ಕರಿಸಲ್ಪಡಬೇಕು.

೩೩. ಅತಿಥಿ ಸತ್ಕಾರದಿಂದ ರಹಿತವಾದ ಶ್ರಾದ್ಧಕರ್ಮದಲ್ಲಿ ಯಾವ ದ್ವಿಜರು ಭೋಜನಮಾಡುತ್ತಾರೋ, ಆ ದ್ವಿಜರು ಮತ್ತು ಅನ್ನದಾತನು ಕಾಕಯೋನಿಯಲ್ಲಿ ಹುಟ್ಟುತ್ತಾರೆ. ಇದರಲ್ಲಿ ಸಂಶಯವಿಲ್ಲ.

೩೪. ಊನಾಂಗಿ ಪತಿತ ಕುಷ್ಠರೋಗಿ ವ್ರಣದಿಂದ ಕೂಡಿದವನು ನಾಸ್ತಿಕ ಕೋಳಿ ಹಂದಿ ಮತ್ತು ನಾಯಿ ಇವುಗಳು ಶ್ರಾದ್ಧಗಳಲ್ಲಿ ಆ ಸ್ಥಳದಿಂದ ಬಹಳದೂರದಲ್ಲಿ ವರ್ಜಿಸಲ್ಪಡಬೇಕು.

ಬೀಭತ್ಸಮಶುಚಿಂ ನಗ್ನಂ ಮತ್ತಂ ಧೂರ್ತಂ ರಜಸ್ವಲಾಮ್ ।
ನಲಿಕಾಷಾಯವಸನಪಾಷಂಡಾಂಶ್ಚ ವಿವರ್ಜಯೇತ್ ॥ ೩೫ ॥

ಯತ್ತತ್ರ ಕ್ರಿಯತೇ ಕರ್ಮ ಪೈತೃಕೇ ಬ್ರಾಹ್ಮಣಾನ್ ಪ್ರತಿ ।
ತತ್ಸರ್ವಮೇವ ಕರ್ತವ್ಯಂ ವೈಶ್ವದೈವತ್ಯಪೂರ್ವಕಮ್ ॥ ೩೬ ॥

ಯಥೋಪವಿಷ್ಟಾನ್ ಸರ್ವಾಂಸ್ತಾನಲಂಕುರ್ಯಾದ್ವಿಭೂಷಣೈಃ ।
ಸ್ರಗ್ದಾಮಭಿಃ ಶಿರೋವೇಷ್ಟೈರ್ಧೂಪವಾಸೋಽನುಲೇಪನೈಃ ॥ ೩೭ ॥

ತತಸ್ತ್ವಾವಾಹಯೇದ್ದೇವಾನ್ ಬ್ರಾಹ್ಮಣಾನಾಮನುಜ್ಞಯಾ ।
ಉದಙ್ಮುಖೋ ಯಥಾನ್ಯಾಯಂ ವಿಶ್ವೇದೇವಾಸ ಇತ್ಯೃಚಾ ॥ ೩೮ ॥

---

೩೫. ಭಯಗ್ರಸ್ತ, ಅಶುಚಿ, ದಿಗಂಬರ ಮತ್ತು ಧೂರ್ತ ರಜಸ್ವಲೆ ಕಷಾಯ ವಸ್ತ್ರವನ್ನು ಧರಿಸಿದ ಪಾಖಂಡ ಮುಂತಾದ ನಿಷಿದ್ಧ ಜನರನ್ನು ಶ್ರಾದ್ಧಸ್ಥಳದಿಂದ ದೂರದಲ್ಲಿ ವರ್ಜಿಸಬೇಕು.

೩೬. ಶ್ರಾದ್ಧದಲ್ಲಿ ಪಿತೃಸ್ಥಾನದಲ್ಲಿರುವ ಬ್ರಾಹ್ಮಣನಲ್ಲಿ ಯಾವ ಕರ್ಮವು ಆಚರಿಸಲ್ಪಡುವುದೋ ಅದೆಲ್ಲವನ್ನೂ ವಿಶ್ವೇ ದೇವಸ್ಥಾನದ ಬ್ರಾಹ್ಮಣನಲ್ಲಿ ಆರಂಭಿಸಿ ಕ್ರಮವಾಗಿ ಮಾಡಬೇಕು.

೩೭. ಯಥಾವಿಧಿಯಾಗಿ ಕುಳಿತುಕೊಂಡಿರುವ ಆ ಸಮಸ್ತ ಬ್ರಾಹ್ಮಣರನ್ನೂ ಅಲಂಕಾರ ಪುಷ್ಪ, ಮಾಲ್ಯ ಶಿರೋವೇಷ್ಟನ ಧೂಪ ವಸ್ತ್ರ ಮತ್ತು ಅನುಲೇಪನ ಮುಂತಾದ ಉಪಚಾರಗಲಿಂದ ಅಲಂಕರಿಸಬೇಕು.

೩೮. ಆಮೇಲೆ ಬ್ರಾಹ್ಮಣರ ಅನುಜ್ಞೆಯಂತೆ ಉತ್ತರಾಭಿಮುಖನಾಗಿ ಕುಳಿತು ಕೊಂಡು ನ್ಯಾಯಸಮ್ಮತವಾಗಿ ವಿಶ್ವೇ ದೇವಾಸಃ ಎಂಬ ಋಜ್ ಮಂತ್ರದಿಂದ ದೇವತೆ ಗಳನ್ನು ಆವಾಹನ ಮಾಡಬೇಕು.

ದ್ವೇ ಪವಿತ್ರೇ ಗೃಹೀತ್ವಾಸ್ಯ ಭಾಜನೇ ಕ್ಷಾಲಿತೇ ಪುನಃ
ಶನ್ನೋ ದೇವೀ ಜಲಂ ಕ್ಷಿಪ್ತ್ವಾ ಯವೋಽಸೀತಿ ಯವಾಂಸ್ತಥಾ ॥೩೯॥

ಯಾ ದಿವ್ಯಾ ಇತಿ ಮಂತ್ರೇಣ ಹಸ್ತೇ ತ್ವರ್ಘ್ಯಂ ವಿನಿಕ್ಷಿಪೇತ್ ।
ಪ್ರದದ್ಯಾದ್ಗಂಧಮಾಲ್ಯಾನಿ ಧೂಪಾದೀನಿ ಚ ಶಕ್ತಿತಃ ॥ ೪೦ ॥

ಅಪಸವ್ಯಂ ತತಃ ಕೃತ್ವಾ ಪಿತೄಣಾಂ ದಕ್ಷಿಣಾಮುಖಃ ।
ಆವಾಹನಂ ತತಃ ಕುರ್ಯಾದುಶಂತಸ್ತ್ವೇತ್ಯೃಚಾ ಬುಧಃ ॥ ೪೧ ॥

ಆವಾಹ್ಯ ತದನುಜ್ಞಾತೋ ಜಪೇದಾಯಂತು ನಸ್ತತಃ ।
ಶನ್ನೋ ದೇವ್ಯೋದಕಂ ಪಾತ್ರೇ ತಿಲೋಽಸೀತಿ ತಿಲಾಂಸ್ತಥಾ ॥ ೪೨ ॥

---

೩೯. ತರುವಾಯ ತೊಳೆದ ಪಾತ್ರೆಯಲ್ಲಿ ಎರಡು ಪವಿತ್ರಗಳನ್ನು ತೆಗೆದು ಕೊಂಡು ಮತ್ತೆ ಶನ್ನೊ ದೇವೀ ಎಂಬ ಮಂತ್ರದಿಂದ ಜಲವನ್ನು ಹಾಕಿ ಯವೋಸಿ ಎಂಬ ಮಂತ್ರದಿಂದ ಯವಧಾನ್ಯವನ್ನು ಹಾಕಬೇಕು.

೪೦. ಅನಂತರದಲ್ಲಿ ಯಾ ದಿವ್ಯಾಃ ಎಂಬ ಮಂತ್ರದಿಂದ ದ್ವಿಜನ ಹಸ್ತದಲ್ಲಿ ಅರ್ಘ್ಯವನ್ನು ಕೊಡಬೇಕು. ಮತ್ತು ಗಂಧ ಮಾಲ್ಯ ಧೂಪ ಮುಂತಾದುವುಗಳನ್ನು ಶಕ್ತ್ಯನುಸಾರವಾಗಿ ಕೊಡಬೇಕು.

೪೧. ಆಮೇಲೆ ಜ್ಞಾನಿಯಾದ ಯಜಮಾನನು ಅಪಸವ್ಯವನ್ನು ಹಾಕಿ ಕೊಂಡು ದಕ್ಷಿಣ ದಿಕ್ಕಿಗೆ ಅಭಿಮುಖನಾಗಿ ಉಶಂತಸ್ತ್ವಾ ಎಂಬ ಮಂತ್ರದಿಂದ ಪಿತೃ ಗಳ ಆವಾಹನೆಯನ್ನು ಮಾಡಬೇಕು.

೪೨. ಹೀಗೆ ಪಿತೃಗಳನ್ನು ಆವಾಹನ ಮಾಡಿ ಅವರ ಅನುಜ್ಞೆಯನ್ನು ತೆಗೆದುಕೊಂಡು ಆಯಂತುನಃ ಎಂಬ ಮಂತ್ರವನ್ನು ಜಪಿಸಬೇಕು. ಹಾಗು ಪಿತೃ ಪಾತ್ರದಲ್ಲಿ ಶನ್ನೋದೇವೀ ಮಂತ್ರದಿಂದ ಜಲವನ್ನೂ ತಿಲೋಸಿ ಮಂತ್ರದಿಂದ ತಿಲಗ ಳನ್ನೂ ಹಾಕಬೇಕು.

ಕ್ಷಿಪ್ತ್ವಾ ಚಾರ್ಘ್ಯಂ ಯಥಾಪೂರ್ವಂ ದತ್ವಾ ಹಸ್ತೇಷು ವಾ ಪುನಃ ।
ಸಂಸ್ರವಾಂಶ್ಚ ತತಃ ಸರ್ವಾನ್ ಪಾತ್ರೇ ಕುರ್ಯಾತ್ ಸಮಾಹಿತಃ॥೪೩॥

ಪಿತೃಭ್ಯಃ ಸ್ಥಾನಮೇತಚ್ಚ ನ್ಯುಬ್ಜಪಾತ್ರಂ ನಿಧಾಪಯೇತ್ ।
ಅಗ್ನೌ ಕರಿಷ್ಯನ್ನಾದಾಯ ಪೃಚ್ಛೇದನ್ನಂ ಘೃತಪ್ಲುತಮ್
ಕುರುಷ್ವೇತ್ಯಭ್ಯನುಜ್ಞಾತೋ ಜುಹುಯಾದುಪವೀತವಾನ್ ॥ ೪೪ ॥

ಯಜ್ಞೋಪವೀತಿನಾ ಹೋಮಃ ಕರ್ತವ್ಯಃ ಕುಶಪಾಣಿನಾ ।
ಪ್ರಾಚೀನಾವೀತಿನಾ ಪಿತ್ರ್ಯಂ ವೈಶ್ವದೇವಂ ತು ಹೋಮವಿತ್ ॥ ೪೫ ॥

ದಕ್ಷಿಣಂ ಪಾತಯೇಜ್ಜಾನುಂ ದೇವಾನ್ ಪರಿಚರನ್ ಸದಾ ।
ಪಿತೄಣಾಂ ಪರಿಚರ್ಯಾಸು ಪಾತಯೇದಿತರಂ ತಥಾ ॥ ೪೬ ॥

---

೪೩. ಆಮೇಲೆ ಮೊದಲಿನಂತೆ ದ್ವಿಜಹಸ್ತದಲ್ಲಿ ಅರ್ಘ್ಯವನ್ನು ಕೊಟ್ಟು ಹಾಗೆ ಸಮಾಧಾನಚಿತ್ತನಾಗಿ ಸಮಸ್ತ ಸಂಸ್ರಾವ ಜಲವನ್ನು ಒಂದು ಪಾತ್ರದಲ್ಲಿ ಸೇರಿಸ ಬೇಕು.

೪೪. ಮತ್ತು ಇದು ಪಿತೃಗಳ ಸ್ಥಾನವೆಂದು ನಿರ್ದೇಶಿಸಿ ಅಧೋಮುಖವಾಗಿ ಪಾತ್ರವನ್ನು ಇರಿಸಬೇಕು. ಮತ್ತು ಘೃತದಿಂದ ಮಿಶ್ರಮಾಡಿದ ಅನ್ನವನ್ನು ತಂದು ಅಗ್ನೌಕರಣಮಾಡುವೆನೆಂದು ಹೇಳಿ ಮಾಡೆಂದು ದ್ವಿಜನಿಂದ ಸಂಮತಿಸಲ್ಪಟ್ಟ ವನಾಗಿ ಉಪವೀತಧಾರಿಯಾಗಿ ಅದನ್ನು ಹೋಮ ಮಾಡಬೇಕು.

೪೫ ದರ್ಭಪವಿತ್ರವನ್ನು ಹಸ್ತದಲ್ಲಿ ಧರಿಸಿದವನೂ ಯಜ್ಞೋಪವೀತ ಧಾರಿಯೂ ಆಗಿ ಹೋಮವನ್ನು ಮಾಡಬೇಕು. ಪಿತೃಕರ್ಮವನ್ನು ಪ್ರಾಚೀನಾವೀತ ವನ್ನು ಧರಿಸಿ ಮಾಡಬೇಕು. ವಿಶ್ವೇದೇವಾರ್ಥವಾದ ಕರ್ಮವು ಹೋಮದಂತೆ ಉಪ ವೀತದಿಂದ ಕರ್ತವ್ಯವು.

೪೬. ಯಾವಾಗಲೂ ದೇವತೆಗಳಿಗೆ ಸತ್ಕರಿಸುವವನು ಬಲಭಾಗದ ಮಂಡಿ ಯನ್ನು ನೆಲದಲ್ಲಿ ಊರಬೇಕು. ಪಿತೃಗಳ ಪೂಜೆಯಲ್ಲಿ ಎಡಭಾಗದ ಮಂಡಿಯನ್ನು ನೆಲದಲ್ಲಿ ಊರಬೇಕು.

ಸೋಮಾಯ ವೈ ಪಿತೃಮತೇ ಸ್ವಧಾ ನಮ ಇತಿ ಬ್ರುವನ್ ।
ಅಗ್ನಯೇ ಕವ್ಯವಾಹನಾಯ ಸ್ವಧೇತಿ ಜುಹುಯಾತ್ತತಃ ॥ ೪೭ ॥

ಅಗ್ನ್ಯಭಾವೇ ತು ವಿಪ್ರಸ್ಯ ಪಾಣಾವೇವೋಪಪಾದಯೇತ್ ।
ಮಹಾದೇವಾಂತಿಕೇ ವಾಥ ಗೋಷ್ಠೇ ವಾ ಸುಸಮಾಹಿತಃ ॥ ೪೮ ॥

ತತಸ್ತೈರಭ್ಯನುಜ್ಞಾತೋ ಗತ್ವಾ ವೈ ದಕ್ಷಿಣಾಂ ದಿಶಮ್ ।
ಗೋಮಯೇನೋಪಲಿಪ್ಯಾಥ ಸ್ಥಾನಂ ಕುರ್ಯಾತ್ ಸಸೈಕತಮ್॥೪೯॥

ಮಂಡಲಂ ಚತುರಸ್ರಂ ವಾ ದಕ್ಷಿಣಾಪ್ರವಣಂ ಶುಭಮ್ ।
ತ್ರಿರುಲ್ಲಿಖೇತ್ತಸ್ಯ ಮಧ್ಯಂ ದರ್ಭೇಣೈಕೇನ ಚೈವ ಹಿ ॥ ೫೦ ॥

---

೪೭. ಅಗ್ನೌಕರಣ ಹೋಮದಲ್ಲಿ ಸೋಮಾಯ ಪಿತೃಮತೇ ಸ್ವಧಾನಮಃ ಎಂಬ ಮಂತ್ರವನ್ನು ಪಠಿಸುತ್ತಾ ಒಂದು ಆಹುತಿಯನ್ನು ಹೋಮ ಮಾಡಿ ಆಮೇಲೆ ಅಗ್ನಯೇ ಕವ್ಯ ವಾಹನಾಯ ಸ್ವಧಾ ಎಂಬ ಮಂತ್ರದಿಂದ ಮತ್ತೊಂದು ಆಹುತಿಯನ್ನು ಹೋಮಮಾಡಬೇಕು.

೪೮. ಅಗ್ನಿಯು ಇಲ್ಲದಿದ್ದರೆ ವಿಪ್ರನು ದಕ್ಷಿಣ ಹಸ್ತದಲ್ಲಿ ಅಗ್ನೌಕರಣವನ್ನು ಮಾಡಬೇಕು. ಅಥವಾ ಮಹಾದೇವನ ಸಮೀಪದಲ್ಲಿಯಾಗಲೀ ಗೋಶಾಲೆಯಲ್ಲಾಗಲೀ ಸಮಾಧಾನದಿಂದ ಮಾಡಬೇಕು.

೪೯. ತರುವಾಯ ಆ ದ್ವಿಜರಿಂದ ಅನುಜ್ಞೆ ಹೊಂದಿದವನಾಗಿ ದಕ್ಷಿಣದಿಕ್ಕಿಗೆ ಹೋಗಿ ಗೋಮಯದಿಂದ ಲೇಪಿಸಿ ಮಳಲಿನಿಂದ ಕೂಡಿದ ಪವಿತ್ರಸ್ಥಾನವನ್ನು ಮಾಡಬೇಕು.

೫೦. ಆ ಸ್ಥಾನದಲ್ಲಿ ನಾಲ್ಕು ಮೂಲೆಯುಳ್ಳ ದಕ್ಷಿಣ ದಿಕ್ಕಿಗೆ ಹಳ್ಳವಾಗುತ್ತ ಬರುವ ಮತ್ತು ಮಂಗಳಕರವಾದ ಮಂಡಲವನ್ನು ಮಾಡಿ ಅದರ ಮಧ್ಯವನ್ನು ಒಂದು ದರ್ಭೆಯಿಂದ ಮೂರುಸಲ ಗೆರೆ ಎಳೆಯಬೇಕು.

ತತಃ ಸಂಸ್ತೀರ್ಯ ತತ್ಸ್ಥಾನೇ ದರ್ಭಾನ್ ವೈ ದಕ್ಷಿಣಾಗ್ರಗಾನ್ ।
ತ್ರೀನ್ ಪಿಂಡಾನ್ ನಿರ್ವಪೇತ್ತತ್ರ ಹವಿಃಶೇಷಾತ್ಸಮಾಹಿತಃ ॥ ೫೧ ॥

ಉಪ್ಯ ಪಿಂಡಾಂಸ್ತು ತದ್ಧಸ್ತಂ ನಿಮೃಜ್ಯಾಲ್ಲೇಪಭೋಜನಾನ್ ।
ತೇಷು ದರ್ಭೇಷ್ವಥಾಚಮ್ಯ ತ್ರಿರಾಚಮ್ಯ ಶನೈರಸೂನ್ ।
ತದನ್ನಂ ತು ನಮಸ್ಕುರ್ಯಾತ್ ಪಿತೄನೇವ ಚ ಮಂತ್ರವಿತ್ ೫೨ ॥

ಉದಕಂ ನಿನಯೇಚ್ಛೇಷಂ ಶನೈಃ ಪಿಂಡಾಂತಿಕೇ ಪುನಃ ।
ಅವಜಿಘ್ರೇಚ್ಚ ತಾನ್ ಪಿಂಡಾನ್ ಯಥಾನ್ಯುಪ್ತಾನ್ ಸಮಾಹಿತಃ ॥೫೩॥

ಅಥ ಪಿಂಡಾಚ್ಚ ಶಿಷ್ಟಾನ್ನಂ ವಿಧಿವದ್ಭೋಜಯೇದ್ದ್ವಿಜಾನ್ ।
ಮಾಂಸಾನ್ ಸೂಪಾಂಶ್ಚ ವಿವಿಧಾಂಛ್ರಾದ್ಧಕಲ್ಪಾಂಸ್ತು ಶೋಭನಾನ್ ॥

---

೫೧. ಆಮೇಲೆ ಆ ಸ್ಥಾನದಲ್ಲಿ ದಕ್ಷಿಣಾಗ್ರವಾಗಿ ದರ್ಭೆಗಳನ್ನು ಇರಿಸಿ ಆ ದರ್ಭೆಗಳಲ್ಲಿ ಉಳಿದಿರುವ ಹವಿಸ್ಸಿನಿಂದ ಸಮಾಧಾನಚಿತ್ತನಾಗಿ ಮೂರು ಪಿಂಡಗಳನ್ನು ಇರಿಸಬೇಕು.

೫೨ ಹೀಗೆ ಪಿಂಡಾವಾಪಮಾಡಿ ಆ ಹಸ್ತವನ್ನು ಲೇಪಭೋಜನರೆಂಬ ಪಿತೃಗಳನ್ನು ಉದ್ದೇಶಿಸಿ ಆ ದರ್ಭೆಗಳಲ್ಲಿ ಸ್ಪರ್ಶಿಸಬೇಕು. ಆಮೇಲೆ ಮೂರುಸಲ ಆಚಮನ ಮಾಡಿ ಮಂತ್ರಜ್ಞನಾದ ಯಜಮಾನನು ಮೆಲ್ಲಗೆ ತನ್ನ ಪ್ರಾಣಗಳನ್ನು ನಿಗ್ರಹಿಸಿ ಅನ್ನವನ್ನು ಮತ್ತು ಪಿತೃಗಳನ್ನು ನಮಸ್ಕಾರ ಮಾಡಬೇಕು.

೫೩. ತರುವಾಯ ಶೇಷೋದಕವನ್ನು ಮತ್ತೆ ಮೆಲ್ಲಗೆ ಪಿಂಡ ಸಮೀಪದಲ್ಲಿ ಚೆಲ್ಲಬೇಕು. ಮತ್ತು ಯಥಾವಿಧಿಯಾಗಿ ಆ ಪಿಂಡವನ್ನು ಮಾಡಿ ಸಮಾಧಾನ ಚಿತ್ತದಿಂದ ಅವುಗಳನ್ನು ಮೂಸಿನೋಡಬೇಕು,

೫೪. ಅನಂತರದಲ್ಲಿ ಪಿಂಡಗಳನ್ನು ಮಾಡಿ ಮಿಕ್ಕ ಅನ್ನದಿಂದ ದ್ವಿಜರಿಗೆ ವಿಧಿವತ್ತಾಗಿ ಭೋಜನಮಾಡಿಸಬೇಕು. ನಾನಾವಿಧವಾದ ಮಾಂಸ ಸೂಪ ಮತ್ತು ಮಂಗಳವಾದ ಶ್ರಾದ್ಧಾರ್ಹ ಭಕ್ಷ್ಯಗಳನ್ನು ಕೊಡಬೇಕು.

ತತೋಽನ್ನಮುತ್ಸೃಜೇದ್ಭುಕ್ತೇಷ್ವಗ್ರತೋ ವಿಕಿರನ್ ಭುವಿ ।
ಪೃಷ್ಟ್ವಾ ತದನ್ನಮಿತ್ಯೇವ ತೃಪ್ತಾನಾಚಾಮಯೇತ್ತತಃ ॥ ೫೫ ॥

ಆಚಾಂತಾನನುಜಾನೀಯಾದಭಿತೋ ರಮ್ಯತಾಮಿತಿ ।
ಸ್ವಧಾಸ್ತ್ವಿತಿ ಚ ತೇ ಬ್ರೂಯುರ್ಬ್ರಾಹ್ಮಣಾಸ್ತದನಂತರಮ್ ॥ ೫೬ ॥

ತತೋ ಭುಕ್ತವತಾಂ ತೇಷಾಮನ್ನಶೇಷಂ ನಿವೇದಯೇತ್ ।
ಯಥಾ ಬ್ರೂಯುಸ್ತಥಾ ಕುರ್ಯಾದನುಜ್ಞಾತಸ್ತು ತೈರ್ದ್ವಿಜೈಃ ॥ ೫೭ ॥

ಪಿತ್ರ್ಯೇ ಸ್ವದಿತಮಿತ್ಯೇವ ವಾಚ್ಯಂ ಗೋಷ್ಠೇಷು ಸುಶ್ರಿತಮ್ ।
ಸಂಪನ್ನಮಿತ್ಯಭ್ಯುದಯೇ ದೇವೇ ಸೇವಿತಮಿತ್ಯಪಿ ॥ ೫೮ ॥

---

೫೫. ಆಮೇಲೆ ದ್ವಿಜರು ಭೋಜನಮಾಡಿದ ತರುವಾಯ ಅವರ ಮುಂದುಗಡೆಯಲ್ಲಿ ಭೂಮಿಯಲ್ಲಿ ವಿಕಿರಾನ್ನವನ್ನು ಬಿಡಬೇಕು. ಹಾಗು ಅನ್ನವನ್ನು ತೃಪ್ತಿ ಪರ್ಯಂತವಾಗಿ ಕೇಳಿ ತೃಪ್ತರಾದ ದ್ವಿಜರಿಗೆ ಆಚಮನಮಾಡಿಸಬೇಕು.

೫೬. ಆಚಮನಮಾಡಿದ ದ್ವಿಜರನ್ನು ಸುತ್ತಲೂ ಇರುವ ವಿಸ್ತಾರ ಪ್ರದೇಶದಲ್ಲಿ ವಿಹರಿಸುವಂತೆ ಅನುಜ್ಞೆಕೊಡಬೇಕು. ಅನಂತರದಲ್ಲಿ ಆ ದ್ವಿಜರು ಪಿತೃಗಳಿಗೆ ನಿವೇದಿತವಾಗಲೆಂದು ಹೇಳಬೇಕು.

೫೭. ಹೀಗೆ ಭೋಜನಮಾಡಿರುವ ಬ್ರಾಹ್ಮಣರನ್ನು ಕುರಿತು ಅನ್ನಶೇಷವನ್ನು ನಿವೇದಿಸಬೇಕು. ಆಗ ಅವರು ಏನು ಹೇಳುವರೋ ಅವರ ಸಮ್ಮತಿಯಂತೆ ಆ ವಿಧಾನವನ್ನು ಆಚರಿಸಬೇಕು,

೫೮. ಪಿತೃಕರ್ಮದಲ್ಲಿ ಸ್ವದಿತಂ ಎಂಬುದಾಗಿಯೂ ಗೋಶಾಲೆಯಲ್ಲಿ ಸುಶ್ರಿತ ಎಂಬುದಾಗಿಯೂ ಅಭ್ಯುದಯ ಕರ್ಮದಲ್ಲಿ ಸಂಪನ್ನಂ ಎಂಬುದಾಗಿಯೂ ಮತ್ತು ದೈವ ಕರ್ಮದಲ್ಲಿ ಸೇವಿತಂ ಎಂಬುದಾಗಿಯೂ ತೃಪ್ತಿಯನ್ನು ಪ್ರಾರ್ಥಿಸಬೇಕು.

ವಿಸೃಜ್ಯ ಬ್ರಾಹ್ಮಣಾನ್ ತಾನ್ ವೈ ಪಿತೃಪೂರ್ವಂ ತು ವಾಗ್ಯತಃ ।
ದಕ್ಷಿಣಾಂ ದಿಶಮಾಕಾಂಕ್ಷನ್ ಯಾಚೇತೇಮಾನ್ ವರಾನ್ ಪಿತೄನ್ ॥

ದಾತಾರೋ ನೋಽಭಿವರ್ಧಂತಾಂ ವೇದಾಃ ಸಂತತಿರೇವ ಚ ।
ಶ್ರದ್ಧಾ ಚ ನೋ ಮಾ ವಿಗಮದ್ಬಹುದೇಯಂ ಚ ನೋಽಸ್ತ್ವಿತಿ ॥ ೬೦ ॥

ಪಿಂಡಾಂಸ್ತು ಗೋಽಜವಿಪ್ರೇಭ್ಯೋ ದದ್ಯಾದಗ್ನೌ ಜಲೇಽಪಿ ವಾ ।
ಮಧ್ಯಮಂ ತು ತತಃ ಪಿಂಡಮದ್ಯಾತ್ಪತ್ನೀ ಸುತಾರ್ಥಿನೀ ॥ ೬೧ ॥

ಪ್ರಕ್ಷಾಲ್ಯ ಹಸ್ತಾವಾಚಮ್ಯ ಜ್ಞಾತಿಂ ಶೇಷೇಣ ತೋಷಯೇತ್ ।
ಸೂಪಶಾಕಫಲಾನೀಕ್ಷೂನ್ ಪಯೋ ದಧಿ ಘೃತಂ ಮಧು ॥ ೬೨ ॥

---

೫೯. ಆಮೇಲೆ ಮೌನಿಯಾದ ಯಜಮಾನನು ಪಿತೃಪೂರ್ವಕವಾಗಿ ಆ ಬ್ರಾಹ್ಮಣರನ್ನು ವಿಸರ್ಜನೆಮಾಡಿ ದಕ್ಷಿಣ ದಿಕ್ಕನ್ನು ಕುರಿತು ನಡೆಯುತ್ತಾ ಪಿತೃಗಳನ್ನು ಕುರಿತು ಈ ಮುಂದೆ ಹೇಳುವ ವರಗಳನ್ನು ಪ್ರಾರ್ಥಿಸಬೇಕು.

೬೦. ನಮಗೆ ದಾತೃಪುರುಷರು ಹೆಚ್ಚಾಗಲಿ. ವೇದಜ್ಞಾನವು ಹೆಚ್ಚಲಿ. ಸಂತತಿ ಉಂಟಾಗಲಿ. ಮತ್ತು ಶ್ರದ್ಧೆಯು ತಪ್ಪದೆ ಇರಲಿ. ದಾನವಸ್ತುಗಳು ನಮಗೆ ಹೆಚ್ಚಾಗಿ ಲಭಿಸಲಿ-ಎಂಬುದಾಗಿ ವರಗಳನ್ನು ಪ್ರಾರ್ಥಿಸಬೇಕು.

೬೧. ಆ ಪಿಂಡಗಳನ್ನು ಗೋವು ಆಡು ವಿಪ್ರರಿಗೆ ಕೊಡಬೇಕು. ಅಥವಾ ಅಗ್ನಿಯಲ್ಲಿ ಅಥವಾ ಜಲದಲ್ಲಿ ಬಿಡಬಹುದು. ಮಧ್ಯಪಿಂಡವನ್ನು ಪುತ್ರಾರ್ಥಿನಿಯಾದ ಯಜಮಾನ ಪತ್ನಿಯು ಭಕ್ಷಿಸಬೇಕು.

೬೨. ಆಮೇಲೆ ಕೈಗಳನ್ನು ತೊಳೆದು ಆಚಮನಮಾಡಿ ಪಿತೃಶೇಷದಿಂದ ಜ್ಞಾತಿಗಳಿಗೆ ಸಂತೋಷಪಡಿಸಬೇಕು. ಸೂಪ ಶಾಕ ಫಲ ಇಕ್ಷು ಕ್ಷೀರ ದಧಿ ಘೃತ ಮತ್ತು ಮಧು ಮುಂತಾದ ನಾನಾವಿಧವಾದ ಸಾಮಗ್ರಿಯನ್ನು ಮಾಡಿಸಬೇಕು.

ಅನ್ನಂ ಚೈವ ಯಥಾಕಾಮಂ ವಿವಿಧಂ ಭೋಜ್ಯಪೇಯಕಮ್ ।
ಯದ್ಯದಿಷ್ಟಂ ದ್ವಿಜೇಂದ್ರಾಣಾಂ ತತ್ಸರ್ವಂ ವಿನಿವೇದಯೇತ್ ॥ ೬೩ ॥

ಧಾನ್ಯಾಂಸ್ತಿಲಾಂಶ್ಚ ವಿವಿಧಾನ್ ಶರ್ಕರಾ ವಿವಿಧಾಸ್ತಥಾ ।
ಉಷ್ಣಮನ್ನಂ ದ್ವಿಜಾತಿಭ್ಯೋ ದಾತವ್ಯಂ ಶ್ರೇಯ ಇಚ್ಛತಾ ।
ಅನ್ಯತ್ರ ಫಲಮೂಲೇಭ್ಯೋ ಪಾನಕೇಭ್ಯಸ್ತಥೈವ ಚ ॥ ೬೪ ॥

ನ ಭೂಮೌ ಪಾತಯೇಜ್ಜಾನುಂ ನ ಕುಪ್ಯೇನ್ನಾನೃತಂ ವದೇತ್ ।
ನ ಪಾದೇನ ಸ್ಪೃಶೇದನ್ನಂ ನ ಚೈವಮವಧೂನಯೇತ್ ॥ ೬೫ ॥

ಕ್ರೋಧೇನೈವ ಚ ಯದ್ಭುಕ್ತಂ ಯದ್ಭುಕ್ತಂ ತ್ವಯಥಾವಿಧಿ ।
ಯಾತುಧಾನಾ ವಿಲುಂಪಂತಿ ಜಲ್ಪತಾ ಚೋಪಪಾದಿತಮ್ ॥ ೬೬ ॥

---

೬೩. ಮತ್ತು ಇಷ್ಟಾನುಸಾರವಾದ ಅನ್ನ ನಾನಾವಿಧವಾದ ಭಕ್ಷ್ಯ ಪಾನೀಯ ಮುಂತಾದುವುಗಳನ್ನು ಏರ್ಪಡಿಸಿ ದ್ವಿಜಶ್ರೇಷ್ಠರಿಗೆ ಯಾವುದು ಇಷ್ಟವೋ ಅದೆಲ್ಲವನ್ನೂ ನಿವೇದಿಸಬೇಕು.

೬೪. ಧಾನ್ಯ ತಿಲ ಸಕ್ಕರೆ ಮತ್ತು ಉಷ್ಣಾನ್ನ ಮುಂತಾದ ನಾನಾವಿಧವಾದ ಆಹಾರವನ್ನು ಶ್ರೇಯಸ್ಸನ್ನು ಅಪೇಕ್ಷಿಸುವ ಬ್ರಾಹ್ಮಣರಿಗೆ ನಿವೇದಿಸಬೇಕು. ಫಲ ಮೂಲ ಮತ್ತು ಪಾನಗಳು ಹೊರತು ಮಿಕ್ಕ ಅನ್ನವು ಉಷ್ಣವಾಗಿರಬೇಕು.

೬೫. ಶ್ರಾದ್ಧಕರ್ತನು ಭೂಮಿಯಲ್ಲಿ ಮಂಡಿಯನ್ನು ಊರಬಾರದು, ಕೋಪಿಸಬಾರದು ಅನೃತವನ್ನು ಹೇಳಬಾರದು ಕಾಲಿನಿಂದ ಅನ್ನವನ್ನು ಸ್ಪರ್ಶಿಸಬಾರದು ಮತ್ತು ಅನ್ನವನ್ನು ಕೊಡಬಾರದು.

೬೬. ಕೋಪದಿಂದಾಗಲಿ ಅಶಾಸ್ತ್ರೀಯ ವಿಧದಿಂದಾಗಲೀ ಭೋಜನಮಾಡಿದ ಹವಿಸ್ಸನ್ನು ಮೌನದಿಂದಿರದೆ ನಿರರ್ಥಕವಾದ ವಾಚಾಳತ್ವದಿಂದ ಮಾಡಿದ ಹವಿಸ್ಸನ್ನು ರಾಕ್ಷಸರು ಅಪಹರಿಸುತ್ತಾರೆ.

ಸ್ವಿನ್ನಗಾತ್ರೋ ನ ತಿಷ್ಠೇತ ಸನ್ನಿಧೌ ಚ ದ್ವಿಜೋತ್ತಮಾಃ ।
ನ ಚ ಪಶ್ಯೇತ ಕಾಕಾದೀನ್ ಪಕ್ಷಿಣಃ ಪ್ರತಿಲೋಮಗಾನ್ ।
ತದ್ರೂಪಾಃ ಪಿತರಸ್ತತ್ರ ಸಮಾಯಾಂತಿ ಬುಭುಕ್ಷವಃ ॥ ೭೭ ॥

ನ ದದ್ಯಾತ್ತತ್ರ ಹಸ್ತೇನ ಪ್ರತ್ಯಕ್ಷಂ ಲವಣಂ ತಥಾ ।
ನ ಚಾಯಸೇನ ಪಾತ್ರೇಣ ನ ಚೈವಾಶ್ರದ್ಧಯಾ ಪುನಃ ॥ ೭೮ ॥

ಕಾಂಚನೇನ ತು ಪಾತ್ರೇಣ ರಜತೋದುಂಬರೇಣ ವಾ ।
ದತ್ತಮಕ್ಷಯತಾಂ ಯಾತಿ ಖಡ್ಗೇನ ಚ ವಿಶೇಷತಃ ॥ ೭೯ ॥

ಪಾತ್ರೇ ತು ಮೃಣ್ಮಯೇ ಯೋ ವೈ ಶ್ರಾದ್ಧೇ ವೈ ಭೋಜಯೇ-
ದ್ದ್ವಿಜಾನ್ ।
ಸ ಯಾತಿ ನರಕಂ ಘೋರಂ ಭೋಕ್ತಾ ಚೈವ ಪುರೋಧಸಃ ॥ ೮೦ ॥

---

೭೭. ದ್ವಿಜೋತ್ತಮರೇ! ಶ್ರಾದ್ಧ ಸಮಯದಲ್ಲಿ ಬೆವರಿದ ದೇಹವುಳ್ಳವನಾಗಿ ನಿಲ್ಲಬಾರದು. ವಿರೋಧವಾಗಿ ಸಂಚರಿಸುತ್ತಿದ್ದ ಕಾಕ ಮುಂತಾದ ಪಕ್ಷಿಗಳನ್ನು ನೋಡಬಾರದು. ಪಿತೃಗಳು ಕ್ಷುಧೆಯಿಂದ ಪೀಡಿತರಾಗಿ ಆ ಪಕ್ಷಿರೂಪದಿಂದ ಅಲ್ಲಿಗೆ ಬರುತ್ತಾರೆ.

೭೮. ಶ್ರಾದ್ಧದಲ್ಲಿ ಪಾಣಿಯಿಂದ ಯಾವುದನ್ನೂ ಬಡಿಸಬಾರದು. ಪ್ರತ್ಯಕ್ಷವಾಗಿ ಲವಣವನ್ನು ಹಾಕಬಾರದು. ಮತ್ತು ಕಬ್ಬಿಣದ ಪಾತ್ರೆಯಿಂದಲಾಗಲೀ ಅಶ್ರದ್ಧೆಯಿಂದಾಗಲೀ ಪದಾರ್ಥವನ್ನು ಬಡಿಸಬಾರದು.

೭೯. ಚಿನ್ನ, ಬೆಳ್ಳಿ, ತಾಮ್ರ ಮುಂತಾದ ಲೋಹದ ಪಾತ್ರೆಗಳಿಂದಲೂ, ವಿಶೇಷವಾಗಿ ಖಡ್ಗದಿಂದಲೂ ಕೊಡಲ್ಪಟ್ಟಿರುವ ಹವಿಸ್ಸು ಅಕ್ಷಯ ರೂಪವನ್ನು ಹೊಂದುತ್ತದೆ.

೮೦. ಯಾವ ಮಾನವನ ಶ್ರಾದ್ಧದಲ್ಲಿ ದ್ವಿಜರಿಗೆ ಮಣ್ಣಿನ ಪಾತ್ರೆಯಲ್ಲಿ ಭೋಜನ ಮಾಡಿಸುವನೋ, ಅವನು ಮತ್ತು ಭೋಕ್ತೃ ಮನುಷ್ಯನು ಘೋರವಾದ ನರಕ ಯಾತನೆಯನ್ನು ಅನುಭವಿಸುತ್ತಾರೆ.

ನ ಪಂಕ್ತ್ಯಾಂ ವಿಷಮಂ ದದ್ಯಾನ್ನ ಯಾಚೇತ ನ ದಾಪಯೇತ್ ।
ಯಾಚಿತಾ ದಾಪಿತಾ ದಾತಾ ನರಕಾನ್ ಯಾತಿ ಭೀಷಣಾನ್ ॥ ೭೧ ॥

ಭುಂಜೀರನ್ನಗ್ರತಃ ಶ್ರೇಷ್ಠಂ ನ ಬ್ರೂಯುಃ ಪ್ರಾಕೃತಾನ್ ಗುಣಾನ್ ।
ತಾವದ್ಧಿ ಪಿತರೋಽಶ್ನಂತಿ ಯಾವನ್ನೋಕ್ತಾ ಹವಿರ್ಗುಣಾಃ ॥ ೭೨ ॥

ನಾಗ್ರಾಸನೋಪವಿಷ್ಟಸ್ತು ಭುಂಜೀತ ಪ್ರಥಮಂ ದ್ವಿಜಃ ।
ಬಹೂನಾಂ ಪಶ್ಯತಾಂ ಸೋಽನ್ಯಃ ಪಂಕ್ತ್ಯಾ ಹರತಿ ಕಿಲ್ಬಿಷಮ್ ॥ ೭೩ ॥

ನ ಕಿಂಚಿದ್ವರ್ಜಯೇಚ್ಛ್ರಾದ್ಧೇ ನಿಯುಕ್ತಸ್ತು ದ್ವಿಜೋತ್ತಮಃ ।
ನ ಮಾಂಸಸ್ಯ ನಿಷೇಧೇನ ನ ಚಾನ್ಯಸ್ಯಾನ್ನಮೀಕ್ಷಯೇತ್ ॥ ೭೪ ॥

---

೭೧. ಒಂದು ಪಂಕ್ತಿಯಲ್ಲಿ ವೈಷಮ್ಯದಿಂದ ಬಡಿಸಬಾರದು. ಯಾಚಿಸಬಾರದು. ಮತ್ತೊಬ್ಬನಿಗೆ ಕೊಡಿಸಬಾರದು. ಹಾಗೆ ಯಾಚನೆ ಮಾಡಿದವನೂ, ಕೊಡಿಸಿದವನೂ, ಕೊಟ್ಟವನೂ, ಭೀಷಣವಾದ ನರಕಕ್ಕೆ ಹೋಗುವರು.

೭೨. ದ್ವಿಜರು ಮೊದಲು ಉತ್ತಮವಾದುದನ್ನು ಭೋಜನ ಮಾಡಬೇಕು. ಸಾಮಾನ್ಯವಾದ ಅನ್ನದ ಗುಣ-ದೋಷಗಳನ್ನು ವರ್ಣಿಸಬಾರದು. ಎದುವರೆಗೆ ಹವಿಸ್ಸಿನ ಗುಣಗಳು ಹೇಳಲ್ಪಡುವುದಿಲ್ಲವೋ, ಅದುವರೆಗೆ ಪಿತೃಗಳು ಊಟ ಮಾಡುವರು.

೭೩. ಅಗ್ರಾಸನದಲ್ಲಿ ಕುಳಿತ ದ್ವಿಜನು ಅನೇಕ ಜನರು ನೋಡುತ್ತಿರುವ ಹಾಗೆ ಮೊದಲು ಭೋಜನ ಮಾಡಬಾರದು. ಹಾಗೆ ಭುಂಜಿಸಿದ ವಿಪ್ರನು ಆ ಪಂಕ್ತಿಯಲ್ಲಿ ರುವವರ ಪಾಪವನ್ನು ಸೆಳೆಯುತ್ತಾನೆ.

೭೪. ದ್ವಿಜೋತ್ತಮನು ಶ್ರಾದ್ಧದಲ್ಲಿ ನಿಮಂತ್ರಿಸಲ್ಪಟ್ಟವನಾಗಿ ಯಾವ ಹವಿಸ್ಸನ್ನೂ ಬಿಡಬಾರದು. ಮತ್ತು ಮಾಂಸದ ನಿಷೇಧದಿಂದ ಬೇರೊಂದು ಅನ್ನವನ್ನು ನೋಡಬಾರದು.

ಯೋ ನಾಶ್ನಾತಿ ದ್ವಿಜೋ ಮಾಂಸಂ ನಿಯುಕ್ತಃ ಪಿತೃಕರ್ಮಣಿ ।
ಸ ಪ್ರೇತ್ಯ ಪಶುತಾಂ ಯಾತಿ ಸಂಭವಾನೇಕವಿಂಶತಿಮ್ ॥ ೭೫ ॥

ಸ್ವಾಧ್ಯಾಯಾಂಚ್ಛ್ರಾವಯೇದೇಷಾಂ ಧರ್ಮಶಾಸ್ತ್ರಾಣಿ ಚೈವ ಹಿ ।
ಇತಿಹಾಸಪುರಾಣಾನಿ ಶ್ರಾದ್ಧಕಲ್ಪಾಂಶ್ಚ ಶೋಭನಾನ್ ॥ ೭೬ ॥

ತತೋಽನ್ನಮುತ್ಸೃಜೇದ್ಭುಕ್ತ್ವಾ ಸಾಗ್ರತೋ ವಿಕಿರನ್ ಭುವಿ ।
ಪೃಷ್ಟ್ವಾ ಸ್ವದಿತಮಿತ್ಯೇವಂ ತೃಪ್ತಾನಾಚಾಮಯೇತ್ತತಃ ॥ ೭೭ ॥

ಆಚಾಂತಾನನುಜಾನೀಯಾದಭಿತೋ ರಮ್ಯತಾಮಿತಿ ।
ಸ್ವಧಾಸ್ತ್ವಿತಿ ಚ ತಂ ಬ್ರೂಯುರ್ಬ್ರಾಹ್ಮಣಾಸ್ತದನಂತರಮ್ ॥ ೭೮ ॥

---

೭೫. ಶ್ರಾದ್ಧ ಕರ್ಮದಲ್ಲಿ ನಿಮಂತ್ರಿಸಲ್ಪಟ್ಟ ಯಾವ ದ್ವಿಜನು ಮಾಂಸವನ್ನು ಭುಂಜಿಸುವುದಿಲ್ಲವೊ, ಅವನು ಮರಣಾ ನಂತರದಲ್ಲಿ ಇಪ್ಪತ್ತೊಂದು ಜನ್ಮಗಳಲ್ಲಿ ಪಶುತ್ವವನ್ನು ಹೊಂದುತ್ತಾನೆ.

೭೬. ಭೋಜನ ಮಾಡುತಿದ್ದ ದ್ವಿಜರಿಗೆ ವೇದ, ಧರ್ಮಶಾಸ್ತ್ರ, ಇತಿಹಾಸ, ಪುರಾಣ ಮತ್ತು ಶುಭ ಕರವಾದ ಅನೇಕ ಶ್ರಾದ್ಧ ಕಲ್ಪಗಳನ್ನು ಶ್ರವಣ ಮಾಡಿಸ ಬೇಕು.

೭೭. ಆಮೇಲೆ ಭೋಕ್ತೃವಾದ ದ್ವಿಜನು ಮುಂದುಗಡೆಯಲ್ಲಿ ಭುಕ್ತ ಶೇಷಾ ನ್ನವನ್ನು ಭೂಮಿಯಲ್ಲಿ ಚೆಲ್ಲುತ್ತಾ ಹಾಕಬೇಕು. ಹಾಗು " ಸ್ವದಿತಂ-ಸುಭೋಜನ ವಾಯಿತೆ " ಎಂದು ಕೇಳಿ ತೃಪ್ತರಾದ ದ್ವಿಜರಿಗೆ ಆಚಮನ ಮಾಡಿಸಬೇಕು.

೭೮. ಆಚಮನ ಮಾಡಿದ ದ್ವಿಜರನ್ನು ಸುತ್ತಲೂ ಇರುವ ಪ್ರದೇಶದಲ್ಲಿ ವಿಹರಿಸುವಂತೆ ಅನುಜ್ಞೆ ಕೊಡಬೇಕು. ಆಗ ಬ್ರಾಹ್ಮಣರು ಯಜಮಾನನ್ನು ನೋಡಿ ಪಿತೃಗಳಿಗೆ ತೃಪ್ತಿಯಾಗಲೆಂದು ಹೇಳಬೇಕು.

ತತೋ ಭುಕ್ತವತಾಂ ತೇಷಾಮನ್ನಶೇಷಂ ನಿವೇದಯೇತ್ ।
ಯಥಾ ಬ್ರೂಯುಸ್ತಥಾ ಕುರ್ಯಾದನುಜ್ಞಾತಸ್ತು ತೈರ್ದ್ವಿಜೈಃ ॥೭೯॥

ಪಿತ್ರ್ಯೇ ಸ್ವದಿತ ಇತ್ಯೇವ ವಾಕ್ಯಂ ಗೋಷ್ಠೇಷು ಸುಶ್ರಿತಮ್ ।
ಸಂಪನ್ನಮಿತ್ಯಭ್ಯುದಯೇ ದೈವೇ ರೋಚತ ಇತ್ಯಪಿ ॥ ೮೦ ॥

ವಿಸೃಜ್ಯ ಬ್ರಾಹ್ಮಣಾಂಸ್ತುತ್ವಾ ಪಿತೃಪೂರ್ವಂ ತು ವಾಗ್ಯತಃ ।
ದಕ್ಷಿಣಾಂ ದಿಶಮಾಕಾಂಕ್ಷನ್ ಯಾಚೇತೇಮಾನ್ ವರಾನ್ ಪಿತೄನ್ ॥

ದಾತಾರೋ ನೋಽಭಿವರ್ಧಂತಾಂ ವೇದಾಃ ಸಂತತಿರೇವ ಚ ।
ಶ್ರದ್ಧಾ ಚ ನೋ ಮಾ ವ್ಯಗಮದ್ಬಹುದೇಯಂ ಚ ನೋಽಸ್ತ್ವಿತಿ॥ ೮೨ ॥

---

೭೯. ಹೀಗೆ ಭೋಜನ ಮಾಡಿರುವ ಬ್ರಾಹ್ಮಣರನ್ನು ಕುರಿತು ಅನ್ನಶೇಷ ವನ್ನು ಒಪ್ಪಿಸಬೇಕು. ಆಗ ದ್ವಿಜರಿಂದ ಅನುಜ್ಞೆ ಹೊಂದಿದವನಾಗಿ ಅವರು ಏನು ಹೇಳುವರೋ ಅದರಂತೆ ಮಾಡಬೇಕು.

೮೦. ಪಿತೃ ಕರ್ಮದಲ್ಲಿ "ಸ್ವದಿತಂ" ಎಂಬ, ಗೋಶಾಲಾ ಕರ್ಮಗಳಲ್ಲಿ "ಸುಶ್ರಿತಂ" ಎಂಬ, ಅಭ್ಯುದಯ ಕರ್ಮದಲ್ಲಿ "ಸಂಪನ್ನಂ" ಎಂಬ ಮತ್ತು ದೈವ ಕರ್ಮದಲ್ಲಿ "ರೋಚತೆ" ಎಂಬ ಪ್ರತಿವಚನವನ್ನು ದ್ವಿಜನು ನುಡಿಯಬೇಕು.

೮೧. ಆಮೇಲೆ ಮೌನಿಯಾದ ಯಜಮಾನನು ಸ್ತೋತ್ರ ಮಾಡಿ ಪಿತೃ ಪೂರ್ವಕವಾಗಿ ಬ್ರಾಹ್ಮಣರನ್ನು ವಿಸರ್ಜಿಸಬೇಕು. ಮತ್ತು ದಕ್ಷಿಣ ದಿಕ್ಕನ್ನು ಕುರಿತು ಸಂಚರಿಸುತ್ತಾ ಪಿತೃಗಳನ್ನು ಕುರಿತು ಈ ವರಗಳನ್ನು ಪ್ರಾರ್ಥಿಸಬೇಕು.

೮೨. ನಮಗೆ ದಾನಮಾಡುವ ಮನುಷ್ಯರು ಹೆಚ್ಚಲಿ. ವೇದ ಜ್ಞಾನವು ವೃದ್ಧಿಯಾಗಲಿ. ಸಂತತಿಯು ಉಂಟಾಗಲಿ. ಶ್ರದ್ಧೆಯು ತಪ್ಪದೆ ಇರಲಿ. ಮತ್ತು ನಾವು ಅನೇಕ ವಸ್ತುಗಳನ್ನು ಇತರರಿಗೆ ಕೊಡುವಂತಾಗಲಿ. ಎಂಬ ವರಗಳನ್ನು ಕೇಳಬೇಕು.

ಪಿಂಡಾಂಸ್ತು ಗೋಽಜವಿಪ್ರೇಭ್ಯೋ ದದ್ಯಾದಗ್ನೌ ಜಲೇಽಪಿ ವಾ ।
ಮಧ್ಯಮಂ ತು ತತಃ ಪಿಂಡಮದ್ಯಾತ್ಪತ್ನೀ ಸುತಾರ್ಥಿನೀ ॥ ೮೩ ॥

ಪ್ರಕ್ಷಾಲ್ಯ ಹಸ್ತಾವಾಚಮ್ಯ ಜ್ಞಾತೀನ್ ಶೇಷೇಣ ಭೋಜಯೇತ್ ।
ಜ್ಞಾತಿಷ್ವಪಿ ಚ ತುಷ್ಟೇಷು ಸ್ವಾನ್ ಭೃತ್ಯಾನ್ ಭೋಜಯೇತ್ತತಃ॥೮೪॥

ಪಶ್ಚಾತ್ ಸ್ವಯಂ ಚ ಪತ್ನೀಭಿಃ ಶೇಷಮನ್ನಂ ಸಮಾಚರೇತ್ ।
ನೋದ್ವಾಸಯೇತ್ತದುಚ್ಛಿಷ್ಟಂ ಯಾವನ್ನಾಸ್ತಂ ಗತೋ ರವಿಃ ॥ ೮೫ ॥

ಬ್ರಹ್ಮಚಾರೀ ಭವೇತಾಂ ತು ದಂಪತೀ ರಜನೀಂ ತು ತಾಮ್ ।
ದತ್ವಾ ಶ್ರಾದ್ಧಂ ತಥಾ ಭುಕ್ತ್ವಾ ಸೇವತೇ ಯಸ್ತು ಮೈಥುನಮ್॥೮೬॥

---

೮೩. ಪಿಂಡಗಳನ್ನು ಗೋವು, ಆಡು, ಅಥವಾ ವಿಪ್ರರಿಗೆ ಕೊಡಬೇಕು. ಅಥವಾ ಅಗ್ನಿ, ಜಲಗಳಲ್ಲಿ ಹಾಕಬೇಕು. ಮಧ್ಯಮ ಪಿಂಡವನ್ನು ಪುತ್ರಾರ್ಥಿನಿಯಾದ ಯಜಮಾನನ ಪತ್ನಿಯು ಭಕ್ಷಿಸಬೇಕು.

೮೪. ಅನಂತರದಲ್ಲಿ ಕೈಗಳನ್ನು ತೊಳೆದು ಆಚಮನ ಮಾಡಿ ಪಿತೃಶೇಷಗಳಿಂದ ಜ್ಞಾತಿಗಳಿಗೆ ಭೋಜನ ಮಾಡಿಸಬೇಕು. ಜ್ಞಾತಿಗಳು ತುಷ್ಟರಾದ ಬಳಿಕ ಭೃತ್ಯರಿಗೆ ಊಟ ಮಾಡಿಸಬೇಕು.

೮೫. ಆಮೇಲೆ ಶೇಷಾನ್ನವನ್ನು ತಾನು ಪತ್ನಿಯರೊಡನೆ ಭೋಜನ ಮಾಡಬೇಕು. ಸೂರ್ಯನು ಅಸ್ತಮಯ ಹೊಂದುವವರೆಗೂ, ಬ್ರಾಹ್ಮಣೋಚ್ಛಿಷ್ಟವನ್ನು ಹೊರಗೆ ಹಾಕಬಾರದು.

೮೬. ಶ್ರಾದ್ಧವನ್ನು ಆಚರಿಸಿದ ಯಜಮಾನ ದಂಪತಿಗಳು ಆ ದಿನದ ರಾತ್ರಿಯಲ್ಲಿ ಬ್ರಹ್ಮಚರ್ಯದಿಂದಿರಬೇಕು. ಶ್ರಾದ್ಧವನ್ನು ಭುಂಜಿಸಿದವನೂ ಆ ದಿನದಲ್ಲಿ ಮೈಥುನವನ್ನು ಸೇವಿಸಬಾರದು.

ಮಹಾರೌರವಮಾಸಾದ್ಯ ಕೀಟಯೋನಿಂ ವ್ರಜೇತ್ಪುನಃ ॥ ೮೭ ॥

ಶುಚಿರಕ್ರೋಧನಃ ಶಾಂತಃ ಸತ್ಯವಾದೀ ಸಮಾಹಿತಃ ।
ಸ್ವಾಧ್ಯಾಯಂ ಚ ತಥಾಧ್ವಾನಂ ಕರ್ತಾ ಭೋಕ್ತಾ ಚ ವರ್ಜಯೇತ್ ॥

ಶ್ರಾದ್ಧಂ ಭುಕ್ತ್ವಾ ಪರಶ್ರಾದ್ಧೇ ಭುಂಜತೇ ಯೇ ದ್ವಿಜಾತಯಃ ।
ಮಹಾಪಾತಕಿಭಿಸ್ತುಲ್ಯಾ ಯಾಂತಿ ತೇ ನರಕಾನ್ ಬಹೂನ್ ॥ ೮೯ ॥

ಏಷ ವೋ ವಿಹಿತಃ ಸಮ್ಯಕ್ ಶ್ರಾದ್ಧಕಲ್ಪಃ ಸಮಾಸತಃ ।
ಅನೇನ ವರ್ಧಯೇನ್ನಿತ್ಯಂ ಬ್ರಾಹ್ಮಣೋ ವ್ಯಸನಾನ್ವಿತಃ ॥ ೯೦ ॥

---

೮೭. ಈ ನಿಷೇಧವನ್ನು ಅತಿಕ್ರಮಿಸಿ ಶ್ರಾದ್ಧಮಾಡಿದವನು ಮತ್ತು ಶ್ರಾದ್ಧಾನ್ನವನ್ನು ಭುಂಜಿಸಿದವನು ಮೈಥುನ ಸೇವನೆಯಿಂದ ಮಹಾರೌರವ ನರಕವನ್ನು ಅನುಭವಿಸಿ ಮತ್ತೆ ಕೀಟ ಜನ್ಮವನ್ನು ಹೊಂದುತ್ತಾರೆ.

೮೮. ಶ್ರಾದ್ಧಕರ್ತ ಮತ್ತು ಭೋಕ್ತ-ಇಬ್ಬರೂ ಪವಿತ್ರನೂ, ಕ್ರೋಧ ವರ್ಜಿತನೂ, ಶಾಂತನೂ, ಸತ್ಯವಾದಿಯೂ ಮತ್ತು ಸಮಾಧಾನಚಿತ್ತವುಳ್ಳವನೂ ಆಗಿರಬೇಕು. ಮತ್ತು ವೇದಾಧ್ಯಯನ, ದೂರ ಪ್ರಯಾಣಗಳನ್ನು ವರ್ಜಿಸಬೇಕು.

೮೯. ಯಾವ ದ್ವಿಜರು ಒಂದು ಶ್ರಾದ್ಧದಲ್ಲಿ ಭೋಜನಮಾಡಿ ಮತ್ತೊಂದು ಶ್ರಾದ್ಧದಲ್ಲಿ ಭುಂಜಿಸುವರೋ, ಅವರು ಮಹಾಪಾತಕಿಗಳಿಗೆ ಸಮಾನರಾಗಿ ಅನೇಕ ನರಕ ಯಾತನೆಗಳನ್ನು ಅನುಭವಿಸುವರು.

೯೦. ಈರೀತಿಯಾಗಿ ನಿಮಗೆ ಶ್ರಾದ್ಧಕಲ್ಪವು ಸಂಗ್ರಹವಾಗಿಯೂ ಚೆನ್ನಾಗಿಯೂ, ನನ್ನಿಂದ ಹೇಳಲ್ಪಟ್ಟಿದೆ. ವ್ಯಸನಕ್ಕೆ ಭಾಗಿಯಾದ ಬ್ರಾಹ್ಮಣನು ಶ್ರದ್ಧಾಪೂರ್ವಕವಾಗಿ ಮಾಡಿದ ಈ ಶ್ರಾದ್ಧದ ವಿಧಾನದಿಂದ ವೃದ್ಧಿಯನ್ನು ಹೊಂದಬಹುದು.

ಆಮಶ್ರಾದ್ಧಂ ಯದಾ ಕುರ್ಯಾದ್ವಿಧಿಜ್ಞಃ ಶ್ರದ್ಧಯಾನ್ವಿತಃ ।
ತೇನಾಗ್ನೌಕರಣಂ ಕುರ್ಯಾತ್ ಪಿಂಡಾಂಸ್ತೇನೈವ ನಿರ್ವಪೇತ್ ॥೯೧॥

ಯೋಽನೇನ ವಿಧಿನಾ ಶ್ರಾದ್ಧಂ ಕುರ್ಯಾದ್ವೈ ಶಾಂತಮಾನಸಃ ।
ವ್ಯಪೇತಕಲ್ಮಷೋ ನಿತ್ಯಂ ಯತೀನಾಂ ವರ್ತಯೇತ್ಪದಮ್ ॥ ೯೨ ॥

ತಸ್ಮಾತ್ ಸರ್ವಪ್ರಯತ್ನೇನ ಶ್ರಾದ್ಧಂ ಕುರ್ಯಾದ್ದ್ವಿಜೋತ್ತಮಃ ।
ಆರಾಧಿತೋ ಭವೇದೀಶಸ್ತೇನ ಸಮ್ಯಕ್ ಸನಾತನಃ ॥ ೯೩ ॥

ಅಪಿ ಮೂಲೈಃ ಫಲೈರ್ವಾಪಿ ಪ್ರಕುರ್ಯಾನ್ನಿರ್ಧನೋ ದ್ವಿಜಃ ।
ತಿಲೋದಕೈಸ್ತರ್ಪಯಿತ್ವಾ ಪಿತೄನ್ ಸ್ನಾತ್ವಾ ಸಮಾಹಿತಃ ॥ ೯೪ ॥

---

೯೧. ವಿಧಿಯನ್ನು ತಿಳಿದವನೂ ಶ್ರದ್ಧೆಯಿಂದ ಕೂಡಿದವನೂ ಆದ ಅಧಿಕಾರಿಯು ಯಾವಾಗ ಆಮಶ್ರಾದ್ಧವನ್ನು ಮಾಡುವನೋ, ಆಗ ಆಮಹವಿಸ್ಸಿನಿಂದಲೇ ಅಗ್ನೌಕರಣವನ್ನು ಮಾಡಬೇಕು. ಮತ್ತು ಅದರಿಂದಲೇ ಪಿಂಡಗಳನ್ನು ಹಾಕಬೇಕು.

೯೨. ಯಾವ ಮಾನವನು ಶಾಂತವಾದ ಮನಸ್ಸುಳ್ಳವನಾಗಿ ಈ ವಿಧದಿಂದ ಶ್ರಾದ್ಧವನ್ನು ಮಾಡುವನೋ, ಅವನು ಯಾವಾಗಲೂ ದೂರಕಳೆದ ಪಾತಕವುಳ್ಳವನಾಗಿ ಯತಿಗಳ ಪದವಿಯನ್ನು ಹೊಂದುವನು.

೯೩. ಆದುದರಿಂದ ದ್ವಿಜೋತ್ತಮನು ಸರ್ವಪ್ರಯತ್ನಗಳಿಂದ ಶ್ರಾದ್ಧವನ್ನು ಮಾಡಬೇಕು. ಆ ಶ್ರಾದ್ಧಾಚರಣೆಯಿಂದ ಅನಾದಿಯಾದ ಸರ್ವೇಶ್ವರನು ಆರಾಧಿಸಲ್ಪಡುವನು.

೯೪. ಧನರಹಿತನಾದ ದ್ವಿಜನು ಸ್ನಾನಮಾಡಿ ಸಮಾಧಾನವಾದ ಚಿತ್ತವುಳ್ಳವನಾಗಿ ತಿಲೋದಕದಿಂದ ಪಿತೃಗಳಿಗೆ ತರ್ಪಣವನ್ನು ಕೊಟ್ಟು ಫಲಮೂಲಗಳಿಂದಲಾದರೂ ಶ್ರಾದ್ಧವನ್ನು ಮಾಡಬೇಕು.

ನ ಜೀವತ್ಪಿತೃಕೋ ದದ್ಯಾದ್ಧೋಮಾಂತಂ ವಾ ವಿಧೀಯತೇ ।
ಯೇಷಾಂ ವಾಪಿ ಪಿತಾ ದದ್ಯಾತ್ತೇಷಾಂ ಚೈಕೇ ಪ್ರಚಕ್ಷತೇ ॥ ೯೫ ॥

ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಃ ।
ಯೋ ಯಸ್ಯ ಪ್ರೀಯತೇ ತಸ್ಮೈ ದೇಯಂ ನಾನ್ಯಸ್ಯ ತೇನ ತು ॥ ೯೬ ॥

ಭೋಜಯೇದ್ವಾಪಿ ಜೀವಂತಂ ಯಥಾಕಾಮಂ ತು ಭಕ್ತಿತಃ ।
ನ ಜೀವಂತಮತಿಕ್ರಮ್ಯ ದದಾತಿ ಪ್ರಯತಃ ಶುಚಿಃ ॥ ೯೭ ॥

ದ್ವ್ಯಾಮುಷ್ಯಾಯಣಿಕೋ ದದ್ಯಾದ್ಬೀಜಿಕ್ಷೇತ್ರಿಕಯೋಃ ಸಮಮ್ ।
ಅಧಿಕಾರೀ ಭವೇತ್ ಸೋಽಥ ನಿಯೋಗೋತ್ಪಾದಿತೋ ಯದಿ ॥ ೯೮ ॥

---

೯೫, ಜೀವಂತರಾದ ಪಿತೃಗಳುಳ್ಳ ಯಜಮಾನನು ಶ್ರಾದ್ಧಹವಿಸ್ಸನ್ನು ದಾನ ಮಾಡಬಾರದು. ಅಥವಾ ಹೋಮಾಂತವಾದ ಪ್ರಯೋಗವನ್ನು ಮಾಡಬೇಕು. ಅಥವಾ ತನ್ನ ಜನಕನು ಯಾರಿಗೆ ಶ್ರಾದ್ಧದಾನ ಮಾಡುವನೋ ಅವರಿಗೆ ಶ್ರಾದ್ಧವನ್ನು ಅರ್ಪಿಸಬೇಕೆಂದು ಹೇಳುವರು.

೯೬. ಪಿತೃ-ಪಿತಾಮಹ ಮತ್ತು ಪ್ರಪಿತಾಮಹರೆಂಬ ಮೂರುಮಂದಿ ಪಿತೃವರ್ಗವಲ್ಲಿ ಯಾವನು ಯಾವ ಸ್ಥಾನವನ್ನು ಪ್ರೀತಿಸುತ್ತಾನೋ ಅವನಿಗೆ ಆ ಶ್ರಾದ್ಧಾನ್ನವನ್ನು ದಾನಮಾಡಬೇಕು. ಮತ್ತೊಬ್ಬನಿಗೆ ಅವನಿಂದ ಶ್ರಾದ್ಧಾನ್ನ ದಾನವು ವಿಧಿಸಲ್ಪಡಲಿಲ್ಲ.

೯೭. ಅಥವಾ ತನ್ನ ಇಷ್ಟಾನುಸಾರವಾಗಿ ಭಕ್ತಿಯಿಂದ ಜೀವಂತನಾದ ಹಿರಿಯನಿಗೆ ಶ್ರಾದ್ಧವನ್ನು ಭೋಜನಮಾಡಿಸಬೇಕು. ಮತ್ತು ಜಿತೇಂದ್ರಿಯನೂ, ಪವಿತ್ರನೂ ಆದ ಯಜಮಾನನು ಜೀವಂತನನ್ನು ಅತಿಕ್ರಮಿಸಿ ಶ್ರಾದ್ಧವನ್ನು ದಾನ ಮಾಡುವುದು ಅಯುಕ್ತವು.

೯೮. ಬೀಜಿ ಮತ್ತು ಕ್ಷೇತ್ರಿಗಳಿಬ್ಬರಿಂದ ಜನಿಸಿದವನು ಆ ಬೀಜಿಕ್ಷೇತ್ರಿಗಳಿಬ್ಬರಿಗೂ ಶ್ರಾದ್ಧವನ್ನು ಮಾಡಬೇಕು. ಆ ಕ್ಷೇತ್ರಿಯು ನಿಯೋಗ ವಿಧಿಯಿಂದ ಹುಟ್ಟಿದ್ದರೆ ಅವನು ಅಧಿಕಾರಿಯಾಗುವನು.

ಅನಿಯುಕ್ತಾತ್ ಸುತೋ ಯಶ್ಚ ಶುಕ್ರತೋ ಜಾಯತೇ ತ್ವಿಹ ।
ಪ್ರದದ್ಯಾದ್ಬೀಜಿನೇ ಪಿಂಡಂ ಕ್ಷೇತ್ರಿಣೇ ತು ತತೋಽನ್ಯಥಾ ॥ ೯೯ ॥

ದ್ವೌ ಪಿಂಡೌ ನಿರ್ವಪೇತ್ತಾಭ್ಯಾಂ ಕ್ಷೇತ್ರಿಣೇ ಬೀಜಿನೇ ತಥಾ ।
ಕೀರ್ತಯೇದಥ ಚೈವಾಸ್ಮಿನ್ ಬೀಜಿನಂ ಕ್ಷೇತ್ರಿಣಂ ತತಃ ।
ಮೃತಾಹನಿ ತು ಕರ್ತವ್ಯಮೇಕೋದ್ದಿಷ್ಟಂ ವಿಧಾನತಃ ॥ ೧೦೦ ॥

ಅಶೌಚೇ ಸ್ವೇ ಪರಿಕ್ಷೀಣೇ ಕಾಮ್ಯಂ ವೈ ಕಾಮತಃ ಪುನಃ ।
ಪೂರ್ವಾಹ್ಣೇ ಚೈವ ಕರ್ತವ್ಯಂ ಶ್ರಾದ್ಧಮಭ್ಯುದಯಾರ್ಥಿನಾ ॥ ೧೦೧ ॥

ದೈವವತ್ಸರ್ವಮೇವ ಸ್ಯಾನ್ನೈವ ಕಾರ್ಯಾ ತಿಲೈಃ ಕ್ರಿಯಾಃ ।
ದರ್ಭಾಶ್ಚ ಋಜವಃ ಕಾರ್ಯಾ ಯುಗ್ಮಾನ್ ವೈ ಭೋಜಯೇದ್ದ್ವಿಜಾನ್ ॥ ೧೦೨ ॥

---

೯೯. ನಿಯೋಗವಿಲ್ಲದವನ ರೇತಸ್ಸಿನಿಂದ ಯಾವ ಪುತ್ರನು ಜನಿಸುವನೋ ಅವನು ಬೀಜಿ ಜನಕನಿಗೆ ಪಿಂಡವನ್ನು ಕೊಡಬೇಕು. ನಿಯೋಗದಿಂದ ಹುಟ್ಟಿದವನಿಗೆ ಮಾತ್ರ ಬೇರೊಂದು ವಿಧಾನವು ಇರುವುದು.

೧೦೦. ನಿಯೋಗದಿಂದ ಹುಟ್ಟಿದವನು ಬೀಜಿಕ್ಷೇತ್ರಿಗಳಿಬ್ಬರಿಗೆ ಎರಡು ಪಿಂಡಗಳನ್ನು ಕೊಡಬೇಕು. ಮತ್ತು ಆ ಪಿಂಡದಲ್ಲಿ ಬೀಜಿಕ್ಷೇತ್ರಿಗಳ ನಾಮವನ್ನು ಕೀರ್ತಿಸಬೇಕು- ಮತ್ತು ಮೃತದಿನದಲ್ಲಿ ಯಥಾವಿಧಿಯಾಗಿ ಏಕೋದ್ದಿಷ್ಟ ಶ್ರಾದ್ಧವನ್ನು ಮಾಡಬೇಕು.

೧೦೧. ತನಗೆ ಆಶೌಚವು ಕಳೆಯಲು ಅಭ್ಯುದಯವನ್ನು ಅಪೇಕ್ಷಿಸುವ ಯಜಮಾನನಿಂದ ತನ್ನ ಇಷ್ಟದಂತೆ ಕಾಮ್ಯವಾದ ಅಭ್ಯುದಯ ಶ್ರಾದ್ಧವು ಪೂರ್ವಾಹ್ಣದಲ್ಲಿ ಆಚರಿಸಲ್ಪಡಬೇಕು.

೧೦೨. ಆ ಕರ್ಮವು ದೈವಕರ್ಮದಂತೆ ನಡೆಯುವುದು. ಅದರಲ್ಲಿ ತಿಲಗಳಿಂದ ಕ್ರಿಯೆಗಳನ್ನು ಮಾಡಲಾಗದು. ದರ್ಭೆಗಳನ್ನು ಋಜು ರೀತಿಯಲ್ಲಿರಿಸಬೇಕು ಮತ್ತು ಯುಗ್ಮರಾದ ದ್ವಿಜರನ್ನು ಭೋಜನಮಾಡಿಸಬೇಕು.

ನಾಂದೀಮುಖಾಸ್ತು ಪಿತರಃ ಪ್ರೀಯಂತಾಮಿತಿ ವಾಚಯೇತ್ ।
ಮಾತೃಶ್ರಾದ್ಧಂ ತು ಪೂರ್ವಂ ಸ್ಯಾತ್ಪಿತೄಣಾಂ ತದನಂತರಮ್ ॥೧೦೩॥

ತತೋ ಮಾತಾಮಹಾನಾಂ ತು ವೃದ್ಧೌ ಶ್ರಾದ್ಧತ್ರಯಂ ಸ್ಮೃತಮ್ ।
ದೈವಪೂರ್ವಂ ಪ್ರದದ್ಯಾದ್ವೈ ನ ಕುರ್ಯಾದಪ್ರದಕ್ಷಿಣಮ್ ॥ ೧೦೪ ॥

ಪ್ರಾಙ್ಮುಖೋ ನಿರ್ವಪೇದ್ವಿದ್ವಾನುಪವೀತೀ ಸಮಾಹಿತಃ ।
ಪೂರ್ವಂ ತು ಮಾತರಃ ಪೂಜ್ಯಾ ಭಕ್ತ್ಯಾ ವೈ ಸಗಣೇಶ್ವರಾಃ ॥ ೧೦೫ ॥

ಸ್ಥಂಡಿಲೇಷು ವಿಚಿತ್ರೇಷು ಪ್ರತಿಮಾಸು ದ್ವಿಜಾತಿಷು ।
ಪುಷ್ಪೈರ್ಧೂಪೈಶ್ಚ ನೈವೇದ್ಯೈರ್ಭೂಷಣೈರಪಿ ಪೂಜಯೇತ್ ॥ ೧೦೬ ॥

---

೧೦೩. ಆ ಕರ್ಮದಲ್ಲಿ ನಾಂದೀಮುಖರಾದ ಪಿತೃಗಳು ಪ್ರೀತಿ ಹೊಂದ ಲೆಂದು ದ್ವಿಜರಿಂದ ಹೇಳಿಸಬೇಕು. ಆ ಅಭ್ಯುದಯ ಶ್ರಾದ್ಧದಲ್ಲಿ ಮಾತೃಶ್ರಾದ್ಧವು ಪೂರ್ವದಲ್ಲಿಯೂ ಪಿತೃಶ್ರಾದ್ಧವು ಅನಂತರದಲ್ಲಿಯೂ ನಡೆಯಬೇಕು.

೧೦೪. ತರುವಾಯ ಮಾತಾಮಹರಿಗೆ ಶ್ರಾದ್ಧವನ್ನು ಕೊಡಬೇಕು. ಹೀಗೆ ವೃದ್ಧಿ ಸಂದರ್ಭದಲ್ಲಿ ಮೂರು ಶ್ರಾದ್ಧಗಳು ಸ್ಮರಿಸಲ್ಪಟ್ಟಿವೆ. ದೈವಪೂರ್ವಕವಾಗಿ ಶ್ರಾದ್ಧ ಕರ್ಮವನ್ನು ಆಚರಿಸಬೇಕು. ಅಪ್ರದಕ್ಷಿಣವಾಗಿ ಯಾವುದನ್ನೂ ಆಚರಿಸಬಾರದು.

೧೦೫. ಜ್ಞಾನಿಯೂ ಸಮಾಧಾನವುಳ್ಳ ಚಿತ್ತದಿಂದ ಕೂಡಿದವನೂ ಆದ ಯಜಮಾನನು ಪೂರ್ವಾಭಿಮುಖನಾಗಿ ಕುಳಿತು ಉಪವೀತವನ್ನು ಧರಿಸಿ ಶ್ರಾದ್ಧ ವನ್ನು ಮಾಡಬೇಕು. ಮೊದಲು ಗಣೇಶ್ವರನಿಂದ ಕೂಡಿದ ಮಾತೃದೇವತೆಗಳು ಪೂಜಿಸಲ್ಪಡಬೇಕು.

೧೦೬. ಈ ಮಾತೃಕಾಪೂಜೆಯನ್ನು ಸ್ಥಂಡಿಲ ಚಿತ್ರಪ್ರತಿಮೆ ಅಥವಾ ಬ್ರಾಹ್ಮಣರಲ್ಲಿ ಆಚರಿಸುತ್ತಾ ಪುಷ್ಪ ಧೂಪ ನೈವೇದ್ಯ ಮತ್ತು ಭೂಷಣಗಳಿಂದ ಪೂಜೆ ಮಾಡಬೇಕು.

ಪೂಜಯಿತ್ವಾ ಮಾತೃಗಣಂ ಕುರ್ಯಾಚ್ಛ್ರಾದ್ಧತ್ರಯಂ ದ್ವಿಜಃ ।
ಅಕೃತ್ವಾ ಮಾತೃಯೋಗಂ ತು ಯಃ ಶ್ರಾದ್ಧಂ ತು ನಿವೇದಯೇತ್ ।
ತಸ್ಯ ಕ್ರೋಧಸಮಾವಿಷ್ಟಾ ಹಿಂಸಾಂ ಗಚ್ಛಂತಿ ಮಾತರಃ ॥ ೧೦೭ ॥

ಇತಿ ಶ್ರೀ ಕೂರ್ಮಪುರಾಣೇ ಪಂಚಸಪ್ತತಿತಮೋಽಧ್ಯಾಯಃ.

---

೧೦೭. ದ್ವಿಜನು ಮಾತೃಗಣವನ್ನು ಪೂಜಿಸಿ ಮೂರುಶ್ರಾದ್ಧಗಳನ್ನು ಮಾಡಬೇಕು. ಮಾತೃಗಣದ ಪೂಜೆಯನ್ನು ಮಾಡದೆ ಯಾವ ಮಾನವನು ಶ್ರಾದ್ಧವನ್ನು ಮಾಡುವನೋ ಅವನ ವಿಷಯದಲ್ಲಿ ಮಾತೃದೇವತೆಗಳು ಕೋಪಗೊಂಡವರಾಗಿ ಹಿಂಸೆಯನ್ನು ಮಾಡುತ್ತಾರೆ.

ಕೂರ್ಮ ಪುರಾಣದಲ್ಲಿ ಎಪ್ಪತ್ತೈದನೆಯ ಅಧ್ಯಾಯವು ಮುಗಿದುದು.



ಶ್ರೀಃ

# ಕೂರ್ಮಪುರಾಣಂ

---

## ಷಟ್‌ಸಪ್ತತಿತಮೋऽಧ್ಯಾಯಃ.

**ವ್ಯಾಸ ಉವಾಚ:—**

**ದಶಾಹಂ ಪ್ರಾಹುರಾಶೌಚಂ ಸಪಿಂಡೇಷು ವಿಧೀಯತೇ ।**
**ಮೃತೇಷು ವಾಪಿ ಜಾತೇಷು ಬ್ರಾಹ್ಮಣಾನಾಂ ದ್ವಿಜೋತ್ತಮಾಃ ॥ ೧ ॥**

**ನಿತ್ಯಾನಿ ಚೈವ ಕರ್ಮಾಣಿ ಕಾಮ್ಯಾನಿ ಚ ವಿಶೇಷತಃ ।**
**ನ ಕುರ್ಯಾದ್ವಿಹಿತಂ ಕಿಂಚಿತ್ ಸ್ವಾಧ್ಯಾಯಂ ಮನಸಾಪಿ ಚ ॥ ೨ ॥**

---

## ಎಪ್ಪತ್ತಾರನೆಯ ಅಧ್ಯಾಯವು.

೧. ವ್ಯಾಸ ಮುನಿಯು ಹೀಗೆಂದು ಹೇಳಿದನು:- ದ್ವಿಜೋತ್ತಮರೇ! ಮರಣ ಅಥವಾ ಜನನಗಳಲ್ಲಿ ಬ್ರಾಹ್ಮಣರಿಗೆ ಸಪಿಂಡವರ್ಗದಲ್ಲಿ ಹತ್ತು ದಿನಗಳ ವರೆಗೆ ಆಶೌಚವು ವಿಧಿಸಲ್ಪಟ್ಟಿದೆ ಎಂದು ಹೇಳುವರು.

೨. ಆಶೌಚ ಸಮಯದಲ್ಲಿ ನಿತ್ಯ ಕರ್ಮಗಳನ್ನೂ ವಿಶೇಷವಾಗಿ ಕಾಮ್ಯ ಕರ್ಮಗಳನ್ನೂ, ಅಥವಾ ವಿಹಿತವಾದ ಮತ್ತಾವ ಕರ್ಮಗಳನ್ನೂ ಮಾಡಬಾರದು. ಹಾಗೆ ವೇದವನ್ನು ಮನಸ್ಸಿನಲ್ಲಿಯೂ ಸ್ಮರಿಸಬಾರದು.

ಶುಚೀನಕ್ರೋಧನಾನ್ ಭೂಮ್ಯಾನ್ ಶಾಲಾಗ್ನೌ ಭಾವಯೇದ್ದ್ವಿಜಾನ್।
ಶುಷ್ಕಾನ್ನೇನ ಫಲೈರ್ವಾಪಿ ವೈತಾನಾನ್ ಜುಹುಯಾತ್ತಥಾ　　॥ ೩ ॥

ನ ಸ್ಪೃಶೇಯುರಿಮಾನನ್ಯೇ ನ ಚ ತೇಭ್ಯಃ ಸಮಾಹರೇತ್ ।
ಚತುರ್ಥೇ ಪಂಚಮೇ ವಾಹ್ನಿ ಸಂಸ್ಪರ್ಶಃ ಕಥಿತೋ ಬುಧೈಃ　　॥ ೪ ॥

ಸೂತಕೇ ತು ಸಪಿಂಡಾನಾಂ ಸಂಸ್ಪರ್ಶೋ ನೈವ ದುಷ್ಯತಿ ।
ಸೂತಕಂ ಸೂತಿಕಾಂ ಚೈವ ವರ್ಜಯಿತ್ವಾ ನೃಣಾಂ ಪುನಃ　　॥ ೫ ॥

ಅಧೀಯಾನಸ್ತಥಾ ವೇದಾನ್ ವೇದವಿಚ್ಚ ಪಿತಾ ಭವೇತ್ ।
ಸಂಸ್ಪೃಶ್ಯಾಃ ಸರ್ವ ಏವೈತೇ ಸ್ನಾನಾನ್ಮಾತಾ ದಶಾಹತಃ　　॥ ೬ ॥

---

೩. ಆ ಸಮಯದಲ್ಲಿ ಶಾಲಾಗ್ನಿಯಲ್ಲಿ ಪವಿತ್ರರೂ, ಕ್ರೋಧ ವರ್ಜಿತರೂ ಆದ ಬೇರೆ ದ್ವಿಜರನ್ನು ಗೊತ್ತು ಮಾಡಬೇಕು. ಅವರಮೂಲಕ ಶುಷ್ಕಾನ್ನ ಅಥವಾ ಫಲಗಳಿಂದ ತ್ರೇತಾಗ್ನಿಯಲ್ಲಿ ಹೋಮ ಮಾಡಬೇಕು.

೪. ಈ ಆಶೌಚಿಗಳನ್ನು ಇತರರು ಮುಟ್ಟಬಾರದು. ಮತ್ತು ಅವರಿಂದ ಏನನ್ನೂ ತರಬಾರದು. ನಾಲ್ಕು ಅಥವಾ ಐದನೆಯ ದಿವಸದಲ್ಲಿ ಸ್ಪರ್ಶವೂ ಪಂಡಿತರಿಂದ ಹೇಳಲ್ಪಟ್ಟಿದೆ.

೫. ಜನನಾಶೌಚದಲ್ಲಿ ಜಾತ ಮತ್ತು ಜನನಿಯನ್ನು ಹೊರತು ಮಿಕ್ಕ ಸಪಿಂಡವರ್ಗದಲ್ಲಿ ಪರಸ್ಪರ ಸ್ಪರ್ಶವು ದೂಷಿಸಲ್ಪಡಲಿಲ್ಲ.

೬. ವೇದಗಳನ್ನು ಅಧ್ಯಯನ ಮಾಡುವವನು ಮತ್ತು ವೇದಗಳನ್ನು ಅರಿತ ತಂದೆಯೂ ಇವರೆಲ್ಲರೂ ಸಪಿಂಡರಿಗೆ ಸೂತಕ ಸಮಯದಲ್ಲಿ ಸ್ಪರ್ಶಾರ್ಹರಾಗುವರು. ತಾಯಿಯು ಹತ್ತು ದಿನಗಳು ಕಳೆದ ತರುವಾಯ ಸ್ನಾನದಿಂದ ಸ್ಪರ್ಶಾರ್ಹಳಾಗುವಳು.

ದಶಾಹಂ ನಿರ್ಗುಣೇ ಪ್ರೋಕ್ತಮಾಶೌಚಂ ವಾತಿನಿರ್ಗುಣೇ ।
ಏಕದ್ವಿತ್ರಿಗುಣೈರ್ಯುಕ್ತಶ್ಚತುರ್ತ್ಯೇಕದಿನೈಃ ಶುಚಿಃ ॥ ೭ ॥

ದಶಾಹಾದವರಂ ಸಮ್ಯಗಧೀಯೀತ ಜುಹೋತಿ ಚ ।
ಚತುರ್ಥೇ ತಸ್ಯ ಸಂಸ್ಪರ್ಶಂ ಮನುಃ ಪ್ರಾಹ ಪ್ರಜಾಪತಿಃ ॥ ೮ ॥

ಕ್ರಿಯಾಹೀನಸ್ಯ ಮೂರ್ಖಸ್ಯ ಮಹಾರೋಗಿಣ ಏವ ಚ ।
ಯಥೇಷ್ಟಾಚರಣಸ್ಯೇಹ ಮರಣಾಂತಮಶೌಚಕಮ್ ॥ ೯ ॥

ತ್ರಿರಾತ್ರಂ ದಶರಾತ್ರಂ ವಾ ಬ್ರಾಹ್ಮಣಾನಾಮಶೌಚಕಮ್ ।
ಪ್ರಾಕ್ ಸಂವತ್ಸರಾತ್ತ್ರಿರಾತ್ರಂ ದಶರಾತ್ರಂ ತತಃ ಪರಮ್ ॥ ೧೦ ॥

---

೭. ಗುಣ ಹೀನನಾದ ಅಥವಾ ಅತ್ಯಂತ ಗುಣ ವರ್ಜಿತನಾದ ಮಾನವನ ವಿಷಯದಲ್ಲಿ ಹತ್ತು ದಿನಗಳ ಅಶೌಚವು ವಿಹಿತವಾಗಿದೆ. ಒಂದು ಎರಡು ಅಥವಾ ಮೂರು ಗುಣಗಳಿಂದ ಕೂಡಿದ ಮಾನವನು ನಾಲ್ಕು ಎರಡು ಅಥವಾ ಒಂದು ದಿನದಲ್ಲಿ ಶುದ್ಧನಾಗುವನು.

೮. ಹತ್ತು ದಿನದ ಅಶೌಚವು ಕಳೆದ ಮೇಲೆ ಚೆನ್ನಾಗಿ ಅಧ್ಯಯನ ಹೋಮ ಗಳನ್ನು ಆಚರಿಸಬಹುದು. ಮನು ಪ್ರಜಾಪತಿಯು ನಾಲ್ಕನೆಯ ದಿವಸದಲ್ಲಿ ಅವನ ಸ್ಪರ್ಶವನ್ನು ಅಂಗೀಕರಿಸುವನು.

೯. ಸದಾಚಾರ ಹೀನನೂ, ಮೂರ್ಖನೂ ಮಹಾರೋಗಗ್ರಸ್ತನೂ, ಅಥವಾ ಸ್ವಚ್ಛಂದ ವರ್ತನೆಯುಳ್ಳವನೂ ಆದ ಮಾನವನ ವಿಷಯದಲ್ಲಿ ಅವನ ಮರಣ ಪರ್ಯಂತವಾಗಿ ಅಶುಚಿತ್ವವು ಇರುವುದು.

೧೦. ಬ್ರಾಹ್ಮಣರಿಗೆ ಅಶೌಚವು ಮೂರು ದಿನ ಅಥವಾ ಹತ್ತು ದಿನಗಳ ವರೆಗೆ ವಿಹಿತವಾಗಿರುವುದು. ಒಂದು ಸಂವತ್ಸರದ ವರೆಗೆ ಮರಣವು ಸಂಭವಿಸಿದರೆ ಮೂರು ದಿನ ಅಶೌಚವೂ ಅದರ ಮೇಲೆ ಹತ್ತು ದಿನ ಅಶೌಚವೂ ಇರುವುದು-

ಊನದ್ವಿವಾರ್ಷಿಕೇ ಪ್ರೇತೇ ಮಾತಾಪಿತ್ರೋಸ್ತದಿಷ್ಯತೇ ।
ತ್ರಿರಾತ್ರೇಣ ಶುಚಿಸ್ತ್ವನ್ಯೋ ಯದಿ ಹ್ಯತ್ಯಂತನಿರ್ಗುಣಃ　　॥ ೧೧ ॥

ಅದಂತಜಾತಮರಣೇ ಪಿತ್ರೋರೇಕಾಹಮಿಷ್ಯತೇ ।
ಜಾತದಂತೇ ತ್ರಿರಾತ್ರಂ ಸ್ಯಾದ್ಯದಿ ಸ್ಯಾತಾಂ ತು ನಿರ್ಗುಣೌ　　॥ ೧೨ ॥

ಆದಂತಜನನಾತ್ಸದ್ಯ ಆಚೂಡಾದೇಕರಾತ್ರಕಮ್ ।
ತ್ರಿರಾತ್ರಮೌಪನಯನಾತ್ ಸಪಿಂಡಾನಾಮಶೌಚಕಮ್　　॥ ೧೩ ॥

ಜಾತಮಾತ್ರಸ್ಯ ಬಾಲಸ್ಯ ಯದಿ ಸ್ಯಾನ್ಮರಣಂ ಪಿತುಃ ।
ಮಾತುಶ್ಚ ಸೂತಕಂ ತತ್ಸ್ಯಾತ್ ಪಿತಾ ಸ್ಯಾತ್ ಸ್ಪೃಶ್ಯ ಏವ ಚ ॥ ೧೪ ॥

---

೧೧. ಎರಡು ವರ್ಷಗಳಿಗಿಂತ ನ್ಯೂನವಯಸ್ಸಿನ ಶಿಶುಮರಣದಲ್ಲಿ ಮಾತಾಪಿತೃಗಳಿಗೆ ಆ ಅಶೌಚವು ಅನುಷ್ಠಾನಾರ್ಹವಾಗಿದೆ ಮತ್ತು ಅತ್ಯಂತ ನಿರ್ಗುಣನಾದ ಬೇರೊಬ್ಬನ ವಿಷಯದಲ್ಲಿ ತ್ರಿರಾತ್ರಾನಂತರದಲ್ಲಿ ಶುದ್ಧಿಯಾಗುವುದು.

೧೨. ದಂತಗಳು ಜನಿಸದಿರುವ ಶಿಶುವಿನ ಮರಣದಲ್ಲಿ ಮಾತಾಪಿತೃಗಳಿಗೆ ಏಕಾಹ ಮಾತ್ರ ಅಶೌಚವು ಇರುವುದು. ಅತ್ಯಂತ ನಿರ್ಗುಣರಾದ ಮಾತಾಪಿತೃಗಳ ವಿಷಯದಲ್ಲಿ ದಂತಜನನಾಂತರದಲ್ಲಿ ತ್ರಿರಾತ್ರಾಶೌಚವು ವಿಹಿತವಾಗಿದೆ.

೧೩. ದಂತಗಳು ಜನಿಸುವವರೆಗೂ ಸದ್ಯಃ ಕಾಲದಲ್ಲಿ ಮಾತ್ರವೂ, ಚೂಡಾ ಕರ್ಮ ವಾಗುವವರೆಗೂ ಏಕರಾತ್ರಾಶೌಚವೂ ಮತ್ತು ಉಪನಯನವಾಗುವ ವರೆಗೆ ತ್ರಿರಾತ್ರಾಶೌಚವೂ ಸಪಿಂಡರಿಗೆ ವಿಹಿತವಾಗಿದೆ.

೧೪. ಜನನವಾದ ಕೂಡಲೆ ಬಾಲಕನಿಗೆ ಮರಣವು ಸಂಭವಿಸಿದರೆ ತಾಯಿ ತಂದೆಗಳಿಗೆ ಸೂತಕವು ಇರುವುದು. ಆದರೆ ತಂದೆಯು ಮಾತ್ರ ಸ್ಪರ್ಶಾರ್ಹನಾಗುವನು.

ಸದಾಶೌಚಂ ಸಪಿಂಡಾನಾಂ ಕರ್ತವ್ಯಂ ಸೋದರಸ್ಯ ತು ।
ಊರ್ಧ್ವಂ ದಶಾಹಾದೇಕಾಹಂ ಸೋದರೋ ಯದಿ ನಿರ್ಗುಣಃ ॥ ೧೫ ॥

ತತೋರ್ಧ್ವಂ ದಂತಜನನಾತ್ ಸಪಿಂಡಾನಾಮಶೌಚಕಮ್ ।
ಏಕರಾತ್ರಂ ನಿರ್ಗುಣಾನಾಂ ಚೌಡಾದೂರ್ಧ್ವಂ ತ್ರಿರಾತ್ರಕಮ್ ॥ ೧೬ ॥

ಅದಂತಜಾತಮರಣಂ ಸಂಭವೇದ್ಯದಿ ಸತ್ತಮಾಃ ।
ಏಕರಾತ್ರಂ ಸಪಿಂಡಾನಾಂ ಯದಿ ತೇऽತ್ಯಂತನಿರ್ಗುಣಾಃ ॥ ೧೭ ॥

ವ್ರತಾದೇಶಾತ್ ಸಪಿಂಡಾನಾಂ ಗರ್ಭಸ್ರಾವಾತ್ ಸ್ವಪಾತತಃ ।
ಗರ್ಭಚ್ಯುತಾವಹೋರಾತ್ರಂ ಸಪಿಂಡೇऽತ್ಯಂತನಿರ್ಗುಣೇ ॥ ೧೮ ॥

---

೧೫. ಸಪಿಂಡರಿಗೆ ಯಾವಾಗಲೂ, ಅಶೌಚಾನುಷ್ಠಾನವು ಕರ್ತವ್ಯವಾಗಿದೆ. ಆದರೆ ಸೋದರನು ನಿರ್ಗುಣನಾದರೆ ದಶದಿನಗಳ ಮೇಲೆ ಮತ್ತೊಂದುದಿನ ಅಶೌಚವು ಆಚರಿಸಲ್ಪಡಬೇಕು.

೧೬. ಆಮೇಲೆ ದಂತಗಳ ಉತ್ಪತ್ತಿಯಾದ ಮೇಲೆ ಸಪಿಂಡರಿಗೆ ಅಶೌಚವು ಏಕರಾತ್ರವಾಗಿ ಕರ್ತವ್ಯವಾಗಿರುವುದು. ನಿರ್ಗುಣರಿಗೆ ಚೂಡಾಕರ್ಮಾನಂತರದಲ್ಲಿ ತ್ರಿರಾತ್ರಾಶೌಚವು ಇರುವುದು.

೧೭. ಸಾಧು ಶ್ರೇಷ್ಠರೇ! ದಂತೋತ್ಪತ್ತಿಗೆ ಪೂರ್ವದಲ್ಲಿಯೇ ಬಾಲಕನ ಮರಣವು ಸಂಭವಿಸುವುದಾದರೆ ಅತ್ಯಂತ ಗುಣಹೀನರಾದ ಸಪಿಂಡರಿಗೆ ಏಕ ರಾತ್ರಾಶೌಚವು ಕರ್ತವ್ಯವಾಗಿರುವುದು.

೧೮. ಸಪಿಂಡರಿಗೆ ಗರ್ಭಸ್ರಾವ ಅಥವಾ ಗರ್ಭಪಾತ ಮೊದಲುಗೊಂಡು ವ್ರತಾದೇಶವಾಗುವವರೆಗೂ, ಮತ್ತು ಅತ್ಯಂತ ನಿರ್ಗುಣನೂ ಸ್ವೇಚ್ಛಾಚಾರಿಯೂ ಆದ ಸಪಿಂಡದಲ್ಲಿ ಒಂದುದಿನ ಮಾತ್ರ ಅಶೌಚವು, ಜ್ಞಾತಿಯಲ್ಲಿ ತ್ರಿರಾತ್ರಾ ಅಶೌಚವು ಇರುವುದು.

ಯಥೇಷ್ಟಾಚರಣೇ ಜ್ಞಾತೌ ತ್ರಿರಾತ್ರಮಿತಿ ನಿಶ್ಚಯಃ ।
ಯದಿ ಸ್ಯಾತ್ ಸೂತಕೇ ಸೂತಿರ್ಮರಣೇ ವಾ ಮೃತಿರ್ಭವೇತ್ ।
ಶೇಷೇಣೈವ ಭವೇಚ್ಛುದ್ಧಿರಹಃ ಶೇಷೇ ತ್ರಿರಾತ್ರಕಮ್ ॥ ೧೯ ॥

ಮರಣೋತ್ಪತ್ತಿಯೋಗೇನ ಮರಣೇನ ಸಮಾಪ್ಯತೇ ।
ಅದ್ಯಂ ವೃದ್ಧಿಮದಾಶೌಚಂ ತದಾ ಪೂರ್ವೇಣ ಶುದ್ಧ್ಯತಿ ॥ ೨೦ ॥

ದೇಶಾಂತರಗತಂ ಶ್ರುತ್ವಾ ಸೂತಕಂ ಶಾವಮೇವ ಚ ।
ತಾವದಪ್ರಯತೋ ಮರ್ತ್ಯೋ ಯಾವಚ್ಛೇಷಂ ಸಮಾಪ್ಯತೇ ॥ ೨೧ ॥

ಅತೀತೇ ಸೂತಕೇ ಪ್ರೋಕ್ತಂ ಸಪಿಂಡಾನಾಂ ತ್ರಿರಾತ್ರಕಮ್ ।
ಅಪ್ರದಾನಾತ್ತ್ರಿರಾತ್ರಂ ಸ್ಯಾದ್ದಶರಾತ್ರಂ ತತಃ ಪರಮ್ ॥ ೨೨ ॥

---

೧೯. ಒಂದು ಸೂತಕದಲ್ಲಿ ಮತ್ತೊಂದು ಜನನವಾದರೆ ಅಥವಾ ಒಂದು ಮೃತಾಶೌಚದಲ್ಲಿ ಮತ್ತೊಂದು ಮರಣವು ಸಂಭವಿಸಿದರೆ ಮೊದಲಿನ ಶೇಷ ಆಶೌಚ ದಿಂದಲೇ ಶುದ್ಧಿಯಾಗುವುದು. ಅಹಸ್ಸಿನ ಶೇಷದಲ್ಲಿ ತ್ರಿರಾತ್ರಾಶೌಚವು ಮಾತ್ರವಿರುವುದು.

೨೦. ಜನನ ಮರಣಗಳ ಅಶೌಚವು ಕೂಡಿ ಬಂದರೆ, ಆಗ ಮರಣಾ ಶೌಚ ದಿಂದ ಆಶೌಚವು ಸಮಾಪ್ತಿ ಹೊಂದುವುದು. ಮೊದಲನೆಯ ಆಶೌಚವು ಜನನ ನಿಮಿ ತ್ತಕವಾದರೆ ಆಗ ಮೊದಲಿನ ಆಶೌಚದ ನಿವೃತ್ತಿಯಿಂದ ಶುದ್ಧಿಯಾಗುವುದು.

೨೧. ದೇಶಾಂತರದಲ್ಲಿ ಸಂಭವಿಸಿದ ಜನನ ಮರಣಗಳ ಶ್ರವಣ ವಾಗಲಾಗಿ ಮಿಕ್ಕಿರುವ ಆಶೌಚಾವಧಿಯು ಮುಗಿಯುವವರೆಗೂ, ಮಾನವನು ಅಪವಿತ್ರನಾಗಿ ರುವನು.

೨೨. ಹಿಂದೆ ಕಳೆದ ಜಾತಾ ಶೌಚದಲ್ಲಿ ಸಪಿಂಡರಿಗೆ ಮೂರು ದಿನಗಳು ಆಶೌ ಚಾನುಷ್ಠಾನವು ವಿಧಿಸಲ್ಪಟ್ಟಿರುವುದು. ಮತ್ತು ಕನ್ಯಾ ಪ್ರದಾನದವರೆಗೆ ತ್ರಿರಾತ್ರ ಆಶೌಚವೂ ಅಲ್ಲಿಂದ ಮುಂದೆ ದಶರಾತ್ರಾ ಶೌಚವೂ ಆಚರಿಸಲ್ಪಡಬೇಕು.

ಮಾತಾಮಹಾನಾಂ ಮರಣೇ ತ್ರಿರಾತ್ರಂ ಸ್ಯಾದಶೌಚಕಮ್ ।
ಏಕೋದಕಾನಾಂ ಚ ತಥಾ ಸೂತಕೇ ಚೈತದೇವ ಹಿ　　　　॥ ೨೩ ॥

ಪಕ್ಷಿಣೀ ಯೋನಿಸಂಬಂಧೇ ಬಾಂಧವೇಷು ತಥೈವ ಚ ।
ಏಕರಾತ್ರಂ ಸಮುದ್ದಿಷ್ಟಂ ಗುರೌ ಸಬ್ರಹ್ಮಚಾರಿಣಿ　　　　॥ ೨೪ ॥

ಪ್ರೇತೇ ರಾಜನಿ ಸಜ್ಯೋತಿರ್ಯಸ್ಯ ಸ್ಯಾದ್ವಿಷಯೇ ಸ್ಥಿತಃ ।
ಗೃಹೇ ಮೃತಾಸು ಸರ್ವಾಸು ಕನ್ಯಾಸು ಚ ತ್ರ್ಯಹಂ ಪಿತುಃ　　　　॥ ೨೫ ॥

ಪರಪೂರ್ವಾಸು ಭಾರ್ಯಾಸು ಪುತ್ರೇಷು ಕೃತಕೇಷು ಚ ।
ತ್ರಿರಾತ್ರಂ ಸ್ಯಾತ್ತಥಾಚಾರ್ಯಸ್ವಭಾರ್ಯಾಸ್ವನ್ಯಗಾಸು ಚ　　　　॥ ೨೬ ॥

೨೩. ಮಾತಾ ಮಹರ ಮರಣದಲ್ಲಿ ಮೂರು ದಿನ ಅಶೌಚವು ಇರುವುದು. ಹಾಗು ಏಕೋದಕರ ಮರಣ ಮತ್ತು ಸೂತಕಗಳಲ್ಲಿ ತ್ರಿರಾತ್ರಾಶೌಚವು ಇರುವುದು.

೨೪. ಯೋನಿ ಸಂಬಂಧವಿರುವ ವರ್ಗದಲ್ಲಿಯೂ, ಬಂಧು ಜನಗಳಲ್ಲಿಯೂ, ಪಕ್ಷಿಣಿ ಅಶೌಚವೂ, ಗುರು ಮತ್ತು ಸಹಪಾಠಿಯ ಮರಣದಲ್ಲಿ ಒಂದು ದಿನ ಮಾತ್ರ ಅಶೌಚವೂ ವಿಧಿಸಲ್ಪಟ್ಟಿದೆ.

೨೫. ರಾಜನ ಮರಣದಲ್ಲಿ ಯಾವ ದೇಶಕ್ಕೆ ಪ್ರಭುವಾಗಿರುವನೋ, ಆದೇಶ ದಲ್ಲಿ ಮಾತ್ರ ಒಂದು ಹಗಲು ಅಶೌಚವಿರುವುದು. ಮನೆಯಲ್ಲಿ ಮರಣ ಹೊಂದಿದ ಸಮಸ್ತ ಕನ್ಯೆಯರ ವಿಷಯದಲ್ಲಿ ಜನಕನಿಗೆ ಮೂರು ದಿವಸ ಅಶೌಚವಿರುವುದು.

೨೬. ಜಾತಿಯಿಂದ ಪರ ಪೂರ್ವರಾದ ಭಾರ್ಯೆಯರು ಮತ್ತು ಕೃತಕರಾದ ಪುತ್ರರ ವಿಷಯದಲ್ಲಿ ತ್ರಿರಾತ್ರಾ ಶೌಚವು ಕರ್ತವ್ಯವಾದುದು ಪರ ಸಂಪರ್ಕ ಮಾಡಿದ ಸ್ವಭಾರ್ಯೆ ಹಾಗೂ ಉಪದೇಶಮಾಡಿದ ಆಚಾರ್ಯರ ವಿಷಯದಲ್ಲಿಯೂ ತ್ರಿರಾತ್ರಾ ಶೌಚವು ಇರುವುದು.

ಆಚಾರ್ಯಪುತ್ರೇ ಪತ್ನ್ಯಾಂ ಚ ಅಹೋರಾತ್ರಮುದಾಹೃತಮ್ ।
ಏಕಾಹಂ ಸ್ಯಾದುಪಾಧ್ಯಾಯೇ ಸ್ವಗ್ರಾಮೇ ಶ್ರೋತ್ರಿಯೇಽಪಿ ಚ ॥೨೭॥

ತ್ರಿರಾತ್ರಮಸಪಿಂಡೇಷು ಸ್ವಗೃಹೇ ಸಂಸ್ಥಿತೇಷು ಚ ।
ಏಕಾಹಂ ಚಾಸ್ವವರ್ಯೇ ಸ್ಯಾದೇಕರಾತ್ರಂ ತದಿಷ್ಯತೇ ॥ ೨೮ ॥

ತ್ರಿರಾತ್ರಂ ಶ್ವಶ್ರೂಮರಣಾತ್ ಶ್ವಶುರೇ ಚೈತದೇವ ಹಿ ।
ಸದ್ಯಃ ಶೌಚಂ ಸಮುದ್ದಿಷ್ಟಂ ಸ್ವಗೋತ್ರೇ ಸಂಸ್ಥಿತೇ ಸತಿ ॥ ೨೯ ॥

ಶುಧ್ಯೇದ್ವಿಪ್ರೋ ದಶಾಹೇನ ದ್ವಾದಶಾಹೇನ ಭೂಮಿಪಃ ।
ವೈಶ್ಯಃ ಪಂಚದಶಾಹೇನ ಶೂದ್ರೋ ಮಾಸೇನ ಶುಧ್ಯತಿ ॥ ೩೦ ॥

---

೨೭. ಆಚಾರ್ಯನ ಪುತ್ರ ಅಥವಾ ಪತ್ನಿಯ ವಿಷಯದಲ್ಲಿ ಒಂದುದಿನ ಮಾತ್ರ ಆಶೌಚವು ಉದಾಹರಿಸಲ್ಪಟ್ಟಿದೆ. ಉಪಾಧ್ಯಾಯ ಮತ್ತು ತನ್ನ ಗ್ರಾಮದಲ್ಲಿ ವಾಸಿಸುವ ಶ್ರೋತ್ರಿಯನ ಮರಣದಲ್ಲಿ ಒಂದು ದಿನ ಆಶೌಚವಿರುವುದು.

೨೮. ಅಸಪಿಂಡರು ತನ್ನ ಗೃಹದಲ್ಲಿ ಮರಣ ಹೊಂದಿದರೆ ತ್ರಿರಾತ್ರಾಶೌಚವು ಇರುವುದು. ಶ್ವಶುರ ವರ್ಗದ ವಿಷಯದಲ್ಲಿ ಒಂದು ದಿನ ಅಥವಾ ಒಂದು ರಾತ್ರಿ ಪೂರ್ತಿಯಾಗಿಯೂ ಆಶೌಚವು ಸಮ್ಮತವಾಗಿದೆ.

೨೯. ಶ್ವಶ್ರೂಮರಣದಲ್ಲಿ ತ್ರಿರಾತ್ರಾಶೌಚವು ಇರುವುದು. ಹಾಗೆಯೇ, ಶ್ವಶುರನ ಮರಣದಲ್ಲಿಯೂ ತ್ರಿರಾತ್ರಾಶೌಚವು ಇರುವುದು. ತನ್ನ ಗೋತ್ರಜನ ಮರಣದಲ್ಲಿ ಕೂಡಲೇ ಆಶೌಚ ನಿವೃತ್ತಿಯು ಹೇಳಲ್ಪಟ್ಟಿದೆ.

೩೦ ವಿಪ್ರನು ಹತ್ತು ದಿನಗಳಲ್ಲಿ ಆಶೌಚದಿಂದ ಶುದ್ಧನಾಗುವನು. ಮತ್ತು ರಾಜನು ಹನ್ನೆರಡು ದಿನಗಳಲ್ಲಿಯೂ ವೈಶ್ಯನು ಹದಿನೈದು ದಿನಗಳಲ್ಲಿಯೂ ಶೂದ್ರನು ಒಂದು ತಿಂಗಳಲ್ಲಿಯೂ ಶುದ್ಧಿಯನ್ನು ಹೊಂದುವರು.

ಕ್ಷತ್ರವಿಟ್ಶೂದ್ರದಾಯಾದಾ ಯೇ ಸ್ಯುರ್ವಿಪ್ರಸ್ಯ ಬಾಂಧವಾಃ ।
ತೇಷಾಮಶೌಚೇ ವಿಪ್ರಸ್ಯ ದಶಾಹಾಚ್ಛುದ್ಧಿರಿಷ್ಯತೇ ॥ ೩೧ ॥

ರಾಜನ್ಯವೈಶ್ಯಾವಪ್ಯೇವಂ ಹೀನವರ್ಣಾಸು ಯೋನಿಷು ।
ತಮೇವ ಶೌಚಂ ಕುರ್ಯಾತಾಂ ವಿಶುದ್ಧ್ಯರ್ಥಮಸಂಶಯಮ್॥ ೩೨ ॥

ಸರ್ವೇ ತೂತ್ತರವರ್ಣಾನಾಮಶೌಚಂ ಕುರ್ಯುರಾದೃತಾಃ ।
ತದ್ವರ್ಣವಿಧಿದೃಷ್ಟೇನ ಸ್ವಂ ತು ಶೌಚಂ ಸ್ವಯೋನಿಷು ॥ ೩೩ ॥

ಷಡ್ರಾತ್ರಂ ತು ತ್ರಿರಾತ್ರಂ ಸ್ಯಾದೇಕರಾತ್ರಂ ಕ್ರಮೇಣ ತು ।
ವೈಶ್ಯಕ್ಷತ್ರಿಯವಿಪ್ರಾಣಾಂ ಶೂದ್ರೇಷ್ವಾಶೌಚಮೇವ ಚ ॥ ೩೪ ॥

---

೩೧. ಕ್ಷತ್ರಿಯ, ವೈಶ್ಯ, ಶೂದ್ರ ದಾಯಾದರಾದವರು ವಿಪ್ರನಿಗೆ ಬಂಧುಗಳಾಗಿದ್ದರೆ ಅವರ ಆಶೌಚದಲ್ಲಿ ವಿಪ್ರನಿಗೆ ಹತ್ತು ದಿನಗಳಲ್ಲಿ ಶುದ್ಧಿ ಉಂಟಾಗುವುದೆಂದು ಶಾಸ್ತ್ರ ಸಮ್ಮತವು.

೩೨. ಕ್ಷತ್ರಿಯ ಮತ್ತು ವೈಶ್ಯರು ಅಧಮ ವರ್ಣದ ಯೋನಿ ಸಂಬಂಧದಲ್ಲಿ ಹೀಗೆಯೇ ಸ್ವಜಾತಿಗೆ ವಿಹಿತವಾದ ಆಶೌಚವನ್ನು ನಿಸ್ಸಂಶಯವಾಗಿ ಶುದ್ಧಿಗೋಸ್ಕರ ಆಚರಿಸಬೇಕು.

೩೩. ಸಮಸ್ತ ಜನರೂ ಪ್ರಶಸ್ತ ವರ್ಣದವರಿಗೆ ಆಶೌಚವನ್ನು ಆದರದಿಂದ ಆಚರಿಸಬೇಕು. ಆಯಾಯ ವರ್ಣಗಳ ವಿಧಾನದ ದೃಷ್ಟಿಯಿಂದ ಸಮಯೋನಿ ಸಂಬಂಧದಲ್ಲಿ ಆಶೌಚವು ಆಚರಿಸಲ್ಪಡಬೇಕು.

೩೪. ಶೂದ್ರ ವಿಷಯದಲ್ಲಿ ವೈಶ್ಯ ಕ್ಷತ್ರಿಯ ಮತ್ತು ವಿಪ್ರರಿಗೆ ಕ್ರಮವಾಗಿ ಆರು ದಿನ ಮೂರು ದಿನ ಮತ್ತು ಒಂದು ದಿನ ಮಾತ್ರ ಆಶೌಚಾನುಷ್ಠಾನವು ವಿಹಿತವಾಗಿದೆ.

ಅರ್ಧಮಾಸೋಽಥ ಷಡ್ರಾತ್ರಂ ತ್ರಿರಾತ್ರಂ ದ್ವಿಜಪುಂಗವಾಃ ।
ಶೂದ್ರಕ್ಷತ್ರಿಯವಿಪ್ರಾಣಾಂ ವೈಶ್ಯಸ್ಯಾಶೌಚಮೇವ ಚ ॥ ೩೫ ॥

ಷಡ್ರಾತ್ರಂ ವೈ ದಶಾಹಂ ಚ ವಿಪ್ರಾಣಾಂ ವೈಶ್ಯಶೂದ್ರಯೋಃ ।
ಆಶೌಚಂ ಕ್ಷತ್ರಿಯೇ ಪ್ರೋಕ್ತಂ ಕ್ರಮೇಣ ದ್ವಿಜಪುಂಗವಾಃ ॥ ೩೬ ॥

ಶೂದ್ರವಿಟ್‌ಕ್ಷತ್ರಿಯಾಣಾಂ ತು ಬ್ರಾಹ್ಮಣಸ್ಯ ತಥೈವ ಚ ।
ದಶರಾತ್ರೇಣ ಶುದ್ಧಿಃ ಸ್ಯಾದಿತ್ಯಾಹ ಕಮಲಾಪತಿಃ ॥ ೩೭ ॥

ಅಸಪಿಂಡಂ ದ್ವಿಜಂ ಪ್ರೇತಂ ವಿಪ್ರೋ ನಿರ್ಹೃತ್ಯ ಬಂಧುವತ್ ।
ಅಶಿತ್ವಾ ಚ ಸಹೋಷಿತ್ವಾ ದಶರಾತ್ರೇಣ ಶುಧ್ಯತಿ ॥ ೩೮ ॥

ಯದ್ಯನ್ನಮತ್ತಿ ತೇಷಾಂ ತು ತ್ರಿರಾತ್ರೇಣ ತತಃ ಶುಚಿಃ ।
ಅನ್ನದಂಸ್ತ್ವನ್ನಮಹ್ನಾ ತು ನ ಚ ತಸ್ಮಿನ್ ಗೃಹೇ ವಸೇತ್ ॥ ೩೯ ॥

---

೩೫. ದ್ವಿಜೋತ್ತಮರೇ ! ಶೂದ್ರ ಕ್ಷತ್ರಿಯ ಮತ್ತು ವಿಪ್ರರಿಗೆ ವೈಶ್ಯನ ಮರಣ ನಿಮಿತ್ತದಲ್ಲಿ ಹದಿನೈದುದಿನ, ಆರುದಿನ ಅಥವಾ ಮೂರು ದಿನಗಳ ವರೆಗೆ ಆಶೌಚಾನುಷ್ಠಾನವು ವಿಧಿಸಲ್ಪಟ್ಟಿದೆ.

೩೬. ದ್ವಿಜಶ್ರೇಷ್ಠರೇ ! ಕ್ಷತ್ರಿಯನ ವಿಷಯದಲ್ಲಿ ವಿಪ್ರರಿಗೆ ಆರು ದಿನಗಳೂ ವೈಶ್ಯ ಮತ್ತು ಶೂದ್ರರಿಗೆ ಹತ್ತು ದಿನಗಳೂ ಕ್ರಮವಾಗಿ ಆಶೌಚವು ಇರುವುದು.

೩೭. ಬ್ರಾಹ್ಮಣನ ವಿಷಯವಾದ ಆಶೌಚದಿಂದ ಶೂದ್ರ ವೈಶ್ಯ ಮತ್ತು ಕ್ಷತ್ರಿಯರಿಗೆ ಹತ್ತು ದಿನಗಳಲ್ಲಿ ಶುದ್ಧಿಯಾಗುವುದೆಂದು ವಿಷ್ಣುವು ಹೇಳಿರುವನು.

೩೮. ಅಸಪಿಂಡನಾದ ದ್ವಿಜನು ಮರಣ ಹೊಂದಿದರೆ ಬಂಧುವಿನಂತೆ ಅಶನ ವಸನಗಳಲ್ಲಿ ಸಹಚರನಾಗಿದ್ದ ವಿಪ್ರನು ಸಂಸ್ಕಾರಮಾಡಿ ಹತ್ತು ದಿನಗಳಲ್ಲಿ ಶುದ್ಧಿ ಹೊಂದುವನು.

೩೯. ಅವನ ಅನ್ನವನ್ನು ಊಟಮಾಡಿರುವುದಾದರೆ ಅಂತಹವನ ಮರಣ ಆಶೌಚದಿಂದ ಮೂರು ದಿನಗಳಲ್ಲಿ ಪವಿತ್ರನಾಗುವನು. ಅನ್ನದಾನ ಮಾಡಿದವನು ಆ ಗೃಹದಲ್ಲಿ ವಾಸಮಾಡದೆ ಒಂದು ದಿನದಲ್ಲಿ ಶುದ್ಧಿ ಹೊಂದುವನು.

ಸೋದಕೋಽಥ ತದೇವ ಸ್ಯಾನ್ಮಾತುರಾಪ್ತೇಷು ಬಂಧುಷು ।
ದಶಾಹೇನ ಶವಸ್ಪರ್ಶೀ ಸಪಿಂಡಶ್ಚೈವ ಶುಧ್ಯತಿ ॥ ೪೦ ॥

ಯದಿ ನಿರ್ಹರತಿ ಪ್ರೇತಂ ಲೋಭಾದಾಕ್ರಾಂತಮಾನಸಃ ।
ದಶಾಹೇನ ದ್ವಿಜಃ ಶುಧ್ಯೇದ್ದ್ವಾದಶಾಹೇನ ಭೂಮಿಪಃ ॥ ೪೧ ॥

ಅರ್ಧಮಾಸೇನ ವೈಶ್ಯಸ್ತು ಶೂದ್ರೋ ಮಾಸೇನ ಶುಧ್ಯತಿ ।
ಷಡ್ರಾತ್ರೇಣಾಥ ವಾ ಸರ್ವೇ ತ್ರಿರಾತ್ರೇಣಾಥ ವಾ ಪುನಃ ॥ ೪೨ ॥

ಅನಾಥಂ ಚೈವ ನಿರ್ಹೃತ್ಯ ಬ್ರಾಹ್ಮಣಂ ಧನವರ್ಜಿತಮ್ ।
ಸ್ನಾತ್ವಾ ಸಂಪ್ರಾಶ್ಯ ಚ ಘೃತಂ ಶುಧ್ಯಂತಿ ಬ್ರಾಹ್ಮಣಾದಯಃ ॥ ೪೩ ॥

---

೪೦. ಹಾಗೆಯೇ ಸೋದಕ ಮತ್ತು ಜನನಿಗೆ ಆಪ್ತರಾದ ಬಂಧುಗಳ ವಿಷಯದಲ್ಲಿಯೂ ಒಂದು ದಿನದಿಂದ ಶುದ್ಧಿಯಾಗುವುದು. ಸಪಿಂಡ ಮತ್ತು ಶವವನ್ನು ಸ್ಪರ್ಶಿಸಿದವನು ಹತ್ತು ದಿನಗಳ ನಂತರ ಶುದ್ಧಿ ಹೊಂದುವನು.

೪೧. ಲೋಭಕ್ಕೆ ವಶವಾದ ಮಾನಸವುಳ್ಳ ವಿಪ್ರನು ಪ್ರೇತವನ್ನು ವಹನ ಮಾಡಿದರೆ ದಶಾಹದಿಂದ ಶುದ್ಧಿ ಹೊಂದುವನು. ಹಾಗೂ ಕ್ಷತ್ರಿಯನಿಗೆ ಹನ್ನೆರಡು ದಿನಗಳಲ್ಲಿ ಶುದ್ಧಿಯಾಗುವುದು.

೪೨. ವೈಶ್ಯನು ಹದಿನೈದು ದಿನಗಳಲ್ಲಿಯೂ ಶೂದ್ರನು ಒಂದು ಮಾಸದಲ್ಲಿಯೂ ಶುದ್ಧಿ ಹೊಂದುವನು. ಅಥವಾ ವಿಪ್ರಾದಿಗಳೆಲ್ಲರೂ ಆರು ದಿನ ಅಥವಾ ಮೂರು ದಿನಗಳಲ್ಲಿಯೇ ಶುದ್ಧಿ ಹೊಂದುವರೆಂದು ಒಂದು ಪಕ್ಷವಿರುವುದು.

೪೩. ವಿಪ್ರನೇ ಮುಂತಾದವರು ಅನಾಥನೂ ಧನರಹಿತನೂ ಆದ ಮೃತನಾದ ಬ್ರಾಹ್ಮಣನನ್ನು ವಹನಮಾಡಿ ಸ್ನಾನ ಮತ್ತು ಘೃತಪ್ರಾಶನಗಳಿಂದ ಶುದ್ಧಿಯನ್ನು ಹೊಂದುತ್ತಾರೆ.

ಅಪರಶ್ಚೇತ್ಪರಂ ವರ್ಣಮಪರಂ ಚಾಪರೇ ಯದಿ ।
ಅಶೌಚೇ ಸಂಸ್ಪೃಶೇತ್ ಸ್ನೇಹಾತ್ ತದಾಶೌಚೇನ ಶುದ್ಧ್ಯತಿ ॥ ೪೪ ॥

ಪ್ರೇತೀಭೂತಂ ದ್ವಿಜಂ ವಿಪ್ರೋ ಹ್ಯನುಗಚ್ಛೇತ ಕಾಮತಃ ।
ಸ್ನಾತ್ವಾ ಸಚೈಲಂ ಸ್ಪೃಷ್ಟ್ವಾಗ್ನಿಂ ಘೃತಂ ಪ್ರಾಶ್ಯ ವಿಶುದ್ಧ್ಯತಿ ॥ ೪೫ ॥

ಏಕಾಹಾತ್ ಕ್ಷತ್ರಿಯೇ ಶುದ್ಧಿರ್ವೈಶ್ಯೇ ಸ್ಯಾಚ್ಚ ದ್ವ್ಯಹೇನ ತು ।
ಶೂದ್ರೇ ದಿನತ್ರಯಂ ಪ್ರೋಕ್ತಂ ಪ್ರಾಣಾಯಾಮಶತಂ ಪುನಃ ॥ ೪೬ ॥

ಅನಸ್ಥಿಸಂಚಿತೇ ಶೂದ್ರೇ ರೌತಿ ಚೇದ್ಬ್ರಾಹ್ಮಣಃ ಸ್ವಕೈಃ ।
ತ್ರಿರಾತ್ರಂ ಸ್ಯಾತ್ತಥಾ ಶೌಚಮೇಕಾಹಂ ತ್ವನ್ಯಥಾ ಸ್ಮೃತಮ್ ॥ ೪೭ ॥

---

೪೪. ಅಧಮ ವರ್ಣದವನು ಉತ್ತಮ ವರ್ಣದವನನ್ನೂ ಅಥವಾ ಅಧಮ ವರ್ಣದವನು ಅಧಮ ವರ್ಣದವನನ್ನೂ ಅಶೌಚ ಸಮಯದಲ್ಲಿ ಸ್ನೇಹದಿಂದ ಸ್ಪರ್ಶ ಮಾಡಿದರೆ ಆಗ ಆಶೌಚಾನುಷ್ಠಾನದಿಂದ ಶುದ್ಧಿಯಾಗುವುದು.

೪೫. ವಿಪ್ರನು ಪ್ರೇತನಾದ ದ್ವಿಜನನ್ನು ತನ್ನ ಇಷ್ಟದಿಂದ ಹಿಂಬಾಲಿಸಿ ಹೋಗುವುದಾದರೆ ಸಚೈಲಸ್ನಾನ ಅಗ್ನಿಸ್ಪರ್ಶ ಮತ್ತು ಘೃತಪ್ರಾಶನಗಳಿಂದ ಶುದ್ಧಿಯನ್ನು ಹೊಂದುತ್ತಾನೆ.

೪೬. ಹಾಗೂ ಕ್ಷತ್ರಿಯನಲ್ಲಿ ಒಂದು ದಿನದಲ್ಲಿ ಶುದ್ಧಿಯೂ ವೈಶ್ಯನಲ್ಲಿ ಎರಡು ದಿನಗಳಲ್ಲಿ ಶುದ್ಧಿಯೂ ಮತ್ತು ಶೂದ್ರನಲ್ಲಿ ಮೂರು ದಿನಗಳಲ್ಲಿ ಶುದ್ಧಿಯೂ ಉಂಟಾಗುವುದು. ಮತ್ತು ಒಂದು ನೂರು ಪ್ರಾಣಾಯಾಮಗಳು ಕರ್ತವ್ಯವಾಗಿ ವಿಧಿಸಲ್ಪಟ್ಟಿವೆ.

೪೭. ಶೂದ್ರನ ಅಸ್ಥಿಸಂಚಯನವಾಗುವ ಮುಂಚೆ ದ್ವಿಜನು ಸ್ವಜನರೊಂದಿಗೆ ವಿಲಪಿಸುವುದಾದರೆ ಅವನಿಗೆ ತ್ರಿರಾತ್ರಾ ಶೌಚವೂ ಹಾಗಿಲ್ಲದಿದ್ದರೆ ಏಕಾಹಾಶೌಚವೂ ಸ್ಮರಿಸಲ್ಪಟ್ಟಿದೆ.

ಅಸ್ಥಿಸಂಚಯನಾದರ್ವಾಗೇಕಾಹಃ ಕ್ಷತ್ರವೈಶ್ಯಯೋಃ ।
ಅನ್ಯಥಾ ಚೈವ ಸಜ್ಯೋತಿರ್ಬ್ರಾಹ್ಮಣೇ ಸ್ನಾನಮೇವ ತು ॥ ೪೮ ॥

ಅನಸ್ಥಿಸಂಚಿತೇ ವಿಪ್ರೇ ಬ್ರಾಹ್ಮಣೋ ರೌತಿ ಚೇತ್ತದಾ ।
ಸ್ನಾನೇನೈವ ಭವೇಚ್ಛುದ್ಧಿಃ ಸಚೈಲೇನಾತ್ರ ಸಂಶಯಃ ॥ ೪೯ ॥

ಯಸ್ತೈಃ ಸಹಾಶನಂ ಕುರ್ಯಾಚ್ಛಯನಾದೀನಿ ಚೈವ ಹಿ ।
ಬಾಂಧವೋ ವಾಪರೋ ವಾಪಿ ಸ ದಶಾಹೇನ ಶುಧ್ಯತಿ ॥ ೫೦ ॥

ಯಸ್ತೇಷಾಂ ಸಮಮಶ್ನಾತಿ ಸಕೃದೇವಾಪಿ ಕಾಮತಃ ।
ತದಾಶೌಚೇ ನಿವೃತ್ತೇಽಸೌ ಸ್ನಾನಂ ಕೃತ್ವಾ ವಿಶುಧ್ಯತಿ ॥ ೫೧ ॥

---

೪೮. ಅಸ್ಥಿಸಂಚಯನಕ್ಕೆ ಪೂರ್ವದಲ್ಲಿ ಕ್ಷತ್ರಿಯ ವೈಶ್ಯರಿಗೆ ಏಕಾಹಾಶೌಚವೂ ವಿಲಾಪವಿಲ್ಲದಿದ್ದರೆ ಅರ್ಧದಿನವೂ ಬ್ರಾಹ್ಮಣನಿಗೆ ಸ್ನಾನಮಾತ್ರವೂ ಕರ್ತವ್ಯವಾಗಿರುವುದು.

೪೯. ವಿಪ್ರನಿಗೆ ಅಸ್ಥಿಸಂಚಯನವಾಗುವ ಮುಂಚೆ ಬ್ರಾಹ್ಮಣನು ವಿಲಾಪ ಮಾಡುವುದಾದರೆ ಅವನಿಗೆ ಸಚೈಲಸ್ನಾನಮಾತ್ರದಿಂದ ಶುದ್ಧಿಯಾಗುವುದು. ಈ ವಿಷಯದಲ್ಲಿ ಸಂದೇಹವಿಲ್ಲ.

೫೦. ಯಾವನು ಆಶೌಚವಂತರೊಡನೆ ಭೋಜನ ಶಯನಾದಿಗಳನ್ನು ಮಾಡುವನೋ ಅವನು ಬಂಧುವಾಗಲೀ ಬಂಧುವಾಗದಿರಲೀ ದಶಾಹಾನಂತರದಲ್ಲಿ ಶುದ್ಧನಾಗುವನು.

೫೧. ಯಾವನು ತನ್ನ ಇಷ್ಟದಿಂದ ಒಂದು ಸಲವಾದರೂ ಆಶೌಚವಂತರೊಡನೆ ಭೋಜನಮಾಡುವನೋ ಅವನು ಆ ಆಶೌಚವು ನಿವೃತ್ತವಾದನಂತರ ಸ್ನಾನವನ್ನು ಮಾಡಿ ಶುದ್ಧನಾಗಬೇಕು.

ಯಾವತ್ತದನ್ನಮಶ್ನಾತಿ ದುರ್ಭಿಕ್ಷಾಭಿಹತೋ ನರಃ ।
ತಾವಂತ್ಯಹಾನ್ಯಶೌಚಂ ಸ್ಯಾತ್ ಪ್ರಾಯಶ್ಚಿತ್ತಂ ತತಶ್ಚರೇತ್ ॥ ೫೨ ॥

ದಾಹಾದ್ಯಶೌಚಂ ಕರ್ತವ್ಯಂ ದ್ವಿಜಾನಾಮಗ್ನಿಹೋತ್ರಿಣಾಮ್ ।
ಸಪಿಂಡಾನಾಂ ಚ ಮರಣೇ ಮರಣಾದಿತರೇಷು ಚ ॥ ೫೩ ॥

ಸಪಿಂಡತಾ ಚ ಪುರುಷೇ ಸಪ್ತಮೇ ವಿನಿವರ್ತತೇ ।
ಸಮಾನೋದಕಭಾವಸ್ತು ಜನ್ಮನಾಮ್ನೋರವೇದನೇ ॥ ೫೪ ॥

ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಃ ।
ಲೇಪಭಾಜಸ್ತ್ರಯೋ ಜ್ಞೇಯಾಃ ಸಾಪಿಂಡ್ಯಂ ಸಪ್ತಪೂರುಷಮ್ ॥ ೫೫ ॥

---

೫೨. ದುರ್ಭಿಕ್ಷದಿಂದ ಪೀಡಿತನಾದ ಮನುಷ್ಯನು ಎಷ್ಟುದಿನ ಅವನ ಅನ್ನವನ್ನೇ ಭುಂಜಿಸುವನೋ ಅಷ್ಟು ದಿನಗಳ ವರೆಗೆ ಅಶೌಚದಿಂದಿದ್ದು ತರುವಾಯ ಪ್ರಾಯಶ್ಚಿತ್ತವನ್ನು ಆಚರಿಸಬೇಕು.

೫೩. ಅಗ್ನಿಹೋತ್ರವನ್ನು ಆಚರಿಸುವ ಸಪಿಂಡರಾದ ದ್ವಿಜರ ಮರಣ ಸಮಯದಲ್ಲಿ ದಾಹ ಮೊದಲುಗೊಂಡು ಅಶೌಚವು ಕರ್ತವ್ಯವೆಂದು ವಿಹಿತವಾಗಿದೆ.

೫೪. ಮರಣ ಮತ್ತು ಇತರ ವಿಷಯಗಳಲ್ಲಿ ಏಳು ಪುರುಷವ್ಯಕ್ತಿಗಳ ಕಡೆಯಲ್ಲಿ ಸಪಿಂಡತ್ವವು ನಿವೃತ್ತಿಯಾಗುವುದು. ಮತ್ತು ಸಮಾನೋದಕತ್ವವು ಜನ್ಮನಾಮಧೇಯಗಳು ತಿಳಿಯದಂತಾಗುವುದರಿಂದ ನಿವೃತ್ತಿಯಾಗುವುದು.

೫೫. ಪಿತೃ ಪಿತಾಮಹ ಮತ್ತು ಪ್ರಪಿತಾಮಹರೆಂಬ ಮೂವರು ಲೇಪಭಾಗಿಗಳೆಂದು ತಿಳಿಯಲ್ಪಡಬೇಕು. ಸಪಿಂಡತ್ವವು ಸಪ್ತಪುರುಷರವರೆಗೆ ಅನುವರ್ತಿಸಿಕೊಂಡಿರುವುದು.

ಅಪ್ರತ್ತಾನಾಂ ತಥಾ ಸ್ತ್ರೀಣಾಂ ಸಾಪಿಂಡ್ಯಂ ಸಪ್ತಪೌರುಷಮ್ ।
ತಾಸಾಂ ತು ಭರ್ತೃಸಾಪಿಂಡ್ಯಂ ಪ್ರಾಹ ದೇವಃ ಸನಾತನಃ ॥ ೫೬ ॥

ಯೇ ಚೈಕಜಾತಾ ಬಹವೋ ಭಿನ್ನಯೋನಯ ಏವ ಚ ।
ಭಿನ್ನವರ್ಣಾಸ್ತು ಸಾಪಿಂಡ್ಯಂ ಭವೇತ್ತೇಷಾಂ ತ್ರಿಪೂರುಷಮ್ ॥ ೫೭ ॥

ಕಾರವಃ ಶಿಲ್ಪಿನೋ ವೈದ್ಯಾ ದಾಸೀದಾಸಾಸ್ತಥೈವ ಚ ।
ದಾತಾರೋ ನಿಯಮಾಚ್ಚೈವ ಬ್ರಹ್ಮವಿದ್ಬ್ರಹ್ಮಚಾರಿಣಾ ।
ಸತ್ರಿಣೋ ವ್ರತಿನಸ್ತಾವತ್ ಸದ್ಯಃ ಶೌಚಮುದಾಹೃತಮ್ ॥ ೫೮ ॥

ರಾಜಾ ಚೈವಾಭಿಷಿಕ್ತಶ್ಚ ಅನ್ನಸತ್ರಿಣ ಏವ ಚ ।
ಯಜ್ಞೇ ವಿವಾಹಕಾಲೇ ಚ ದೈವಯೋಗೇ ತಥೈವ ಚ ।
ಸದ್ಯಃ ಶೌಚಂ ಸಮಾಖ್ಯಾತಂ ದುರ್ಭಿಕ್ಷೇ ಚಾಪ್ಯುಪಪ್ಲವೇ ॥ ೫೯ ॥

---

೫೬. ವಿವಾಹವಾಗದಿರುವ ಸ್ತ್ರೀಯರಿಗೆ ಸಪ್ತ ಪುರುಷರವರೆಗೆ ಸಪಿಂಡತ್ವವು ಇರುವುದು. ಬ್ರಹ್ಮದೇವನು ಸ್ತ್ರೀಯರಿಗೆ ಭರ್ತೃವಿನ ಸಪಿಂಡತ್ವವನ್ನು ಹೇಳಿರುವನು.

೫೭. ಯಾವ ಅನೇಕ ಮಂದಿ ವ್ಯಕ್ತಿಗಳು ಒಬ್ಬನಿಂದ ಬೇರೆ ಬೇರೆ ವರ್ಣಗಳ ಯೋನಿಗಳಲ್ಲಿ ಜನ್ಮವೆತ್ತಿರುವರೋ ಅವರಿಗೆ ಸಪಿಂಡತ್ವವು ತ್ರಿಪುರುಷರವರೆಗೆ ಅನುವರ್ತಿಸಿರುವುದು.

೫೮. ರಜಕ ಶಿಲ್ಪಿ ವೈದ್ಯ ದಾಸಿ ದಾಸ ದಾತೃ ಬ್ರಹ್ಮಜ್ಞ ಬ್ರಹ್ಮಚಾರಿ ಸತ್ರಯಾಗ ಮಾಡುವವನು ವ್ರತಧಾರಿ ಇವರ ವಿಷಯದಲ್ಲಿ ಕೂಡಲೇ ಆಶೌಚ ನಿವೃತ್ತಿಯು ಉದಾಹರಿಸಲ್ಪಟ್ಟಿದೆ.

೫೯. ಯಜ್ಞ, ವಿವಾಹ ಮತ್ತು ದೇವತೋತ್ಸವಾದಿ ಕರ್ಮ ಇವುಗಳ ಸಮಯದಲ್ಲಿಯೂ ದುರ್ಭಿಕ್ಷಾದಿ ಉಪದ್ರವ ಸಮಯದಲ್ಲಿಯೂ ಪಟ್ಟಾಭಿಷೇಕಹೊಂದಿದ ರಾಜ ಮತ್ತು ಅನ್ನಸತ್ರವನ್ನಿಟ್ಟವ ಇವರ ವಿಷಯದಲ್ಲಿಯೂ ಅಶೌಚವು ಕೂಡಲೇ ನಿವೃತ್ತವಾಗುವುವೆಂದು ಹೇಳಲ್ಪಟ್ಟಿದೆ.

ಡಿಂಬಾಹವಹತಾನಾಂ ಚ ಸರ್ಪಾದಿಮರಣೇಽಪಿ ಚ ।
ಸದ್ಯಃ ಶೌಚಂ ಸಮಾಖ್ಯಾತಂ ಸ್ವಜ್ಞಾತಿಮರಣೇ ತಥಾ ॥ ೬೦ ॥

ಅಗ್ನಿಮರುತ್ಪ್ರಪತನೇ ವೀರಾಧ್ವನ್ಯಪ್ಯನಾಶಕೇ ।
ಗೋಬ್ರಾಹ್ಮಣಾರ್ಥೇ ಸನ್ನ್ಯಸ್ತೇ ಸದ್ಯಃ ಶೌಚಂ ವಿಧೀಯತೇ ॥ ೬೧ ॥

ನೈಷ್ಠಿಕಾನಾಂ ವನಸ್ಥಾನಾಂ ಯತೀನಾಂ ಬ್ರಹ್ಮಚಾರಿಣಾಮ್ ।
ನಾಶೌಚಂ ಕೀರ್ತ್ಯತೇ ಸದ್ಭಿಃ ಪತಿತೇ ಚ ತಥಾ ಮೃತೇ ॥ ೬೨ ॥

ಪತಿತಾನಾಂ ನ ದಾಹಃ ಸ್ಯಾನ್ನಾಂತ್ಯೇಷ್ಟಿರ್ನಾಸ್ಥಿಸಂಚಯಃ ।
ನಾಶ್ರುಪಾತೋ ನ ಪಿಂಡೋ ವಾ ಕಾರ್ಯಂ ಶ್ರಾದ್ಧಾದಿಕಂ ಕ್ವಚಿತ್ ॥

---

೬೦. ಕೋಲಾಹಲಸಂಗ್ರಾಮಗಳಿಂದ, ಸರ್ಪ ಮುಂತಾದುವುಗಳ ದಂಶನದಿಂದ ಮರಣಹೊಂದಿದವರಲ್ಲಿ ಕೂಡಲೇ ಅಶೌಚವು ನಿವೃತ್ತಿಯಾಗುವುದೆಂದು ವಿಧಿಸಲ್ಪಟ್ಟಿದೆ. ತನ್ನ ಜ್ಞಾತಿಮರಣದಲ್ಲಿಯೂ ಹಾಗೆಯೇ ಅಶೌಚನಿವೃತ್ತಿಯಾಗುವುದು.

೬೧. ಮತ್ತು ಅಗ್ನಿ ವಾಯು, ಪತನ ಸಂಗ್ರಾಮ ಉಪವಾಸವ್ರತ ಗೋಬ್ರಾಹ್ಮಣರಿಗಾಗಿ ದುಡಿಯುವುದು ಮತ್ತು ಸನ್ಯಾಸ ಈ ನಿಮಿತ್ತಗಳಿಂದ ಮರಣವಾದರೆ ಸದ್ಯಃ ಶೌಚವು ವಿಧಿಸಲ್ಪಟ್ಟಿದೆ.

೬೨. ನೈಷ್ಠಿಕರಾದ ಬ್ರಹ್ಮಚಾರಿಗಳು ವಾನಪ್ರಸ್ಥಾಶ್ರಮಿಗಳು ಯತಿಗಳು ಮತ್ತು ಬ್ರಹ್ಮಚಾರಿಗಳಿಗೆ ಅಶೌಚಾನುಷ್ಠಾನವು ಇಲ್ಲವೆಂದು ಸಾಧುಗಳಿಂದ ಕೀರ್ತಿಸಲ್ಪಟ್ಟಿದೆ. ಹಾಗೆ ಪತಿತನ ಮರಣದಲ್ಲಿಯೂ ಅಶೌಚವಿಲ್ಲ.

೬೩. ಪತಿತರಾದ ಜನರಿಗೆ ದಹನ ಅಂತ್ಯೇಷ್ಟಿ ಅಸ್ಥಿಸಂಚಯನ ಅಶ್ರುಪತನ ಮತ್ತು ಪಿಂಡದಾನಗಳು ಕರ್ತವ್ಯವಾಗಿರುವುದಿಲ್ಲ ಮತ್ತು ಅವರಿಗೆ ಎಲ್ಲಾದರೂ ಶ್ರಾದ್ಧಕರ್ಮವು ಕರ್ತವ್ಯವಾಗಿಲ್ಲ.

ನ್ಯಾಪಾದಯೇತ್ತಥಾತ್ಮಾನಂ ಸ್ವಯಂ ಯೋಽಗ್ನಿವಿಷಾದಿಭಿಃ ।
ವಿಹಿತಂ ತಸ್ಯ ನಾಶೌಚಂ ನಾಗ್ನಿರ್ನಾಪ್ಯುದಕಾದಿಕಮ್ ॥ ೬೪ ॥

ಅಥ ಕಿಂಚಿತ್ಪ್ರಮಾದೇನ ಮ್ರಿಯತೇಽಗ್ನಿವಿಷಾದಿಭಿಃ ।
ತಸ್ಯಾಶೌಚಂ ವಿಧಾತವ್ಯಂ ಕಾರ್ಯಂ ಚೈವೋದಕಾದಿಕಮ್ ॥ ೬೫ ॥

ಜಾತೇ ಕುಮಾರೇ ತದಹಃ ಕಾಮಂ ಕುರ್ಯಾತ್ ಪ್ರತಿಗ್ರಹಮ್ ।
ಹಿರಣ್ಯಧಾನ್ಯಗೋವಾಸಸ್ತಿಲಾಂಶ್ಚ ಗುಡಸರ್ಪಿಷಾ ॥ ೬೬ ॥

ಫಲಾನಿ ಪುಷ್ಪಂ ಶಾಕಂ ಚ ಲವಣಂ ಕಾಷ್ಠಮೇವ ಚ ।
ತಕ್ರಂ ದಧಿ ಘೃತಂ ತೈಲಮೌಷಧಂ ಕ್ಷೀರಮೇವ ಚ ।
ಅಶೌಚಿನೋ ಗೃಹಾದ್ಗ್ರಾಹ್ಯಂ ಶುಷ್ಕಾನ್ನಂ ಚೈವ ನಿತ್ಯಶಃ ॥ ೬೭ ॥

ಆಹಿತಾಗ್ನಿರ್ಯಥಾನ್ಯಾಯಂ ದಗ್ಧವ್ಯಸ್ತ್ರಿಭಿರಗ್ನಿಭಿಃ ।
ಅನಾಹಿತಾಗ್ನಿರ್ಗೃಹ್ಯೇಣ ಲೌಕಿಕೇನೇತರೋ ಜನಃ ॥ ೬೮ ॥

---

೬೪. ಅಗ್ನಿ ಪರ್ವತ ವಿಷ ಮುಂತಾದುವುಗಳಿಂದ ಆತ್ಮಹತ್ಯವನ್ನು ಮಾಡಿಕೊಂಡವನವಿಷಯದಲ್ಲಿ ಆಶೌಚ ದಹನ ಮತ್ತು ಉದಕಾದಿ ಕರ್ಮಗಳು ವಿಹಿತವಾಗಿಲ್ಲ.

೬೫. ಒಂದುವೇಳೆ ಪ್ರಮಾದದಿಂದ ಅಗ್ನಿ ವಿಷ ಮುಂತಾದುವುಗಳಿಂದ ಮರಣವು ಸಂಭವಿಸಿದರೆ ಅವನಿಗೆ ಆಶೌಚ ಉದಕಾದಿ ಕ್ರಿಯೆಗಳು ಕ್ರಮವಾಗಿ ಮಾಡಲ್ಪಡಬೇಕು.

೬೬. ಪುತ್ರನು ಜನಿಸಿದರೆ ಆ ದಿನದಲ್ಲಿ ಸುವರ್ಣ ಧಾನ್ಯ ಗೋವು ವಸ್ತ್ರ ಮತ್ತು ಗುಡಆಜ್ಯಗಳಿಂದ ಕೂಡಿದ ತಿಲಗಳ ಪ್ರತಿಗ್ರಹವನ್ನು ಯಥೇಷ್ಟವಾಗಿ ಮಾಡಬಹುದು.

೬೭. ಮತ್ತು ಆಶೌಚ ಉಳ್ಳ ಮಾನವನ ಗೃಹದಿಂದ ಫಲ ಪುಷ್ಪ ಶಾಕ ಲವಣ ಕಾಷ್ಠ ತಕ್ರ ದಧಿ ಘೃತ ತೈಲ ಔಷಧ ಕ್ಷೀರ ಮತ್ತು ಶುಷ್ಕವಾದ ಅನ್ನ ವಸ್ತುಗಳನ್ನು ಯಾವಾಗಲೂ ತೆಗೆದುಕೊಳ್ಳಬಹುದು

೬೮. ಅಗ್ನ್ಯಾಧಾನವನ್ನು ಮಾಡಿದ ಮಾನವನಿಗೆ ನ್ಯಾಯಸಮ್ಮತವಾಗಿ ತ್ರೇತಾಗ್ನಿಗಳಿಂದ ದಹನಸಂಸ್ಕಾರಮಾಡಬೇಕು. ಆಹಿತಾಗ್ನಿಯಲ್ಲದವನು ಗೃಹ್ಯಾಗ್ನಿಯಿಂದಲೂ ಗೃಹ್ಯಾಗ್ನಿಧಾರಣವಿಲ್ಲದ ಇತರ ಮನುಷ್ಯನು ಲೌಕಿಕಾಗ್ನಿಯಿಂದಲೂ ದಹನಸಂಸ್ಕಾರಕ್ಕೆ ಅರ್ಹನಾಗುವನು.

ದೇಹಾಭಾವಾತ್ಪಲಾಶೈಸ್ತು ಕೃತ್ವಾ ಪ್ರತಿಕೃತಿಂ ಪುನಃ ।
ದಾಹಃ ಕಾರ್ಯೋ ಯಥಾನ್ಯಾಯಂ ಸಪಿಂಡೈಃ ಶ್ರದ್ಧಯಾನ್ವಿತೈಃ ॥
ಸಕೃತ್ಪ್ರಸಿಂಚೇದುದಕಂ ನಾಮಗೋತ್ರೇಣ ವಾಗ್ಯತಃ ।
ದಶಾಹಂ ಬಾಂಧವಾಃ ಶ್ರಾದ್ಧಂ ಸರ್ವೇ ಚೈವ ಸುಸಂಯತಾಃ ॥ ೭೦ ॥

ಪಿಂಡಂ ಪ್ರತಿದಿನಂ ದದ್ಯುಃ ಸಾಯಂ ಪ್ರಾತರ್ಯಥಾವಿಧಿ ।
ಪ್ರೇತಾಯ ಚ ಗೃಹದ್ವಾರಿ ಚತುರ್ಥೇ ಭೋಜಯೇದ್ದ್ವಿಜಾನ್ ॥೭೧॥
ದ್ವಿತೀಯೇಽಹನಿ ಕರ್ತವ್ಯಂ ಕ್ಷುರಕರ್ಮ ಸಬಾಂಧವೈಃ ।
ಚತುರ್ಥೇ ಬಾಂಧವೈಃ ಸರ್ವೈರಸ್ಥ್ನಾಂ ಸಂಚಯನಂ ಭವೇತ್
ಪೂರ್ವಾನ್ ಪ್ರಯುಂಜಯೇದ್ವಿಪ್ರಾನ್ ಯುಗ್ಮಾನ್ ಸುಶ್ರದ್ಧಯಾ
ಶುಚೀನ್ ॥ ೭೨ ॥

---

೬೯. ಮೃತನ ಶವವು ಸಿಕ್ಕದಿದ್ದರೆ ಪಲಾಶವಿಧಾನದಿಂದ ಅವನ ಪ್ರತಿಕೃತಿಯನ್ನು ಮಾಡಿ ಶ್ರದ್ಧೆಯಿಂದ ಕೂಡಿದ ಸಪಿಂಡ ಜನರು ಅವನಿಗೆ ನ್ಯಾಯ ಸಮ್ಮತವಾದ ದಹನಾದಿ ಸಂಸ್ಕಾರಗಳನ್ನು ಆಚರಿಸಬೇಕು.

೭೦. ಸಪಿಂಡ ಜನರು ಮೌನಧಾರಿಗಳಾಗಿ ನಾಮ-ಗೋತ್ರಗಳನ್ನು ಕೀರ್ತಿಸಿ ಒಂದುಸಲ ಉದಕಾಂಜಲಿಯನ್ನು ಕೊಡಬೇಕು. ಮತ್ತು ಆರ್ದ್ರವಸ್ತ್ರವನ್ನು ಧರಿಸಿದ ಬಂಧುಜನರು ಹತ್ತುದಿನಗಳವರೆಗೆ ಶ್ರಾದ್ಧವನ್ನು ಆಚರಿಸಬೇಕು.

೭೧. ಪ್ರೇತವನ್ನು ಉದ್ದೇಶಿಸಿ ಪ್ರತಿದಿನ ಸಾಯಂಕಾಲ ಪ್ರಾತಃಕಾಲಗಳಲ್ಲಿ ಯಥಾವಿಧಿಯಾಗಿ ಗೃಹದ ದ್ವಾರದಲ್ಲಿ ಪಿಂಡದಾನವನ್ನು ಮಾಡಬೇಕು. ಮತ್ತು ನಾಲ್ಕನೆಯ ದಿನದಲ್ಲಿ ದ್ವಿಜರಿಗೆ ಭೋಜನಮಾಡಿಸಬೇಕು.

೭೨. ಎರಡನೆಯ ದಿವಸದಲ್ಲಿ ಸಮಾನಬಂಧುಗಳು ಕ್ಷೌರಕರ್ಮವನ್ನು ಮಾಡಿಸಬೇಕು ಮತ್ತು ನಾಲ್ಕನೆಯ ದಿವಸದಲ್ಲಿ ಸಮಸ್ತ ಬಂಧುಗಳೂ ಸೇರಿ ಅಸ್ಥಿಸಂಚಯನವನ್ನು ನಡೆಸಬೇಕು. ಜ್ಯೇಷ್ಠರೂ ಸಮಸಂಖ್ಯೆಯುವರೂ ಮತ್ತು ಪವಿತ್ರರೂ ಆದ ವಿಪ್ರರನ್ನು ಆಯಾಯ ಕರ್ಮದಲ್ಲಿ ಶ್ರದ್ಧೆಯಿಂದ ಸೇವಿಸಬೇಕು.

ಪಂಚಮೇ ನವಮೇ ಚೈವ ತಥೈವೈಕಾದಶೇಽಹನಿ ।
ಯುಗ್ಮಾಂಶ್ಚ ಭೋಜಯೇದ್ವಿಪ್ರಾನ್ನವಶ್ರಾದ್ಧಂ ತು ತದ್ದ್ವಿಜಾಃ ॥ ೭೩ ॥

ಏಕಾದಶೇಽಹ್ನಿ ಕುರ್ವೀತ ಪ್ರೇತಮುದ್ದಿಶ್ಯ ಭಾವತಃ ।
ದ್ವಾದಶೇ ವಾಹ್ನಿ ಕರ್ತವ್ಯಂ ನವಮೇಽಪ್ಯಥ ವಾಹನಿ ।
ಏಕಂ ಪವಿತ್ರಮೇಕೋಽರ್ಘ್ಯಃ ಪಿಂಡಪಾತ್ರಂ ತಥೈವ ಚ ॥ ೭೪ ॥

ಏವಂ ಮೃತಾಹ್ನಿ ಕರ್ತವ್ಯಂ ಪ್ರತಿಮಾಸಂ ತು ವತ್ಸರಮ್ ।
ಸಪಿಂಡೀಕರಣಂ ಪ್ರೋಕ್ತಂ ಪೂರ್ಣೇ ಸಂವತ್ಸರೇ ಪುನಃ ॥ ೭೫ ॥

ಕುರ್ಯಾಚ್ಚತ್ವಾರಿ ಪಾತ್ರಾಣಿ ಪ್ರೇತಾದೀನಾಂ ದ್ವಿಜೋತ್ತಮಾಃ ।
ಪ್ರೇತಾರ್ಥೇ ಪಿತೃಪಾತ್ರೇಷು ಪಾತ್ರಮಾಸೇಚಯೇತ್ತತಃ ॥ ೭೬ ॥

---

೭೩. ದ್ವಿಜರೇ! ಪ್ರೇತವನ್ನು ಉದ್ದೇಶಿಸಿ ಐದು ಒಂಭತ್ತು ಮತ್ತು ಹನ್ನೊಂದನೆಯ ದಿನಗಳಲ್ಲಿ ಸಮಸಂಖ್ಯೆಯ ವಿಪ್ರರಿಗೆ ಭೋಜನಮಾಡಿಸಬೇಕು. ಅದು ನವಶ್ರಾದ್ಧವೆಂದು ಸ್ಮರಿಸಲ್ಪಟ್ಟಿದೆ.

೭೪. ಮತ್ತು ಹನ್ನೊಂದು ಹನ್ನೆರಡು ಅಥವಾ ಒಂಭತ್ತನೆಯ ದಿವಸಗಳಲ್ಲಿ ಪ್ರೇತವನ್ನು ಉದ್ದೇಶಿಸಿ ಭಕ್ತಿಯಿಂದ ಶ್ರಾದ್ಧವನ್ನು ಆಚರಿಸಬೇಕು. ಆ ಏಕೋದಿಷ್ಟ ಶ್ರಾದ್ದದಲ್ಲಿ ಪವಿತ್ರ ಅರ್ಘ್ಯಪಾತ್ರ ಮತ್ತು ಪಿಂಡಪಾತ್ರಗಳು ಒಂದೊಂದಾಗಿರಬೇಕು.

೭೫. ಹೀಗೆ ಮೃತದಿನದಲ್ಲಿ ಒಂದು ವರ್ಷವು ಪೂರ್ತಿಯಾಗುವವರೆಗೆ ಪ್ರತಿಯೊಂದು ಮಾಸದಲ್ಲಿ ಮಾಸಿಕ ಶ್ರಾದ್ಧವನ್ನು ಮಾಡಬೇಕು. ಒಂದು ವರ್ಷವು ಪೂರ್ತಿಯಾಗಿ ಕಳೆದ ತರುವಾಯ ಸಪಿಂಡೀಕರಣವು ಕರ್ತವ್ಯವಾಗಿ ವಿಧಿಸಲ್ಪಟ್ಟಿದೆ.

೭೬. ದ್ವಿಜೋತ್ತಮರೇ! ಸಪಿಂಡೀಕರಣದಲ್ಲಿ ಪ್ರೇತ ಮುಂತಾದವರಿಗೆ ನಾಲ್ಕುಪಾತ್ರಗಳನ್ನು ಇರಿಸಬೇಕು. ಪ್ರೇತಕ್ಕೋಸ್ಕರ ಆ ಪ್ರೇತಪಾತ್ರದ ತೀರ್ಥವನ್ನು ಪಿತೃಪಾತ್ರಗಳಲ್ಲಿ ಸೇಚನಮಾಡಬೇಕು.

ಯೇ ಸಮಾನಾ ಇತಿ ದ್ವಾಭ್ಯಾಂ ಪಿಂಡಾನಪ್ಯೇವಮೇವ ಹಿ ।
ಸಪಿಂಡೀಕರಣಶ್ರಾದ್ಧಂ ದೇವಪೂರ್ವಂ ವಿಧೀಯತೇ ॥ ೭೭ ॥

ಪಿತೄನಾವಾಹಯೇತ್ತತ್ರ ಪುನಃ ಪ್ರೇತಂ ವಿನಿರ್ದಿಶೇತ್ ।
ಯೇ ಸಪಿಂಡೀಕೃತಾಃ ಪ್ರೇತಾ ನ ತೇಷಾಂ ಸ್ಯುಃ ಪ್ರತಿಕ್ರಿಯಾಃ ।
ಯಸ್ತು ಕುರ್ಯಾತ್ ಪೃಥಕ್ ಪಿಂಡಂ ಪಿತೃಹಾ ಸೋಽಭಿಜಾಯತೇ ॥

ಮೃತೇ ಪಿತರಿ ವೈ ಪುತ್ರಃ ಪಿಂಡಾನಬ್ದಂ ಸಮಾವಸೇತ್ ।
ದದ್ಯಾಚ್ಚಾನ್ನಂ ಸೋದಕುಂಭಂ ಪ್ರತ್ಯಹಂ ಪ್ರೇತಧರ್ಮತಃ ॥ ೭೯ ॥

ಪಾರ್ವಣೇನ ವಿಧಾನೇನ ಸಾಂವತ್ಸರಿಕಮಿಷ್ಯತೇ ।
ಪ್ರತಿಸಂವತ್ಸರಂ ಕುರ್ಯಾದ್ವಿಧಿರೇಷ ಸನಾತನಃ ॥ ೮೦ ॥

---

೭೭. ಹೀಗೆಯೇ ಯೇಸಮಾನಾಃ ಎಂಬ ಎರಡು ಮಂತ್ರಗಳಿಂದ ಪ್ರೇತ ಮತ್ತು ಪಿತೃಗಳಿಗೆ ಪಿಂಡಗಳನ್ನು ಅರ್ಪಿಸಬೇಕು. ಈ ಸಪಿಂಡೀಕರಣ ಶ್ರಾದ್ಧವು ದೇವ ಪೂರ್ವವಾಗಿ ನಡೆಯಬೇಕೆಂದು ವಿಧಿಸಲ್ಪಟ್ಟಿದೆ.

೭೮. ಅಲ್ಲಿ ಮೊದಲು ಪಿತೃಗಳನ್ನು ಆವಾಹಿಸಿ ಮತ್ತೆ ಪ್ರೇತವನ್ನು ನಿರ್ದೇಶ ಮಾಡಿ ಅವಾಹಿಸಬೇಕು. ಸಪಿಂಡೀಕರಣವನ್ನು ಹೊಂದಿರುವ ಪ್ರೇತಗಳಿಗೆ ಮತ್ಯಾವ ಪ್ರತಿಕ್ರಿಯೆಗಳೂ ಇರುವದಿಲ್ಲ. ಆದರೆ ಸಪಿಂಡೀಕರಣವಿಲ್ಲದೆ ಪ್ರೇತಕ್ಕೆ ಪೃಥಕ್ ಪಿಂಡವನ್ನು ಮಾಡಿದವನು ಪಿತೃಹತ್ಯಾಪಾಪಕ್ಕೆ ಗುರಿಯಾಗುವನು.

೭೯. ಜನಕನು ಮರಣ ಹೊಂದಿದರೆ ಪುತ್ರನು ಒಂದು ವರ್ಷ ಪೂರ್ತಿಯಾಗಿ ಪ್ರತಿ ದಿನವೂ ಪಿಂಡದಾನವನ್ನು ಮಾಡಬೇಕು. ಮತ್ತು ಪ್ರತಿದಿನದಲ್ಲಿ ಅನ್ನದಾನ ಉದಕುಂಭ ದಾನಗಳನ್ನು ಪ್ರೇತಧರ್ಮಗಳನ್ನನುಸರಿಸಿ ಆಚರಿಸಬೇಕು.

೮೦. ಅಬ್ದಿಕ ಶ್ರಾದ್ಧವು ಪಾರ್ವಣ ವಿಧಾನದಿಂದ ನಡೆಯಬೇಕೆಂದು ಶಿಷ್ಟ ಸಮ್ಮತವಾಗಿರುವುದು. ಈ ಅಬ್ದಿಕ ಶ್ರಾದ್ಧವನ್ನು ಪ್ರತಿ ವರ್ಷದಲ್ಲಿಯೂ ಮಾಡಬೇಕು. ಇದು ಪ್ರಾಚೀನವಾದ ವಿಧಿಯಾಗಿರುವುದು.

ಮಾತಾಪಿತ್ರೋಃ ಸುತೈಃ ಕಾರ್ಯಂ ಪಿಂಡದಾನಾದಿಕಂ ಚ ಯತ್ ।
ಪತ್ನೀ ಕುರ್ಯಾತ್ ಸುತಾಭಾವೇ ಪತ್ನ್ಯಭಾವೇ ತು ಸೋದರಃ ॥೬೧॥

ಅನೇನೈವ ವಿಧಾನೇನ ಜೀವಃ ಶ್ರಾದ್ಧಂ ಸಮಾಚರೇತ್ ।
ಕೃತ್ವಾ ದಾನಾದಿಕಂ ಸರ್ವಂ ಶ್ರದ್ಧಾಯುಕ್ತಃ ಸಮಾಹಿತಃ ॥ ೬೨ ॥

ಏಷ ವಃ ಕಥಿತಃ ಸಮ್ಯಗ್ಗೃಹಸ್ಥಾನಾಂ ಕ್ರಿಯಾವಿಧಿಃ ।
ಸ್ತ್ರೀಣಾಂ ಭರ್ತೃಷು ಶುಶ್ರೂಷಾ ಧರ್ಮೋ ನಾನ್ಯ ಇಹೋಚ್ಯತೇ॥ ೬೩ ॥

ಸ್ವಧರ್ಮತತ್ಪರಾ ನಿತ್ಯಮೀಶ್ವರಾರ್ಪಿತಮಾನಸಾಃ ।
ಪ್ರಾಪ್ನುವಂತಿ ಪರಂ ಸ್ಥಾನಂ ಯದುಕ್ತಂ ವೇದವಾದಿಭಿಃ ॥ ೬೪ ॥

ಇತಿ ಶ್ರೀ ಕೂರ್ಮಪುರಾಣೇ ಷಟ್ಸಪ್ತತಿತಮೋಽಧ್ಯಾಯಃ.

---

೬೧. ಮಾತಾ ಪಿತೃಗಳಿಗೆ ಪಿಂಡದಾನಾಗಿ ಕರ್ಮಗಳನ್ನು ಪುತ್ರರು ಆಚರಿಸ ಬೇಕು. ಪುತ್ರನಿಲ್ಲದಿದ್ದರೆ ಪತ್ನಿಯೂ, ಪತ್ನಿಯಿಲ್ಲದಿದ್ದರೆ ಸಹೋದರನೂ, ಪಿಂಡ ದಾನಾದಿ ಕರ್ಮಕ್ಕೆ ಅಧಿಕಾರಿಯಾಗುವನು.

೬೨. ಮಾನವನು ಈ ವಿಧಾನದಿಂದ ಶ್ರಾದ್ಧವನ್ನು ಆಚರಿಸಬೇಕು. ಆ ಶ್ರಾದ್ಧ ಕರ್ಮದಲ್ಲಿ ಶ್ರದ್ಧೆ ಮತ್ತು ಸಮಾಧಾನದಿಂದ ಕೂಡಿ ದಾನಾದಿ ಸಮಸ್ತ ವಿಧಿಗಳನ್ನೂ ಮಾಡಬೇಕು.

೬೩. ಮುನಿಗಳೇ! ಗೃಹಸ್ಥರು ಆಚರಿಸಬೇಕಾದ ಧರ್ಮವನ್ನು ನಾನು ಹೇಳಿರುವೆನು. ಸ್ತ್ರೀಯರಿಗೆ ಪತಿಯ ಶುಶ್ರೂಷೆಯನ್ನು ಬಿಟ್ಟು ಬೇರೆ ಯಾವುದೊಂದು ಧರ್ಮವೂ, ಕರ್ತವ್ಯವಾಗಿ ವಿಧಿಸಲ್ಪಡಲಿಲ್ಲ.

೬೪. ಸ್ವಧರ್ಮದಲ್ಲಿ ತತ್ಪರರೂ ಸಂತತವಾಗಿ ಈಶ್ವರನಲ್ಲಿ ಅರ್ಪಿಸಿದ ಮಾನಸ ಉಳ್ಳವರೂ ಆದ ಜನರು ವೇದವಾದಿಗಳಿಂದ ವರ್ಣಿಸಲ್ಪಡುವ ಸದ್ಗತಿಯನ್ನು ಹೊಂದುತ್ತಾರೆ.

ಕೂರ್ಮಪುರಾಣದಲ್ಲಿ ಎಪ್ಪತ್ತಾರನೆಯ ಅಧ್ಯಾಯವು ಮುಗಿದುದು.



ಶ್ರೀಃ

# ಕೂರ್ಮಪುರಾಣಂ



## ಸಪ್ತಸಪ್ತತಿತಮೋಽಧ್ಯಾಯಃ.

ವ್ಯಾಸ ಉವಾಚ:—

ಅಗ್ನಿಹೋತ್ರಂ ತು ಜುಹುಯಾತ್ ಸಾಯಂ ಪ್ರಾತರ್ಯಥಾವಿಧಿ ।
ದರ್ಶೇ ಚೈವ ಹಿ ತಸ್ಯಾಂತೇ ನವಸಸ್ಯೇ ತಥೈವ ಚ ॥ ೧ ॥

ಇಷ್ಟ್ವಾ ಚೈವ ಯಥಾನ್ಯಾಯಮೃತ್ವಂತೇ ಚ ದ್ವಿಜೋಽಧ್ವರೈಃ ।
ಪಶುನಾ ತ್ವಯನಸ್ಯಾಂತೇ ಸಮಾಂತೇ ಸಾಗ್ನಿಕೈರ್ಮಖೈಃ ॥ ೨ ॥

---

## ಎಪ್ಪತ್ತೇಳನೆಯ ಅಧ್ಯಾಯವು.

೧. ವ್ಯಾಸ ಮುನಿಯು ಹೀಗೆಂದು ಹೇಳಿದನು:— ಗೃಹಸ್ಥನು ಪ್ರತಿ ದಿನದಲ್ಲಿ ಯಥಾವಿಧಿಯಾಗಿ ಸಾಯಂ ಪ್ರಾತಃ ಕಾಲಗಳಲ್ಲಿ ಅಗ್ನಿ ಹೋತ್ರ ಹೋಮ ವನ್ನು ಆಚರಿಸಬೇಕು. ಹಾಗೂ ದರ್ಶ-ವರ್ಷಾಂತಗಳಲ್ಲಿಯೂ, ನವಸಸ್ಯ ಪ್ರಾದು ರ್ಭಾವದಲ್ಲಿಯೂ ಇಷ್ಟಿಯನ್ನು ಮಾಡಬೇಕು.

೨. ದ್ವಿಜನು ನ್ಯಾಯ ಸಮ್ಮತನಾಗಿ ಋತುವಿನ ಕಡೆಯಲ್ಲಿ ಇಷ್ಟಿಯನ್ನೂ, ಅಯನದ ಕಡೆಯಲ್ಲಿ ಪಶುಯಾಗವನ್ನೂ, ವರ್ಷಾಂತದಲ್ಲಿ ಚಯನಾದಿ ಕರ್ಮಗ ಳನ್ನೂ ಆಚರಿಸಬೇಕು.

ನಾನಿಷ್ಟ್ವಾ ನವಸಸ್ಯೇಷ್ಟ್ಯಾ ಪಶುನಾ ವಾಗ್ನಿಮಾನ್ ದ್ವಿಜಃ ।
ನ ಚಾನ್ನಮದ್ಯಾನ್ಮಾಂಸಂ ವಾ ದೀರ್ಘಮಾಯುರ್ಜಿಜೀವಿಷುಃ ॥ ೩ ॥

ನವೇನಾನ್ನೇನ ಚಾನಿಷ್ಟ್ವಾ ಪಶುಹವ್ಯೇನ ಚಾಗ್ನಯಃ ।
ಪ್ರಾಣಾನೇವಾತ್ತುಮಿಚ್ಛಂತಿ ನವಾನ್ನಾಮಿಷಗೃದ್ಧಿನಃ ॥ ೪ ॥

ಸಾವಿತ್ರಾಂಚ್ಛಾಂತಿಹೋಮಾಂಶ್ಚ ಕುರ್ಯಾತ್ ಪರ್ವಸು ನಿತ್ಯಶಃ ।
ಪಿತ್ರ್ಯಂ ಶ್ಚೈವಾಷ್ಟಕಾಃ ಸರ್ವೇ ನಿತ್ಯಮನ್ವಷ್ಟಕಾಸು ಚ । ॥ ೫ ॥

ಏಷ ಧರ್ಮಃ ಪರೋ ನಿತ್ಯಮಪಧರ್ಮೋಽನ್ಯ ಉಚ್ಯತೇ ।
ತ್ರಯಾಣಾಮಿಹ ವರ್ಣಾನಾಂ ಗೃಹಸ್ಥಾಶ್ರಮವಾಸಿನಾಮ್ ॥ ೬ ॥

---

೩. ಚಿರಕಾಲ ಆಯುಷ್ಯವನ್ನು ಅಪೇಕ್ಷಿಸುವ ಆಹಿತಾಗ್ನಿಯಾದ ದ್ವಿಜನು ಆಗ್ರಯಣೇಷ್ಟಿಯನ್ನೂ, ಪಶುಯಾಗವನ್ನೂ ಮಾಡದೆ ಅನ್ನ ಮಾಂಸ ಮುಂತಾದ ಯಾವ ಆಹಾರವನ್ನೂ ಭುಂಜಿಸಬಾರದು.

೪. ನವಸಸ್ಯಾನ್ನದಿಂದಲೂ, ಪಶ್ವಾಹುತಿಯಿಂದಲೂ, ಇಷ್ಟಿ ಮಾಡದಿರುವ ಮಾನವನ ಪ್ರಾಣಗಳನ್ನು ತಿನ್ನಲು ನವಾನ್ನ ಮತ್ತು ಪಶುಮಾಂಸವನ್ನು ಅಪೇಕ್ಷಿಸುತ್ತಿರುವ ಅಗ್ನಿಗಳು ಇಷ್ಟಪಡುತ್ತವೆ.

೫. ಮತ್ತು ಯಾವಾಗಲೂ ಪರ್ವಕಾಲಗಳಲ್ಲಿ ಸವಿತೃ ದೇವತಾ ಸಂಬಂಧವಾದ ಶಾಂತಿ ಹೋಮಗಳನ್ನೂ ಅಷ್ಟಕಾ ಅನ್ವಷ್ಟಕಾ ತಿಥಿಗಳಲ್ಲಿ ಪಿತೃಶ್ರಾದ್ಧಗಳನ್ನೂ ತಪ್ಪದೇ ಆಚರಿಸಬೇಕು.

೬. ಗೃಹಸ್ಥಾಶ್ರಮದಲ್ಲಿರುವ ತ್ರೈವರ್ಣಿಕರಿಗೆ ಇಲ್ಲಿ ವಿಹಿತವಾಗಿರುವುದು ಯಾವಾಗಲೂ ಶ್ರೇಯಸ್ಕರವಾದ ಧರ್ಮವಾಗಿರುವುದು. ಇದಕ್ಕೆ ಹೊರತಾದ ವರ್ತನೆಯು ಅಪಧರ್ಮವೆಂದು ಹೇಳಲ್ಪಡುತ್ತದೆ.

ನಾಸ್ತಿಕ್ಯಾದಥವಾಲಸ್ಯಾದ್ಯೋಽಗ್ನೀನ್ನಾಧಾತುಮಿಚ್ಛತಿ ।
ಯಜೇತ ವಾ ನ ಯಜ್ಞೇನ ಸ ಯಾತಿ ನರಕಾನ್ ಬಹೂನ್ ॥ ೭ ॥

ತಾಮಿಸ್ರಮಂಧತಾಮಿಸ್ರಂ ಮಹಾರೌರವರೌರವೌ ।
ಕುಂಭೀಪಾಕಂ ವೈತರಣೀಮಸಿಪತ್ರವನಂ ತಥಾ ॥ ೮ ॥

ಅನ್ಯಾಂಶ್ಚ ನರಕಾನ್ ಘೋರಾನ್ ಸಂಪ್ರಾಪ್ನೋತಿ ಸುದುರ್ಮತಿಃ ।
ಅಂತ್ಯಜಾನಾಂ ಕುಲೇ ವಿಪ್ರಾಃ ಶೂದ್ರಯೋನೌ ಚ ಜಾಯತೇ ॥ ೯ ॥

ತಸ್ಮಾತ್ ಸರ್ವಪ್ರಯತ್ನೇನ ಬ್ರಾಹ್ಮಣೋ ಹಿ ವಿಶೇಷತಃ ।
ಆಧಾಯಾಗ್ನಿಂ ವಿಶುದ್ಧಾತ್ಮಾ ಯಜೇತ ಪರಮೇಶ್ವರಮ್ ॥ ೧೦ ॥

---

೭. ಯಾವ ಮಾನವನು ನಾಸ್ತಿಕ್ಯ ಅಥವಾ ಆಲಸ್ಯಗಳಿಂದ ಅಗ್ನಿಯನ್ನು ಆಧಾನಮಾಡಲು ಇಷ್ಟಪಡುವುದಿಲ್ಲವೋ, ಮತ್ತು ಯಜ್ಞದ ಕರ್ಮಗಳನ್ನು ಆಶ್ರಯಿಸುವುದಿಲ್ಲವೋ, ಅವನು ನರಕಯಾತನೆಯನ್ನು ಅನುಭವಿಸುತ್ತಾನೆ.

೮. ಅಗ್ನಿಯ ಆಧಾನ-ಯಜ್ಞ, ಕರ್ಮಾನುಷ್ಠಾನಗಳನ್ನು ಬಿಟ್ಟ ಮಾನವನು ಕುಂಭೀಪಾಕ, ವೈತರಣೀ, ಅಸಿಪತ್ರವನ, ತಾಮಿಸ್ರ, ಅಂಧತಾಮಿಸ್ರ, ಮಹಾರೌರವ ಮತ್ತು ರೌರವ ಮುಂತಾದ ಮಹಾನರಕ ಯಾತನೆಗಳನ್ನು ಅನುಭವಿಸುತ್ತಾನೆ.

೯. ವಿಪ್ರರೆ ! ಮತ್ತು ಇತರ ಅನೇಕ ಘೋರನರಕ ಪೀಡೆಗಳನ್ನು ಅನುಭವಿಸಿದ ಆ ಅವಿವೇಕಿಯು ನರಕ ವಾಸಾನಂತರದಲ್ಲಿ ಅಂತ್ಯಜರ ಕುಲದಲ್ಲಿಯೂ ಶೂದ್ರ ಜಾತಿಯಲ್ಲಿಯೂ ಪುನರ್ಜನ್ಮವನ್ನು ಎತ್ತುತ್ತಾನೆ.

೧೦. ಆದುದರಿಂದ ತ್ರೈವರ್ಣಿಕರೆಲ್ಲರೂ ಅವರಲ್ಲಿ ವಿಶೇಷವಾಗಿ ಬ್ರಾಹ್ಮಣನೂ ಸಮಸ್ತ ಪ್ರಯೋಗಗಳಿಂದ ಶುದ್ಧವಾದ ಚಿತ್ತವುಳ್ಳವನಾಗಿ ಅಗ್ನಿಯ ಆಧಾನವನ್ನು ಮಾಡಿ ಪರಮೇಶ್ವರನನ್ನು ಪೂಜಿಸಬೇಕು.

ಅಗ್ನಿಹೋತ್ರಾತ್ಪರೋ ಧರ್ಮೋ ದ್ವಿಜಾನಾಂ ನೈವ ವಿದ್ಯತೇ ।
ತಸ್ಮಾದಾರಾಧಯೇನ್ನಿತ್ಯಮಗ್ನಿಹೋತ್ರೇಣ ಶಾಶ್ವತಮ್ ॥ ೧೧ ॥

ಯಃ ಸ್ವಾಧ್ಯಾಯ್ಯಗ್ನಿಮಾಂಶ್ಚ ಸ್ಯಾನ್ನ ಯಜ್ಞಂ ದೇವಮಿಚ್ಛತಿ ।
ಸ ಸಮ್ಮೂಢೋ ನ ಸಂಭಾಷ್ಯಃ ಕಿಂ ಪುನರ್ನಾಸ್ತಿಕೋ ಜನಃ ॥ ೧೨ ॥

ಯಸ್ಯ ತ್ರೈವರ್ಷಿಕಂ ಭಕ್ತಂ ಪರ್ಯಾಪ್ತಂ ಭೃತ್ಯವೃತ್ತಯೇ ।
ಅಧಿಕಂ ವಾ ಭವೇದ್ಯಸ್ಯ ಸ ಸೋಮಂ ಪಾತುಮರ್ಹತಿ ॥ ೧೩ ॥

ಏಷ ವೈ ಸರ್ವಯಜ್ಞಾನಾಂ ಸೋಮಃ ಪ್ರಥಮ ಇಷ್ಯತೇ ।
ಸೋಮೇನಾರಾಧಯೇದ್ದೇವಂ ಸರ್ವಲೋಕಮಹೇಶ್ವರಮ್ ॥ ೧೪ ॥

---

೧೧. ದ್ವಿಜರಿಗೆ ಅಗ್ನಿಹೋತ್ರಕ್ಕಿಂತ ಪ್ರಶಸ್ತವಾದ ಧರ್ಮವು ಮತ್ತೊಂದು ಇಲ್ಲ. ಆದ್ದರಿಂದ ಪ್ರತಿನಿತ್ಯವೂ ಅಗ್ನಿಹೋತ್ರಾಚರಣೆಯಿಂದ ಪರಮೇಶ್ವರನನ್ನು ಆರಾಧಿಸಬೇಕು.

೧೨. ಯಾವ ಆಹಿತಾಗ್ನಿಯು ಅಗ್ನಿಯುಳ್ಳವನಾದರೂ ಯಜ್ಞಕರ್ಮದಿಂದ ಸರ್ವೇಶ್ವರನನ್ನು ಪೂಜಿಸಲು ಇಷ್ಟಪಡುವುದಿಲ್ಲವೋ ಅಂತಹ ಮೂರ್ಖಮಾನವನು ಸಂಭಾಷಣ ವ್ಯವಹಾರಕ್ಕೆ ಅರ್ಹನಲ್ಲ. ನಾಸ್ತಿಕನ ವಿಷಯದಲ್ಲಿ ಹೇಳುವುದೇನಿದೆ?

೧೩. ಯಾವ ಮಾನವನಿಗೆ ಧಾನ್ಯಾದಿ ಉತ್ಪತ್ತಿಯು ಕುಟುಂಬಪೋಷಣೆಗೆ ಮೂರು ವರ್ಷಗಳವರೆಗೆ ಸಾಕಾಗುವಷ್ಟು ಅಥವಾ ಹೆಚ್ಚಾಗಿ ಇರುವುದೋ, ಅವನು ಸೋಮಯಾಗವನ್ನು ಮಾಡಿ ಸೋಮಪಾನಕ್ಕೆ ಅರ್ಹನಾಗಿರುವನು.

೧೪. ಈ ಸೋಮಯಾಗವು ಸಮಸ್ತ ಯಜ್ಞಗಳಲ್ಲಿ ಮೊದಲನೆಯದೆಂದು ಶಿಷ್ಟಸಮ್ಮತವಾಗಿದೆ. ಆದ್ದರಿಂದ ಸರ್ವಲೋಕಗಳಿಗೆ ಮಹೇಶ್ವರನಾದ ದೇವನನ್ನು ಸೋಮಯಾಗದಿಂದ ಆರಾಧಿಸಬೇಕು.

ನ ಸೋಮಯಾಗಾದಧಿಕೋ ಮಹೇಶಾರಾಧನಾತ್ಪರಃ ।
ನ ಸೋಮೋ ವಿದ್ಯತೇ ತಸ್ಮಾತ್ ಸೋಮೇನಾಭ್ಯರ್ಚಯೇತ್ಪರಮ್ ॥

ಪಿತಾಮಹೇನ ವಿಪ್ರಾಣಾಮಾದಾಯ ವಿಹಿತಃ ಪರಃ ।
ಧರ್ಮೋ ವಿಮುಕ್ತಯೇ ಸಾಕ್ಷಾಚ್ಛ್ರೌತಃ ಸ್ಮಾರ್ತೋ ಭವೇತ್ಪುನಃ ॥

ಶ್ರೌತಸ್ತ್ರೇತಾಗ್ನಿಸಂಬಂಧಾತ್ ಸ್ಮಾರ್ತಃ ಪೂರ್ವಂ ಮಯೋದಿತಃ ।
ಶ್ರೇಯಸ್ಕರತಮಃ ಶ್ರೌತಸ್ತಸ್ಮಾಚ್ಛ್ರೌತಂ ಸಮಾಚರೇತ್ ॥ ೧೭ ॥

ಉಭಾವಪಿ ಹಿತೌ ಧರ್ಮೌ ವೇದವೇದವಿನಿಃಸೃತೌ ।
ಶಿಷ್ಟಾಚಾರಸ್ತೃತೀಯಃ ಸ್ಯಾಚ್ಛ್ರುತಿಸ್ಮೃತ್ಯೋರಭಾವತಃ ॥ ೧೮ ॥

---

೧೫. ಮಹೇಶ್ವರನನ್ನು ಪ್ರಸಾದಗೊಳಿಸುವ ಆರಾಧನರೂಪವಾದ ಸೋಮಯಾಗಕ್ಕಿಂತಲೂ ಹೆಚ್ಚಿನ ಮತ್ತೊಂದು ಆರಾಧನವಿಲ್ಲ. ಮತ್ತು ಅಂತಹ ಮತ್ತೊಂದು ಬಗೆಯ ಸೋಮಯಾಗವೂ ಇಲ್ಲ. ಆದ್ದರಿಂದ ಸೋಮಯಾಗಾನುಷ್ಠಾನದಿಂದ ಪರಮಾತ್ಮನನ್ನು ಅರ್ಚಿಸಬೇಕು.

೧೬. ಸೃಷ್ಟಿಕರ್ತನಾದ ಬ್ರಹ್ಮದೇವನಿಂದ ಸೃಷ್ಟಿಯ ಆದಿಯಲ್ಲಿ ದ್ವಿಜರಿಗೆ ಶ್ರೌತ-ಸ್ಮಾರ್ತವೆಂಬ ಶುಭಕರವಾದ ಎರಡು ಬಗೆಯ ಧರ್ಮಗಳು ಮುಕ್ತಿಸಾಧನವೆಂದು ಸಾಕ್ಷಾತ್ತಾಗಿ ಕಲ್ಪಿಸಲ್ಪಟ್ಟಿವೆ.

೧೭. ಇವುಗಳಲ್ಲಿ ಗಾರ್ಹಪತ್ಯ, ಆಹವನೀಯ, ದಕ್ಷಿಣಾಗ್ನಿ ಎಂಬ ಅಗ್ನಿತ್ರಯದ ಸಂಬಂಧವುಳ್ಳ ಧರ್ಮವು ಶ್ರೌತಧರ್ಮವು. ಹಿಂದೆ ಹೇಳಲ್ಪಟ್ಟಿರುವ ಧರ್ಮವು ಸ್ಮಾರ್ತಧರ್ಮವು. ಶ್ರೌತಧರ್ಮವು ಅತಿಶಯವಾಗಿ ಶ್ರೇಯಸ್ಸಿಗೆ ಕಾರಣವಾಗಿದೆ. ಆದ್ದರಿಂದ ಶ್ರೌತಧರ್ಮವನ್ನು ಆಚರಿಸಬೇಕು.

೧೮. ವೇದದಿಂದಲೂ, ವೇದಮೂಲಕವಾದ ಸ್ಮೃತಿಯಿಂದಲೂ ಕರ್ತವ್ಯವೆಂದು ತಿಳಿದ ಶ್ರೌತ-ಸ್ಮಾರ್ತವೆಂಬ ಎರಡು ಧರ್ಮಗಳೂ ಜನರಿಗೆ ಹಿತಕರಗಳಾಗಿವೆ. ಶ್ರುತಿ-ಸ್ಮೃತಿವಾಕ್ಯಗಳಿಂದ ಲಭಿಸದಿರುವ ಧರ್ಮಗಳಲ್ಲಿ ಶಿಷ್ಟಾಚಾರವೆಂಬ ಮೂರನೆಯ ಪ್ರಮಾಣವಿರುವುದು.

ಧರ್ಮೇಣಾಧಿಗತೋ ಯೈಸ್ತು ವೇದಃ ಸಪರಿಬೃಂಹಣಃ ।
ತೇ ಶಿಷ್ಟಾ ಬ್ರಾಹ್ಮಣಾಃ ಪ್ರೋಕ್ತಾ ನಿತ್ಯಮಾತ್ಮಗುಣಾನ್ವಿತಾಃ ॥ ೧೯ ॥

ತೇಷಾಮಭಿಮತೋ ಯಃ ಸ್ಯಾಚ್ಚೇತಸಾ ನಿತ್ಯಮೇವ ಹಿ ।
ಸ ಧರ್ಮಃ ಕಥಿತಃ ಸದ್ಭಿರ್ನಾನ್ಯೇಷಾಮಿತಿ ಧಾರಣಾ ॥ ೨೦ ॥

ಪುರಾಣಂ ಧರ್ಮಶಾಸ್ತ್ರಾಣಿ ವೇದಾನಾಮುಪಬೃಂಹಣಮ್ ।
ಏಕಸ್ಮಾದ್ಬ್ರಹ್ಮವಿಜ್ಞಾನಂ ಧರ್ಮಜ್ಞಾನಂ ತಥೈಕತಃ ॥ ೨೧ ॥

ಧರ್ಮಂ ಜಿಜ್ಞಾಸಮಾನಾನಾಂ ತತ್ಪ್ರಮಾಣತರಂ ಸ್ಮೃತಮ್ ।
ಧರ್ಮಶಾಸ್ತ್ರಂ ಪುರಾಣಾನಿ ಬ್ರಹ್ಮಜ್ಞಾನೇತರಾಶ್ರಮಮ್ ॥ ೨೨ ॥

---

೧೯. ಯಾವ ಅಧಿಕಾರಿಗಳಿಂದ ಸಾಂಗೋಪಾಂಗವಾದ ವೇದವು ವಿಧಿನಿಯಮ ಗಳಿಂದ ಕೂಡಿ ಅಭ್ಯಾಸಮಾಡಲ್ಪಟ್ಟಿದೆಯೋ ; ಮತ್ತು ಯಾರು ಶಾಂತಿ ಮುಂತಾದ ಆತ್ಮಗುಣಗಳಿಂದ ಕೂಡಿರುವರೊ ; ಅವರು ಶಿಷ್ಟರಾದ ಬ್ರಾಹ್ಮಣರೆಂದು ಕರೆಯ ಲ್ಪಡುವರು.

೨೦. ಅಂತಹ ಶಿಷ್ಟಬ್ರಾಹ್ಮಣರಿಗೆ ಯಾವಾಗಲೂ ಮನಸ್ಸಿಗೆ ಹಿತಕರವಾಗಿ ಯಾವುದು ಸಮ್ಮತವಾಗಿದೆಯೊ ; ಆ ಆಚರಣೆಯು ಧರ್ಮರೂಪವೆಂದು ಸಾಧುಗ ಳಿಂದ ಹೇಳಲ್ಪಟ್ಟಿದೆ. ಇತರರ ಇಷ್ಟಾಚರಣೆಯು ಧರ್ಮವಲ್ಲವೆಂಬುದು ಪರ ಮಾರ್ಥವು

೨೧ ಪುರಾಣ, ಧರ್ಮಶಾಸ್ತ್ರಗಳೆಂಬ ವಾಙ್ಮಯಗಳು ವೇದಾರ್ಥಕ್ಕೆ ಪೋಷಕವಾಗಿವೆ. ಅಂತಹ ಪುರಾಣಾದಿ ವಾಙ್ಮಯ ಒಂದರಿಂದಲೇ ಧರ್ಮಜ್ಞಾನವೂ ಬ್ರಹ್ಮವಿಜ್ಞಾನವೂ ಉಂಟಾಗುವುವು.

೨೨. ಧರ್ಮವನ್ನು ತಿಳಿಯಲು ಇಷ್ಟವುಳ್ಳ ಜಿಜ್ಞಾಸುಗಳಿಗೆ ಧರ್ಮಶಾಸ್ತ್ರ ಪುರಾಣಗಳು ಪ್ರಮಾಣಗಳೆಂದು ಸ್ಮರಿಸಲ್ಪಟ್ಟಿವೆ. ಆದರೆ ಧರ್ಮಶಾಸ್ತ್ರ-ಪುರಾಣಗಳ ವಿಚಾರವು ಬ್ರಹ್ಮಜ್ಞಾನಾಶ್ರಮವೆಂಬ ಸನ್ಯಾಸವನ್ನು ಹೊರತು ಮಿಕ್ಕ ಆಶ್ರಮಿಗಳಿಗೆ ಸಂಬಂಧಿಸಿರುವುದು.

ನಾನ್ಯತೋ ಜಾಯತೇ ಧರ್ಮೋ ಬ್ರಾಹ್ಮೀ ವಿದ್ಯಾ ಚ ವೈದಿಕೀ ।
ತಸ್ಮಾದ್ಧರ್ಮಂ ಪುರಾಣಂ ಚ ಶ್ರದ್ಧಾತವ್ಯಂ ಮನೀಷಿಭಿಃ　　॥ ೨೩ ॥

ಇತಿ ಶ್ರೀ ಕೂರ್ಮಪುರಾಣೇ ಸಪ್ತಸಪ್ತತಿತಮೋಽಧ್ಯಾಯಃ.

---

೨೩. ಬೇರೊಂದು ವಚನದಿಂದ ಧರ್ಮದ ಸತ್ತಿಯು ಸಿದ್ಧವಾಗುವುದಿಲ್ಲ. ಹಾಗು ಬ್ರಹ್ಮವಿದ್ಯೆಯು ವೇದದಿಂದಲೆ ಜನಿಸುವುದು. ಆದ್ದರಿಂದ ವಿದ್ವಾಂಸರು ಧರ್ಮಶಾಸ್ತ್ರ–ಪುರಾಣಗಳನ್ನು ಶ್ರದ್ಧೆಯಿಂದ ನಂಬಬೇಕು.

ಕೂರ್ಮಪುರಾಣದಲ್ಲಿ ಎಪ್ಪತ್ತೇಳನೆಯ ಅಧ್ಯಾಯವು ಮುಗಿದುದು



ಶ್ರೀಃ

# ಕೂರ್ಮಪುರಾಣಂ



## ಅಷ್ಟಸಪ್ತತಿತಮೋಽಧ್ಯಾಯಃ.

ವ್ಯಾಸ ಉವಾಚ :—

ಏಷ ವೋಽಭಿಹಿತಃ ಕೃತ್ಸ್ನೋ ಗೃಹಸ್ಥಾಶ್ರಮವಾಸಿನಃ ।
ದ್ವಿಜಾತೇಃ ಪರಮೋ ಧರ್ಮೋ ವರ್ತನಾನಿ ನಿಬೋಧತ ॥ ೧ ॥

ದ್ವಿವಿಧಸ್ತು ಗೃಹೀ ಜ್ಞೇಯಃ ಸಾಧಕಶ್ಚಾಪ್ಯಸಾಧಕಃ ।
ಅಧ್ಯಾಪನಂ ಯಾಜನಂ ಚ ಪೂರ್ವಸ್ಯಾಹುಃ ಪ್ರತಿಗ್ರಹಮ್ ॥ ೨ ॥

---

## ಎಪ್ಪತ್ತೆಂಟನೆಯ ಅಧ್ಯಾಯವು.

೧. ವ್ಯಾಸಮುನಿಯು ಹೀಗೆಂದು ಹೇಳಿದನು :— ಈ ರೀತಿಯಾಗಿ ಗೃಹಸ್ಥಾಶ್ರಮದಲ್ಲಿರುವ ಮಾನವನು ಆಚರಿಸುವ ಧರ್ಮವು ಸಂಪೂರ್ಣವಾಗಿ ಹೇಳಲ್ಪಟ್ಟಿದೆ. ಮುಂದೆ ದ್ವಿಜನಿಗೆ ಪರಮಧರ್ಮ ರೂಪವಾದ ವೃತ್ತಿಗಳನ್ನು ಶ್ರವಣಮಾಡಿರಿ.

೨. ಗೃಹಸ್ಥಾಶ್ರಮಿಗಳಲ್ಲಿ ಸಾಧಕ ಮತ್ತು ಅಸಾಧಕರೆಂದು ಎರಡು ಬಗೆಗಳು ಇರುವುವೆಂದು ತಿಳಿಯಬೇಕು. ಇವರಲ್ಲಿ ಸಾಧಕ ಎಂಬುವನಿಗೆ ಅಧ್ಯಾಪನ, ಯಾಜನ, ಪ್ರತಿಗ್ರಹಗಳು ಕರ್ತವ್ಯವಾಗಿರುತ್ತವೆ.

ಕುಸೀದಕೃಷಿವಾಣಿಜ್ಯಂ ಪ್ರಕುರ್ವಂತಃ ಸ್ವಯಂ ಕೃತಮ್ ॥ ೩ ॥

ಕೃಷೇರಭಾವೇ ವಾಣಿಜ್ಯಂ ತದಭಾವೇ ಕುಸೀದಕಮ್ ।
ಆಪತ್ಕಲ್ಪಸ್ತ್ವಯಂ ಜ್ಞೇಯಃ ಪೂರ್ವೋಕ್ತೋ ಮುಖ್ಯ ಇಷ್ಯತೇ ॥೪॥

ಸ್ವಯಂ ವಾ ಕರ್ಷಣಾಂ ಕುರ್ಯಾದ್ವಾಣಿಜ್ಯಂ ವಾ ಕುಸೀದಕಮ್
ಕಷ್ಟಾ ಪಾಪೀಯಸೀ ವೃತ್ತಿಃ ಕುಸೀದಂ ತದ್ವಿವರ್ಜಯೇತ್ ॥ ೫ ॥

ಕ್ಷಾತ್ರವೃತ್ತಿಂ ಪರಾಂ ಪ್ರಾಹುರ್ನ ಸ್ವಯಂ ಕರ್ಷಣಂ ದ್ವಿಜೈಃ ।
ತಸ್ಮಾತ್ ಕ್ಷಾತ್ರೇಣ ವರ್ತೇತ ವರ್ತತೇಽನಾಪದಿ ದ್ವಿಜಃ ॥ ೬ ॥

---

೩. ಅಥವಾ ದ್ವಿಜನು ತನ್ನ ಜೀವನ ನಿರ್ವಾಹಕ್ಕೋಸ್ಕರ ಧನದ ವ್ಯವಹಾರ, ಕೃಷಿ ಮತ್ತು ವಾಣಿಜ್ಯಗಳನ್ನು ತನ್ನ ಸ್ವಾತಂತ್ರ್ಯದಿಂದ ನಡೆಯಿಸಬಹುದು.

೪. ಆದರೆ ಹಿಂದೆ ಹೇಳಿದ ಧನ ವ್ಯವಹಾರಾದಿ ವೃತ್ತಿಗಳಲ್ಲಿ ಕೃಷಿಯು ಸಂಭವಿಸದಿದ್ದರೆ ಧನವ್ಯವಹಾರವೂ ಕರ್ತವ್ಯವಾದುದು. ಕೃಷಿ ಮುಂತಾದುವು ಆಪತ್ಕಾಲದಲ್ಲಿ ಮಾತ್ರ ಗ್ರಾಹ್ಯವಾದ ವೃತ್ತಿಗಳು. ಅಧ್ಯಾಪನ ಮುಂತಾದುವು ಮುಖ್ಯವಾದ ವೃತ್ತಿ ಉಪಾಯಗಳಾಗಿವೆ

೫. ಅಥವಾ ಸ್ವತಂತ್ರವಾಗಿ ನೆಲವನ್ನು ಉತ್ತು ವ್ಯವಸಾಯವನ್ನು ಮಾಡಬೇಕು. ವಾಣಿಜ್ಯ ಅಥವಾ ಧನವ್ಯವಹಾರವನ್ನಾದರೂ ಮಾಡಬಹುದು. ಆದರೆ ಧನವ್ಯವಹಾರ (ಲೇವಾದೇವಿ) ವು ಹೆಚ್ಚು ಪಾಪಕರವಾದ ವೃತ್ತಿಯಾಗಿದೆ. ಆದ್ದರಿಂದ ಅದನ್ನು ವರ್ಜಿಸಬೇಕು.

೬. ದ್ವಿಜರಾದವರು ಸ್ವತಂತ್ರವಾಗಿ ವ್ಯವಸಾಯ ಮಾಡುವುದಕ್ಕಿಂತ ಕ್ಷತ್ರಿಯರೆನಿಸಿದ ಪರರ ವೃತ್ತಿಯು ಪ್ರಶಸ್ತವೆಂದು ಪ್ರಾಜ್ಞರು ಹೇಳುವರು. ಆದ್ದರಿಂದ ಆಪತ್ತಿಗೆ ಸಿಕ್ಕಿರುವ ದ್ವಿಜನು ಕ್ಷತ್ರ ವೃತ್ತಿ ಕೃಷಿಗಳನ್ನು ಆಚರಿಸಬಹುದು.

ತೇನ ಚಾವಾಪ್ಯಜೀವಂಸ್ತು ವೈಶ್ಯವೃತ್ತಿಃ ಕೃಷಿಂ ವ್ರಜೇತ್ ।
ನ ಕಥಂಚನ ಕುರ್ವೀತ ಬ್ರಾಹ್ಮಣಃ ಕರ್ಮ ಕರ್ಷಣಮ್ ॥ ೭ ॥

ಲಬ್ಧಲಾಭಃ ಪಿತೄನ್ ದೇವಾನ್ ಬ್ರಾಹ್ಮಣಾಂಶ್ಚಾಪಿ ಪೂಜಯೇತ್ ।
ತೇ ತೃಪ್ತಾಸ್ತಸ್ಯ ತಂ ದೋಷಂ ಶಮಯಂತಿ ನ ಸಂಶಯಃ ॥ ೮ ॥

ದೇವೇಭ್ಯಶ್ಚ ಪಿತೃಭ್ಯಶ್ಚ ದದ್ಯಾದ್ಭಾಗಂ ತು ವಿಂಶಕಮ್ ।
ತ್ರಿಂಶದ್ಭಾಗಂ ಬ್ರಾಹ್ಮಣಾನಾಂ ಕೃಷಿಂ ಕುರ್ವನ್ನ ದುಷ್ಯತಿ ॥ ೯ ॥

ವಾಣಿಜ್ಯೇ ದ್ವಿಗುಣಂ ದದ್ಯಾತ್ ಕುಸೀದೀ ತ್ರಿಗುಣಂ ಪುನಃ ।
ಕೃಷಿಪಾಲಾನ್ನ ದೋಷೇಣ ಯುಜ್ಯತೇ ನಾತ್ರ ಸಂಶಯಃ ॥ ೧೦ ॥

---

೭. ಅಂತಹ ಕ್ಷಾತ್ರ ವೃತ್ತಿಯಿಂದ ಜೀವಿಸಲು ಅಶಕ್ತನಾದವನು ವೈಶ್ಯ ಜಾತಿಯ ವೃತ್ತಿಯಾದ ಕೃಷಿಯನ್ನು ಹೊಂದಬೇಕು. ಬ್ರಾಹ್ಮಣನಾಗಿ ಜನಿಸಿದವನು ಕೃಷಿ ಕರ್ಮವನ್ನು ಎಂತಹ ಪ್ರಸಂಗದಲ್ಲಿಯೂ ಆಚರಿಸಬಾರದು.

೮ ಕೃಷಿ ವೃತ್ತಿಯಿಂದ ಲಾಭವನ್ನು ಆರ್ಜಿಸಿದ ದ್ವಿಜನು ಆ ಲಾಭದ್ರವ್ಯ ದಿಂದ ಪಿತೃ-ದೇವ-ಬ್ರಾಹ್ಮಣರನ್ನು ಪೂಜಿಸಬೇಕು. ಆಗ ಸತ್ಕಾರದಿಂದ ಪ್ರೀತಿ ಹೊಂದಿದ ದೇವಾದಿಗಳು ಕೃಷಿ ವೃತ್ತಿಯಿಂದ ಸಂಭವಿಸಿದ ದೋಷವನ್ನು ನಿಸ್ಸಂಶಯ ವಾಗಿ ಪರಿಹಾರ ಮಾಡುವರು.

೯. ಕೃಷಿ ವೃತ್ತಿಯನ್ನು ಆಚರಿಸಿದ ದ್ವಿಜನು ಅದರಿಂದ ಹೊಂದಿರುವ ಲಾಭ ದ್ರವ್ಯದಲ್ಲಿ ದೇವತೆ ಮತ್ತು ಪಿತೃಗಳಿಗೆ ಇಪ್ಪತ್ತರಷ್ಟು ಭಾಗವನ್ನೂ, ಬ್ರಾಹ್ಮಣರಿಗೆ ಮೂವತ್ತರಷ್ಟು ಭಾಗವನ್ನೂ ಅರ್ಪಿಸಿ ಪೂಜಿಸಬೇಕು. ಅದರಿಂದ ಹೀನವೃತ್ತಿಯ ದೋಷವು ಪರಿಹಾರವಾಗುವುದು.

೧೦. ಹೀಗೆಯೇ ವಾಣಿಜ್ಯವೆಂಬ ಹೀನ ವೃತ್ತಿಯಲ್ಲಿರುವವನು ಲಾಭದಲ್ಲಿ ಹಿಂದೆ ಹೇಳಿರುವುದಕ್ಕಿಂತಲೂ ದ್ವಿಗುಣವಾಗಿಯೂ ಕುಸೀದ ವೃತ್ತಿಯಲ್ಲಿರುವವನು ತ್ರಿಗುಣವಾಗಿಯೂ ವಿನಿಯೋಗಿಸಬೇಕು. ಅದರಿಂದ ಕೃಷಿ ಮುಂತಾದ ದೋಷಗಳಿಗೆ ಆಸ್ಪದನಾಗುವುದಿಲ್ಲ. ಇದರಲ್ಲಿ ಸಂಶಯವಿಲ್ಲ.

ಶಿಲೋಂಛಂ ವಾಪ್ಯಾದದೀತ ಗೃಹಸ್ಥಃ ಸಾಧಕಃ ಪುನಃ ।
ವಿದ್ಯಾಶಿಲ್ಪಾದಯಸ್ತ್ವನ್ಯೇ ಬಹವೋ ವೃತ್ತಿಹೇತವಃ ॥ ೧೧ ॥

ಅಸಾಧಕಸ್ತು ಯಃ ಪ್ರೋಕ್ತೋ ಗೃಹಸ್ಥಾಶ್ರಮಸಂಸ್ಥಿತಃ ।
ಶಿಲೋಂಛೇ ತಸ್ಯ ಕಥಿತೇ ದ್ವೇ ವೃತ್ತೀ ಪರಮರ್ಷಿಭಿಃ ॥ ೧೨ ॥

ಅಮೃತೇನಾಥ ವಾ ಜೀವೇನ್ಮೃತೇನಾಪ್ಯಥ ವಾ ಯದಿ ।
ಅಯಾಚಿತಂ ಸ್ಯಾದಮೃತಂ ಮೃತಂ ಭೈಕ್ಷಂ ತು ಯಾಚಿತಮ್ ॥ ೧೩ ॥

ಕುಸೂಲಧಾನ್ಯಕೋ ವಾ ಸ್ಯಾತ್ ಕುಂಭೀಧಾನ್ಯಕ ಏವ ಚ ।
ತ್ರ್ಯಹ್ನಿಕೋ ವಾಪಿ ಚ ಭವೇದಶ್ವಸ್ತನಿಕ ಏವ ಚ ॥ ೧೪ ॥

---

೧೧. ಅಥವಾ ಸಾಧಕನೆಂಬ ಗೃಹಸ್ಥನು ಶಿಲ–ಉಂಛ ಎಂಬ ವೃತ್ತಿಗಳನ್ನಾದರೂ ಅವಲಂಬಿಸಬೇಕು. ಇವುಗಳಲ್ಲದೆ ವಿದ್ಯೆ-ಶಿಲ್ಪ ಮುಂತಾದ ಅನೇಕ ವೃತ್ತಿನಿರ್ವಾಹ ಮಾರ್ಗಗಳು ಇರುತ್ತವೆ.

೧೨. ಗೃಹಸ್ಥಾಶ್ರಮವನ್ನು ಸ್ವೀಕರಿಸಿರುವವರಲ್ಲಿ ಹಿಂದೆ ಅಸಾಧಕನೆಂದು ಹೇಳಲ್ಪಟ್ಟಿರುವವನಿಗೆ ಶಿಲ-ಉಂಛ ಎಂಬ ಎರಡು ವೃತ್ತಿಗಳು ಮಹರ್ಷಿಗಳಿಂದ ಹೇಳಲ್ಪಟ್ಟಿರುತ್ತವೆ.

೧೩. ಅಥವಾ ಅಂತಹ ಗೃಹಸ್ಥನು ಅಮೃತ–ಮೃತ ಎಂಬ ಸಂಕೇತವುಳ್ಳ ವೃತ್ತಿಗಳಲ್ಲಿ ಒಂದರಿಂದ ಜೀವಿಸಬೇಕು. ಅಯಾಚಿತವಾಗಿ ಹೊಂದುವ ವೃತ್ತಿಯು ಅಮೃತವೆಂದೂ, ಯಾಚಿತವಾಗಿ ದೊರಕುವ ಭಿಕ್ಷೆಯು ಮೃತ ವೃತ್ತಿಯೆಂದೂ ತಿಳಿಯಬೇಕು.

೧೪. ಮತ್ತು ಭವಿಷ್ಯತ್ ಕಾಲದ ಸುಖ ಜೀವನದ ಆಶೆಯ ತಾರತಮ್ಯದಿಂದ ಖಣಜದಲ್ಲಿ ಧಾನ್ಯಸಂಗ್ರಹವುಳ್ಳವನೂ, ಕುಂಭ ಪಾತ್ರಮಾತ್ರದಲ್ಲಿ ಧಾನ್ಯ-ಮೂರು ದಿನಗಳಿಗೆ ಮಾತ್ರ ಸಾಕೆಂಬಷ್ಟು ಧಾನ್ಯಸಂಗ್ರಹಿಯೂ ನಾಳೆಯ ದಿನಕ್ಕೆ ಶೇಷ ಧಾನ್ಯವಿಲ್ಲದವನೂ ಆಗಿರಬೇಕು.

ಚತುರ್ಣಾಮಪಿ ವೈ ತೇಷಾಂ ದ್ವಿಜಾನಾಂ ಗೃಹಮೇಧಿನಾಮ್ ।
ಶ್ರೇಯಾನ್ ಪರಃ ಪರೋ ಜ್ಞೇಯೋ ಧರ್ಮತೋ ಲೋಕಜಿತ್ತಮಃ ॥
ಷಟ್ಕರ್ಮಕೋ ಭವೇತ್ತೇಷಾಂ ತ್ರಿಭಿರನ್ಯಃ ಪ್ರವರ್ತತೇ ।
ದ್ವಾಭ್ಯಾಮೇಕಶ್ಚತುರ್ಥಸ್ತು ಬ್ರಹ್ಮಸತ್ರೇಣ ಜೀವತಿ ॥ ೧೬ ॥

ವರ್ತಯಂಸ್ತು ಶಿಲೋಂಛಾಭ್ಯಾಮಗ್ನಿಹೋತ್ರಪರಾಯಣಃ ।
ಇಷ್ಟೀಃ ಪಾರ್ವಾಯಣಾಂತಾ ಯಾಃ ಕೇವಲಾ ನಿರ್ವಪೇತ್ ಸದಾ ॥

ನ ಲೋಕವೃತ್ತಂ ವರ್ತೇತ ವಾರ್ತಾಂತೇ ವೃತ್ತಿಹೇತವೇ ।
ಅಜಿಹ್ಮಾಮಶಠಾಂ ಶುದ್ಧಾಂ ಜೀವೇದ್ಬ್ರಾಹ್ಮಣಜೀವಿಕಾಮ್ ॥ ೧೮ ॥

---

೧೫. ಹಿಂದೆ ಹೇಳಿದವೃತ್ತಿ ಸಂಗ್ರಹಿಗಳಾದ ನಾಲ್ಕು ವಿಧದ ಗೃಹಸ್ಥ ದ್ವಿಜರಲ್ಲಿ ಹಿಂದೆ ಹೇಳಿರುವ ಅಧಿಕ ಧಾನ್ಯಸಂಗ್ರಹಿಗಳಿಗಿಂತ ಮುಂದೆಮುಂದೆ ಪಠಿಸಲ್ಪಟ್ಟ ನ್ಯೂನ ಧಾನ್ಯ ಸಂಗ್ರಹಿಯು ಶ್ರೇಷ್ಠನೂ, ಧರ್ಮದಿಂದ ಲೋಕವನ್ನು ಜಯಿಸಿದಂತಹವರಲ್ಲಿ ಉತ್ತಮನೂ ಆಗಿರುವನು.

೧೬. ಮೊದಲನೆಯವನು ಷಟ್ಕರ್ಮನಿರತನೂ, ಎರಡನೆಯವನು ತ್ರಿಕರ್ಮನಿರತನೂ, ಮೂರನೆಯವನು ಎರಡು ಕರ್ಮಗಳಲಿ ಆಸಕ್ತನೂ ಮತ್ತು ನಾಲ್ಕನೆಯ ವಿರಕ್ತನು ಬ್ರಹ್ಮಜ್ಞಾನ ಸಂಪೂರ್ತಿಯೆಂಬ ಬ್ರಹ್ಮ ಸತ್ರಜೀವಿಯೂ ಆಗಿರುವರು.

೧೭. ಶಿಲ-ಉಂಛ ವೃತ್ತಿಗಳಿಂದ ಜೀವಿಸುವವನು ಸರ್ವಕಾಲವಲ್ಲಿಯೂ, ಅಗ್ನಿಹೋತ್ರ ಧರ್ಮದಲ್ಲಿ ಆಸಕ್ತನಾಗಬೇಕು. ಮತ್ತು ಪರ್ವ ಅಯನ ಕಾಲಗಳಲ್ಲಿ ಕರ್ತವ್ಯವಾದ ಇಷ್ಟಿಕರ್ಮಗಳನ್ನು ಮಾತ್ರ ಆಚರಿಸಬೇಕು.

೧೮. ತನ್ನ ವೃತ್ತಿಯನ್ನುಆರ್ಜಿಸಿದ ತರುವಾಯ ಮತ್ತಷ್ಟು ವೃತ್ತಿ ಆರ್ಜನೆಯ ಲೋಭದಿಂದ ಲೋಕ ವ್ಯವಹಾರವನ್ನು ಅವಲಂಬಿಸಬಾರದು. ಮಾಯೆ ವಂಚನೆ ಮುಂತಾದ ದೋಷಗಳಿಲ್ಲದ ಶುದ್ಧವಾದ ಜೀವಿಕೆಯನ್ನು ಬ್ರಾಹ್ಮಣನು ಅನುಸರಿಸಬೇಕು.

ಯಾಚಿತ್ವಾ ಚಾರ್ಥಸದ್ಭ್ಯೋಽನ್ನಂ ಪಿತೄನ್ ದೇವಾಂಸ್ತು ತೋಷಯೇತ್
ಯಾಚಯೇದ್ವಾ ಶುಚೀನ್ ದಾಂತಾನ್ ತೇನ ತೃಪ್ಯೇತ್ ಸ್ವಯಂ ತತಃ

ಯಸ್ತು ದ್ರವ್ಯಾರ್ಜನಂ ಕೃತ್ವಾ ಗೃಹಸ್ಥಸ್ತೋಷಯೇನ್ನ ತು ।
ದೇವಾನ್ ಪಿತೄಂಸ್ತು ವಿಧಿನಾ ಶುನಾಂ ಯೋನಿಂ ವ್ರಜತ್ಯಧಃ ॥ ೨೦ ॥

ಧರ್ಮಶ್ಚಾರ್ಥಶ್ಚ ಕಾಮಶ್ಚ ಶ್ರೇಯೋ ಮೋಕ್ಷಚತುಷ್ಟಯಮ್ ।
ಧರ್ಮಾವಿರುದ್ಧಃ ಕಾಮಃ ಸ್ಯಾದ್ಬ್ರಾಹ್ಮಣಾನಾಂ ತು ನೇತರಃ ॥ ೨೧ ॥

ಯೋಽರ್ಥೋ ಧರ್ಮಾಯ ನಾತ್ಮಾರ್ಥಂ ಸೋಽರ್ಥೋ ನಾರ್ಥಸ್ತಥೇತರಃ ।
ತಸ್ಮಾದರ್ಥಂ ಸಮಾಸಾದ್ಯ ದದ್ಯಾದ್ವೈ ಜುಹುಯಾದ್ದ್ವಿಜಃ ॥ ೨೨ ॥

ಇತಿ ಶ್ರೀ ಕೂರ್ಮಪುರಾಣೇ ಅಷ್ಟಸಪ್ತತಿತಮೋಽಧ್ಯಾಯಃ.

೧೯. ಸಾಧು ಜನರಿಂದ ಯಾಚನಾ ಪೂರ್ವಕವಾಗಿ ಸಂಗ್ರಹಿಸಿದ ಅನ್ನದಿಂದ ಪಿತೃ-ದೇವತೆಗಳನ್ನು ಆರಾಧಿಸಿ ಸಂತೋಷ ಪಡಿಸಬೇಕು. ಅಥವಾ ಅಂತಹ ಅನ್ನದಿಂದ ಪವಿತ್ರರೂ, ಜಿತೇಂದ್ರಿಯರೂ ಆದ ಅತಿಥಿಗಳನ್ನು ಸತ್ಕರಿಸಿ ಅಷ್ಟು ಮಾತ್ರದಿಂದ ತಾನು ಕೃತಾರ್ಥನೆಂದು ತೃಪ್ತಿಪಡಬೇಕು.

೨೦. ಯಾವ ಗೃಹಸ್ಥನು ಯಥೇಚ್ಛವಾಗಿ ದ್ರವ್ಯಾರ್ಜನೆಯನ್ನು ಮಾಡಿ ವಿಧಿಪೂರ್ವಕವಾಗಿ ದೇವತಾ ಪಿತೃಗಳನ್ನು ತೃಪ್ತಿ ಪಡಿಸುವುದಿಲ್ಲವೋ; ಅಂತಹ ಮಾನವನು ಹೀನವಾದ ಶುನಕಯೋನಿಯಲ್ಲಿ ಪುನರ್ಜನ್ಮವನ್ನು ಹೊಂದುವನು.

೨೧. ಜನಿಸಿದ ಮಾನವರಿಗೆಲ್ಲ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬುವು ನಾಲ್ಕು ಶ್ರೇಷ್ಠವಾದ ಪುರುಷಾರ್ಥಗಳಾಗಿವೆ, ಇವುಗಳಲ್ಲಿ ಬ್ರಾಹ್ಮಣನಿಗೆ ಧರ್ಮಕ್ಕೆ ವಿರೋಧಿಯಲ್ಲದ ಕಾಮವು ಶ್ರೇಷ್ಠವೆನಿಸಿದೆ. ಧರ್ಮ ವಿರೋಧಿಯಾದ ಕಾಮವು ಪುರುಷಾರ್ಥವಲ್ಲ.

೨೨. ಯಾವ ಅರ್ಥವು ಆತ್ಮಭೋಗಕ್ಕೆ ಸಾಧನವಾಗದೆ ಧರ್ಮಕ್ಕೆಮಾತ್ರ ಸಾಧನವಾಗಿದೆಯೋ; ಅದು ಪುರುಷಾರ್ಥವಾಗುವುದು. ಭೋಗ ಸಾಧನೆಯಾದ ಅರ್ಥವು ಪುರುಷಾರ್ಥವಲ್ಲ, ಆದ್ದರಿಂದ ದ್ವಿಜನು ಅರ್ಥವನ್ನು ಸಂಪಾದಿಸಿ ದಾನ ಹೋಮ ಮುಂತಾದ ಧರ್ಮವನ್ನು ಆಚರಿಸಬೇಕು.

ಕೂರ್ಮಪುರಾಣದಲ್ಲಿ ಎಪ್ಪತ್ತೆಂಟನೆಯ ಅಧ್ಯಾಯವು ಸಮಾಪ್ತವು.

ಶ್ರೀಃ

# ಕೂರ್ಮಪುರಾಣಂ

---

## ಏಕೋನಾಶೀತಿತಮೋಽಧ್ಯಾಯಃ.

ವ್ಯಾಸ ಉವಾಚ:—

ಅಥಾತಃ ಸಂಪ್ರವಕ್ಷ್ಯಾಮಿ ದಾನಧರ್ಮಮನುತ್ತಮಮ್ ।
ಬ್ರಹ್ಮಣಾಭಿಹಿತಂ ಪೂರ್ವಮೃಷೀಣಾಂ ಬ್ರಹ್ಮವಾದಿನಾಮ್ ॥ ೧ ॥

ಅರ್ಥಾನಾಮುಚಿತೇ ಪಾತ್ರೇ ಶ್ರದ್ಧಯಾ ಪ್ರತಿಪಾದನಮ್ ।
ದಾನಮಿತ್ಯಭಿನಿರ್ದಿಷ್ಟಂ ಭುಕ್ತಿಮುಕ್ತಿಫಲಪ್ರದಮ್ ॥ ೨ ॥

---

## ಎಪ್ಪತ್ತೊಂಭತ್ತನೆಯ ಅಧ್ಯಾಯವು.

೧. ವ್ಯಾಸ ಮುನಿಯು ಹೀಗೆಂದು ಹೇಳಿದನು:— ಇನ್ನು ಮುಂದೆ ಪೂರ್ವ ಕಾಲದಲ್ಲಿ ಬ್ರಹ್ಮವಾದಿಗಳಾದ ಮಹರ್ಷಿಗಳಿಗೆ ಬ್ರಹ್ಮದೇವನು ಉಪದೇಶಿಸಿರುವ ಶ್ರೇಷ್ಠವಾದ ದಾನವೆಂಬ ಧರ್ಮವನ್ನು ಹೇಳುತ್ತೇನೆ.

೨. ತಾನು ಆರ್ಜಿಸಿದ ಧನವನ್ನು ಉಚಿತವಾದ ಸತ್ಪಾತ್ರದಲ್ಲಿ ಶ್ರದ್ಧಾಪೂರ್ವಕವಾಗಿ ವಿನಿಯೋಗಿಸುವುದು ದಾನವೆಂದು ನಿರ್ದೇಶಿಸಲ್ಪಟ್ಟಿದೆ. ಅಂತಹ ದಾನವು ಭೋಗ ಮೋಕ್ಷವೆಂಬ ಉತ್ತಮ ಫಲಗಳನ್ನು ಕೊಡುವುದಾಗಿದೆ.

ಯದ್ದದಾತಿ ವಿಶಿಷ್ಟೇಭ್ಯಃ ಶಿಷ್ಟೇಭ್ಯಃ ಶ್ರದ್ಧಯಾ ಯುತಃ ।
ತದ್ವಿಚಿತ್ರಮಹಂ ಮನ್ಯೇ ಶೇಷಂ ಕಸ್ಯಾಪಿ ರಕ್ಷತಿ ॥ ೩ ॥

ನಿತ್ಯಂ ನೈಮಿತ್ತಿಕಂ ಕಾಮ್ಯಂ ತ್ರಿವಿಧಂ ದಾನಮುಚ್ಯತೇ ।
ಚತುರ್ಥಂ ವಿಮಲಂ ಪ್ರೋಕ್ತಂ ಸರ್ವದಾನೋತ್ತಮೋತ್ತಮಮ್ ॥೪॥

ಅಹನ್ಯಹನಿ ಯತ್ಕಿಂಚಿದ್ದೀಯತೇಽನುಪಕಾರಿಣೇ ।
ಅನುದ್ದಿಶ್ಯ ಫಲಂ ತಸ್ಮಾದ್ಬ್ರಾಹ್ಮಣಾಯ ತು ನಿತ್ಯಕಮ್ ॥ ೫ ॥

ಯತ್ತು ಪಾಪೋಪಶಾಂತ್ಯರ್ಥಂ ದೀಯತೇ ವಿದುಷಾಂ ಕರೇ ।
ನೈಮಿತ್ತಿಕಂ ತದುದ್ದಿಷ್ಟಂ ದಾನಂ ಸದ್ಭಿರನುಷ್ಠಿತಮ್ ॥ ೬ ॥

---

೩. ಸಮಾಜದಲ್ಲಿ ಗಣ್ಯರಾಗಿರುವ ಶಿಷ್ಟಜನರಿಗೆ ಶ್ರದ್ಧಾಪೂರ್ವಕವಾಗಿ ದ್ರವ್ಯವನ್ನು ವಿನಿಯೋಗಿಸುವುದು ವಿಚಿತ್ರವೂ, ಶ್ಲಾಘ್ಯವೂ ಆದ ದಾನವೆಂದು ನಾನು ತಿಳಿಯುತ್ತೇನೆ. ಮಿಕ್ಕದಾನವು ಬೇರೊಬ್ಬನಿಗೆ, ರಕ್ಷಣೆಯನ್ನು ಮಾತ್ರ ಕೊಡುವುದಾಗಿದೆ.

೪. ಈ ದಾನವೆಂಬ ಕರ್ಮವು ನಿತ್ಯ, ನೈಮಿತ್ತಿಕ ಮತ್ತು ಕಾಮ್ಯ ಎಂದು ಮೂರು ವಿಧವಾಗಿ ವಿಧಿಸಲ್ಪಟ್ಟಿದೆ. ಈ ಮೂರು ದಾನಗಳಲ್ಲದೆ ವಿಮಲವೆಂಬ ಮತ್ತೊಂದು ದಾನವು ಹೇಳಲ್ಪಟ್ಟಿರುವುದು. ಅದು ಉತ್ತಮವೆನಿಸಿರುವ ಸರ್ವದಾನಗಳಲ್ಲಿಯೂ ಉತ್ತಮವಾದುದು.

೫. ತನಗೆ ಉಪಕಾರಮಾಡದೆ ಉದಾಸೀನನಾಗಿರುವ ವಿಪ್ರನಿಗೆ ದಾನಫಲವನ್ನಾಗಲಿ, ಉಪಕಾರಾದಿಗಳನ್ನಾಗಲಿ ನಿರೀಕ್ಷಿಸದೆ ಪ್ರತಿನಿತ್ಯವೂ ಸಾಧ್ಯವಾದಷ್ಟು ಅಲ್ಪ ದ್ರವ್ಯವನ್ನಾದರೂ ದಾನಮಾಡುವುದು ನಿತ್ಯದಾನವೆಂದು ಕೀರ್ತಿಸಲ್ಪಟ್ಟಿದೆ.

೬. ತನ್ನ ಪಾಪಪರಿಹಾರವನ್ನು ಉದ್ದೇಶಿಸಿ ವಿದ್ವಾಂಸರ ಹಸ್ತದಲ್ಲಿ ಶಾಂತಿರೂಪವಾಗಿ ಕೊಡಲ್ಪಡುವ ದಾನವು ನೈಮಿತ್ತಿಕದಾನವೆಂದು ಗಣಿಸಲ್ಪಟ್ಟಿದೆ. ಈ ದಾನವು ಅನಾದಿಯಾಗಿ ಸಜ್ಜನರಿಂದ ಆಚರಿಸಲ್ಪಟ್ಟಿದೆ.

ಅಪತ್ಯವಿಜಯೈಶ್ವರ್ಯಸ್ವರ್ಗಾರ್ಥಂ ಯತ್ಪ್ರದೀಯತೇ ।
ದಾನಂ ತತ್ಕಾಮ್ಯಮಾಖ್ಯಾತಮೃಷಿಭಿರ್ಧರ್ಮಚಿಂತಕೈಃ ॥ ೭ ॥

ಯದೀಶ್ವರಪ್ರೀಣನಾರ್ಥಂ ಬ್ರಹ್ಮವಿತ್ಸು ಪ್ರದೀಯತೇ ।
ಚೇತಸಾ ಧರ್ಮಯುಕ್ತೇನ ದಾನಂ ತದ್ವಿಮಲಂ ಶುಭಮ್ ॥ ೮ ॥

ದಾನಧರ್ಮಂ ನಿಷೇವೇತ ಪಾತ್ರಮಾಸಾದ್ಯ ಶಕ್ತಿತಃ ।
ಉತ್ಪತ್ಸ್ಯತೇ ಹಿ ತತ್ಪಾತ್ರಂ ಯತ್ತಾರಯತಿ ಸರ್ವತಃ ॥ ೯ ॥

ಕುಟುಂಬಭಕ್ತವಸನಾದ್ದೇಯಂ ಯದತಿರಿಚ್ಯತೇ ।
ಅನ್ಯಥಾ ದೀಯತೇ ಯದ್ಧಿ ನ ತದ್ದಾನಂ ಫಲಪ್ರದಮ್ ॥ ೧೦ ॥

---

೭. ಸಂತತಿ, ವಿಜಯ, ಐಶ್ವರ್ಯ ಅಥವಾ ಸ್ವರ್ಗ ಮುಂತಾದ ಫಲಕಾಮನೆಯಿಂದ ದ್ರವ್ಯವನ್ನು ಅರ್ಪಿಸುವುದು ಕಾಮ್ಯದಾನವೆಂದು ಧರ್ಮಚಿಂತಕರಾಗಿರುವ ಮಹರ್ಷಿಗಳಿಂದ ಉಪದೇಶಿಸಲ್ಪಟ್ಟಿದೆ.

೮. ಸರ್ವೇಶ್ವರನ ತೃಪ್ತಿಯಾಗಲೆಂದು ಭಾವಿಸಿ ಬ್ರಹ್ಮಜ್ಞಾನಿಗಳೆಂಬ ಸತ್ಪಾತ್ರದಲ್ಲಿ ಧರ್ಮಭಾವನೆಯಿಂದ ಕೂಡಿದ ಮಾನಸದಿಂದ ಮಾಡುವ ದ್ರವ್ಯಾರ್ಪಣೆಯು ವಿಮಲವೆಂಬ ನಾಲ್ಕನೆಯ ದಾನವು. ಇದು ಮಂಗಳಕರವಾದ ದಾನವು.

೯. ಇಂತಹ ದಾನವೆಂಬ ಧರ್ಮಕಾರ್ಯವನ್ನು ಸತ್ಪಾತ್ರಗಳಲ್ಲಿ ಯಥಾಶಕ್ತಿಯಾಗಿ ಆಚರಿಸುತ್ತಿರಬೇಕು. ದಾನವನ್ನು ಪ್ರತಿಗ್ರಹಿಸಿರುವ ಸತ್ಪಾತ್ರನು ದಾತೃಪುರುಷನನ್ನು ಸರ್ವಾನರ್ಥಗಳಿಂದ ತರಣಮಾಡಿಸುವನು.

೧೦. ಆದರೆ ಮಾನವನು ತನ್ನ ಕುಟುಂಬ, ವರ್ಗವನ್ನು ರಕ್ಷಿಸಲು ಬೇಕಾಗುವ ಅನ್ನವಸ್ತ್ರಕ್ಕಿಂತಲೂ ಅತಿಶಯವಾಗಿರುವ ದ್ರವ್ಯವನ್ನು ಮಾತ್ರ ದಾನಮಾಡಬೇಕು ಹಾಗಿಲ್ಲದಿದ್ದರೆ ಆಚರಿಸಿದ ದಾನವು ದಾನದ ಫಲವನ್ನು ಕೊಡುವುದಿಲ್ಲ.

ಶ್ರೋತ್ರಿಯಾಯ ಕುಲೀನಾಯ ವಿನೀತಾಯ ತಪಸ್ವಿನೇ ।
ವ್ರತಸ್ಥಾಯ ದರಿದ್ರಾಯ ಯದ್ದೇಯಂ ಭಕ್ತಿಪೂರ್ವಕಮ್ ॥ ೧೧ ॥

ಯಸ್ತು ದದ್ಯಾನ್ಮಹೀಂ ಭಕ್ತ್ಯಾ ಬ್ರಾಹ್ಮಣಾಯಾಹಿತಾಗ್ನಯೇ ।
ಸ ಯಾತಿ ಪರಮಂ ಸ್ಥಾನಂ ಯತ್ರ ಗತ್ವಾ ನ ಶೋಚತಿ ॥ ೧೨ ॥

ಇಕ್ಷುಭಿಃ ಸಂತತಾಂ ಭೂಮಿಂ ಯವಗೋಧೂಮಶಾಲಿನೀಮ್ ।
ದದಾತಿ ವೇದವಿದುಷೇ ಯಃ ಸ ಭೂಯೋ ನ ಜಾಯತೇ ॥ ೧೩ ॥

ಗೋ ಚರ್ಮಮಾತ್ರಾಮಪಿ ವಾ ಯೋ ಭೂಮಿಂ ಸಂಪ್ರಯಚ್ಛತಿ ।
ಬ್ರಾಹ್ಮಣಾಯ ದರಿದ್ರಾಯ ಸರ್ವಪಾಪೈಃ ಪ್ರಮುಚ್ಯತೇ ॥ ೧೪ ॥

---

೧೧. ವೇದಾಧ್ಯಯನಸಂಪನ್ನನೂ, ಸದ್ವಂಶದಲ್ಲಿ ಹುಟ್ಟಿದವನೂ, ವಿನಯವಂತನೂ, ತಪೋನುಷ್ಠಾನದಲ್ಲಿ ಆಸಕ್ತನೂ, ವ್ರತದೀಕ್ಷೆಯುಳ್ಳವನೂ ಮತ್ತು ದರಿದ್ರನೂ ಆದ ಸತ್ಪಾತ್ರದಲ್ಲಿ ಭಕ್ತಿಪೂರ್ವಕವಾಗಿ ಮಾಡಿದ ದಾನವು ಸಾರ್ಥಕವಾಗುವುದು.

೧೨. ಯಾವ ಮಾನವನು ಶ್ರೌತಾಗ್ನಿಯನ್ನು ಧರಿಸಿರುವ ಬ್ರಾಹ್ಮಣನಿಗೆ ಭಕ್ತಿಪೂರ್ವಕವಾಗಿ ಭೂಮಿಯನ್ನು ದಾನಮಾಡುವನೊ; ಅವನು ಶೋಕಾನುಭವದಿಂದ ರಹಿತವಾದ ಉತ್ತಮ ಪದವನ್ನು ಹೊಂದುತ್ತಾನೆ.

೧೩. ಯಾವ ಮಾನವನು ಇಕ್ಷು ಯವ ಗೋಧೂಮಧಾನ್ಯಗಳಿಂದ ತುಂಬಿರುವ ಭೂಮಿಯನ್ನು ವೇದಾಭ್ಯಾಸಿಯಾದ ವಿಪ್ರೋತ್ತಮನಿಗೆ ದಾನಮಾಡುವನೋ ಅಂತಹ ದಾನಿಯು ಪುನರ್ಜನ್ಮವನ್ನು ಹೊಂದುವುದಿಲ್ಲ.

೧೪. ದರಿದ್ರನಾಗಿರುವ ಬ್ರಾಹ್ಮಣೋತ್ತಮನಿಗೆ ಒಂದು ಹಸುವಿನ ಚರ್ಮದ ಪರಿಮಾಣವುಳ್ಳ ಅಲ್ಪ ಭೂಮಿಯನ್ನಾದರೂ ದಾನಮಾಡಿದ ಸುಕೃತಿಯು ಸಮಸ್ತ ಪಾಪಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ.

ಭೂಮಿದಾನಾತ್ಪರಂ ದಾನಂ ವಿದ್ಯತೇ ನೇಹ ಕಿಂಚನ ।
ಅನ್ನದಾನಂ ತೇನ ತುಲ್ಯಂ ವಿದ್ಯಾದಾನಂ ತತೋಽಧಿಕಮ್ ॥ ೧೫ ॥

ಯೋ ಬ್ರಾಹ್ಮಣಾಯ ಶುಚಯೇ ಧರ್ಮಶೀಲಾಯ ಶೀಲಿನೇ ।
ದದಾತಿ ವಿದ್ಯಾಂ ವಿಧಿನಾ ಬ್ರಹ್ಮಲೋಕೇ ಮಹೀಯತೇ ॥ ೧೬ ॥

ದದ್ಯಾದಹರಹಸ್ತ್ವನ್ನಂ ಶ್ರದ್ಧಯಾ ಬ್ರಹ್ಮಚಾರಿಣೇ ।
ಸರ್ವಪಾಪವಿನಿರ್ಮುಕ್ತೋ ಬ್ರಾಹ್ಮಣಂ ಸ್ಥಾನಮಾಪ್ನುಯಾತ್ ॥೧೭॥

ಗೃಹಸ್ಥಾಯಾನ್ನದಾನೇನ ಫಲಂ ಪ್ರಾಪ್ನೋತಿ ಮಾನವಃ ।
ಆಗಮೇ ಚಾಸ್ಯ ದಾತವ್ಯಂ ದತ್ವಾಪ್ನೋತಿ ಪರಾಂ ಗತಿಮ್ ॥ ೧೮ ॥

---

೧೫. ಭೂಮಿ ದಾನವನ್ನು ಮೀರುವ ಯಾವುದೊಂದು ಸಾಮಾನ್ಯದಾನವೂ ಈ ಜಗತ್ತಿನಲ್ಲಿ ಇರುವುದಿಲ್ಲ. ಅಂತಹ ಭೂಮಿದಾನಕ್ಕೆ ಅನ್ನದಾನವು ಸಮಾನವೆನಿಸಿರುವುದು. ವಿದ್ಯಾದಾನವು ಅದಕ್ಕೂ ಹೆಚ್ಚಿನದಾಗಿರುವುದು.

೧೬. ಯಾವ ಮನುಷ್ಯನು ಶುಚಿಯೂ, ಧರ್ಮದಲ್ಲಿ ಆಸಕ್ತಿಯುಳ್ಳವನೂ, ಆಚಾರವಂತನೂ ಮತ್ತು ಶ್ರದ್ಧಾವಂತನೂ ಆದ ಬ್ರಾಹ್ಮಣನಿಗೆ ವಿಧಿಪೂರ್ವಕವಾಗಿ ವಿದ್ಯೆಯನ್ನು ದಾನಮಾಡುವನೊ, ಅವನು ಬ್ರಹ್ಮಲೋಕವನ್ನು ಸೇರಿ ಅಲ್ಲಿ ಪೂಜ್ಯನಾಗುತ್ತಾನೆ.

೧೭. ಪ್ರತಿ ನಿತ್ಯದಲ್ಲಿಯೂ ಯೋಗ್ಯನಾದ ಬ್ರಹ್ಮಚಾರಿಗೆ ಅನ್ನವನ್ನು ದಾನಮಾಡಬೇಕು. ಅಂತಹ ಅನ್ನದಾನದಿಂದ ಸಮಸ್ತಪಾಪಗಳಿಂದ ಮುಕ್ತನಾಗಿ ಬ್ರಹ್ಮಲೋಕವನ್ನು ಹೊಂದುವನು.

೧೮. ಹೀಗೆ ಮಾನವನು ಗೃಹಸ್ಥನಿಗೆ ಅನ್ನದಾನವನ್ನುಮಾಡಿ ಉತ್ತಮವಾದ ಫಲವನ್ನು ಹೊಂದುತ್ತಾನೆ. ಗೃಹಸ್ಥನು ಅತಿಥಿರೂಪನಾಗಿ ಬಂದಿರುವ ಸಮಯದಲ್ಲಿ ಅವನಿಗೆ ದಾನಮಾಡಬೇಕು. ಹಾಗೆ ದಾನಮಾಡಿ ಪರಮಪದವಿಯನ್ನು ಹೊಂದುತ್ತಾನೆ.

ವೈಶಾಖ್ಯಾಂ ಪೌರ್ಣಮಾಸ್ಯಾಂ ತು ಬ್ರಾಹ್ಮಣಾನ್ ಸಪ್ತ ಪಂಚ ವಾ ।
ಉಪೋಷ್ಯ ವಿಧಿನಾ ಶಾಂತಾನ್ ಶುಚೀನ್ ಪ್ರಯತಮಾನಸಾನ್॥ ೧೯ ॥

ಪೂಜಯಿತ್ವಾ ತಿಲೈಃ ಕೃಷ್ಣೈರ್ಮಧುನಾ ಚ ವಿಶೇಷತಃ ।
ಗಂಧಾದಿಭಿಃ ಸಮಭ್ಯರ್ಚ್ಯ ವಾಚಯೇದ್ವಾ ಸ್ವಯಂ ವದೇತ್ ॥ ೨೦ ॥

ಪ್ರೀಯತಾಂ ಧರ್ಮರಾಜೇತಿ ಯದ್ವಾ ಮನಸಿ ವರ್ತತೇ ।
ಯಾವಜ್ಜೀವಂ ಕೃತಂ ಪಾಪಂ ತತ್ಕ್ಷಣಾದೇವ ನಶ್ಯತಿ ॥ ೨೧ ॥

ಕೃಷ್ಣಾಜಿನೇ ತಿಲಾನ್ ದತ್ತ್ವಾ ಹಿರಣ್ಯಂ ಮಧುಸರ್ಪಿಷೀ ।
ದದಾತಿ ಯಸ್ತು ವಿಪ್ರಾಯ ಸರ್ವಂ ತರತಿ ದುಷ್ಕೃತಮ್ ॥ ೨೨ ॥

---

೧೯. ವೈಶಾಖಮಾಸದ ಪೂರ್ಣಿಮೆಯಲ್ಲಿ ಶಾಸ್ತ್ರವಿಧಿಯಂತೆ ಉಪವಾಸ ಮಾಡಿ ಪರಿಶುದ್ಧರೂ ಪವಿತ್ರವಾದ ಮಾನಸವುಳ್ಳವರೂ, ಶಾಂತಿಗುಣದಿಂದ ಕೂಡಿದವರೂ ಆದ ಏಳು ಅಥವಾ ಐದು ಮಂದಿ ಬ್ರಾಹ್ಮಣರನ್ನು ಸತ್ಕರಿಸಬೇಕು.

೨೦. ಅಂತಹ ಬ್ರಾಹ್ಮಣರನ್ನು ಕೃಷ್ಣತಿಲ ಮಧುಗಳಿಂದ ವಿಶೇಷವಾಗಿ ಸತ್ಕರಿಸಿ ಗಂಧ ಮುಂತಾದ ಉಪಚಾರಗಳಿಂದ ಆರಾಧಿಸಿ ಅವರಿಂದ ಮುಂದೆ ಹೇಳುವ ವಚನವನ್ನು ಹೇಳಿಸಬೇಕು. ಅಥವಾ ತಾನು ಪಠಿಸಬೇಕು.

೨೧. ಬ್ರಾಹ್ಮಣರಿಂದ ಹೇಳಿಸುವ ಅಥವಾ ತಾನು ಪಠಿಸುವ ಮಂತ್ರವು "ಪ್ರೀಯತಾಂ ಧರ್ಮರಾಜಾಯ-ಧರ್ಮರಾಜನಿಗೆ ಪ್ರೀತಿಯಾಗಲಿ" ಎಂಬುದಾಗಿದೆ. ಇದನ್ನು ಮಾನಸದಲ್ಲಿಯಾದರೂ ಸ್ಮರಿಸಬೇಕು. ಈ ಆಚರಣೆಯಿಂದ ಜನ್ಮಾರಂಭದಿಂದ ಮಾಡಿದ ಸಮಸ್ತ ಪಾತಕಗಳು ಆ ಕ್ಷಣದಲ್ಲಿ ನಾಶಹೊಂದುವುವು.

೨೨. ಕೃಷ್ಣಾಜಿನದಲ್ಲಿ ತಿಲ, ಹಿರಣ್ಯ, ಮಧು, ಮತ್ತು ಆಜ್ಯಗಳನ್ನು ಇರಿಸಿ ವಿಪ್ರನಿಗೆ ದಾನ ಮಾಡಿದ ಮನುಷ್ಯನು ದಾನ ಮಹಿಮೆಯಿಂದ ತನ್ನ ಪಾತಕಗಳನ್ನು ಕಳೆದು ಕೊಳ್ಳುತ್ತಾನೆ.

ಕೃತಾನ್ನಮುದಕುಂಭಂ ಚ ವೈಶಾಖ್ಯಾಂ ಚ ವಿಶೇಷತಃ ।
ನಿರ್ದಿಶ್ಯ ಧರ್ಮರಾಜಾಯ ವಿಪ್ರೇಭ್ಯೋ ಮುಚ್ಯತೇ ಭಯಾತ್ ॥ ೨೩ ॥

ಸುವರ್ಣತಿಲಯುಕ್ತೈಸ್ತು ಬ್ರಾಹ್ಮಣಾನ್ ಸಪ್ತ ಪಂಚ ವಾ ।
ತರ್ಪಯೇದುದಪಾತ್ರಾಣಿ ಬ್ರಹ್ಮಹತ್ಯಾಂ ವ್ಯಪೋಹತಿ ॥ ೨೪ ॥

ಮಾಘಮಾಸೇ ತು ವಿಪ್ರಸ್ತು ದ್ವಾದಶ್ಯಾಂ ಸಮುಪೋಷಿತಃ ।
ಶುಕ್ಲಾಂಬರಧರಃ ಕೃಷ್ಣೈಸ್ತಿಲೈರ್ಹುತ್ವಾ ಹುತಾಶನಮ್ ॥ ೨೫ ॥

ಪ್ರದದ್ಯಾದ್ಬ್ರಾಹ್ಮಣೇಭ್ಯಸ್ತು ವಿಪ್ರೇಭ್ಯಃ ಸುಸಮಾಹಿತಃ ।
ಜನ್ಮಪ್ರಭೃತಿ ಯತ್ಪಾಪಂ ಸರ್ವಂ ತರತಿ ವೈ ದ್ವಿಜಃ ॥ ೨೬ ॥

---

೨೩. ವೈಶಾಖ ಮಾಸದ ಪೂರ್ಣಿಮೆಯಲ್ಲಿ ವಿಶೇಷವಾಗಿ ಸಿದ್ಧವಾದ ಅನ್ನವನ್ನೂ, ಉದಕುಂಭವನ್ನೂ, ಯಮಧರ್ಮರಾಜನ ಪ್ರೀತಿಯಾಗಲೆಂದು ನಿರ್ದೇಶಿಸಿ ವಿಪ್ರನಿಗೆ ದಾನ ಮಾಡುವುದರಿಂದ ಎಲ್ಲ ಭಯಗಳಿಂದ ಮುಕ್ತನಾಗುವನು.

೨೪. ಏಳು ಅಥವಾ ಐದು ಮಂದಿ ಬ್ರಾಹ್ಮಣರಿಗೆ ಸುವರ್ಣದಿಂದ ಮಾಡಿದ ತಿಲಗಳಿಂದ ಕೂಡಿದ ಉದಕುಂಭಗಳನ್ನು ಕೊಟ್ಟು ತೃಪ್ತಿಯನ್ನು ಉಂಟು ಮಾಡುವುದರಿಂದ ಬ್ರಹ್ಮ ಹತ್ಯಾ ಪಾಪದಿಂದ ಬಿಡುಗಡೆಯನ್ನು ಹೊಂದುವನು.

೨೫. ಮಾಘ ಮಾಸದಲ್ಲಿ ದ್ವಾದಶೀ ತಿಥಿಯಲ್ಲಿ ವಿಪ್ರನು ಉಪವಾಸ ವ್ರತವನ್ನು ಆಚರಿಸಿ ಪವಿತ್ರವಾದ ವಸ್ತ್ರಗಳನ್ನು ಧರಿಸಿ ಕೃಷ್ಣ ತಿಲಧ್ಯಾನದಿಂದ ಅಗ್ನಿಯಲ್ಲಿ ಹೋಮ ಮಾಡುವುದು ಶ್ರೇಯಸ್ಕರವಾದುದು.

೨೬. ಮತ್ತು ಅಂತಹ ತಿಲಧಾನ್ಯವನ್ನು ಹಿರಣ್ಯ ಸಹಿತವಾಗಿ ಬ್ರಹ್ಮನಿಷರಾದ ಬ್ರಾಹ್ಮಣರಿಗೆ ಚಿತ್ತ ಶಾಂತಿಯಿಂದ ಕೂಡಿ ದಾನಮಾಡಿದರೆ ವಿಪ್ರನು ತಾನು ಜನ್ಮವೆತ್ತಿದಾಗಿನಿಂದ ಮಾಡಿದ ಸಕಲ ಪಾಪಗಳನ್ನ ದಾಟುತ್ತಾನೆ.

ಅಮಾವಾಸ್ಯಾಮನುಪ್ರಾಪ್ಯ ಬ್ರಾಹ್ಮಣಾಯ ತಪಸ್ವಿನೇ ।
ಯತ್ಕಿಂಚಿದ್ದೇವದೇವೇಶಂ ದದ್ಯಾದ್ಯೋದ್ದಿಶ್ಯ ಶಂಕರಮ್ ॥ ೨೭ ॥

ಪ್ರೀಯತಾಮೀಶ್ವರಃ ಸೋಮೋ ಮಹಾದೇವಃ ಸನಾತನಃ ।
ಸಪ್ತಜನ್ಮಕೃತಂ ಪಾಪಂ ತತ್ಕ್ಷಣಾದೇವ ನಶ್ಯತಿ ॥ ೨೮ ॥

ಯಸ್ತು ಕೃಷ್ಣಚತುರ್ದಶ್ಯಾಂ ಸ್ನಾತ್ವಾ ದೇವಂ ಪಿನಾಕಿನಮ್ ।
ಆರಾಧಯೇದ್ದ್ವಿಜಮುಖೇ ನ ತಸ್ಯಾಸ್ತಿ ಪುನರ್ಭವಃ ॥ ೨೯ ॥

ಕೃಷ್ಣಾಷ್ಟಮ್ಯಾಂ ವಿಶೇಷೇಣ ಧಾರ್ಮಿಕಾಯ ದ್ವಿಜಾತಯೇ ।
ಸ್ನಾತ್ವಾಭ್ಯರ್ಚ್ಯ ಯಥಾನ್ಯಾಯಂ ಪಾದಪ್ರಕ್ಷಾಲನಾದಿಭಿಃ ॥ ೩೦ ॥

---

೨೭. ಅಮಾವಾಸ್ಯಾ ತಿಥಿಯು ಬಂದಿರುವ ಸಮಯದಲ್ಲಿ ದೇವೋತ್ತಮನಾದ ಶಂಕರನನ್ನು ಉದ್ದೇಶಿಸಿ ತಪಸ್ವಿಯಾದ ಬ್ರಾಹ್ಮಣೋತ್ತಮನಿಗೆ ಯಾವುದಾದರೊಂದು ದ್ರವ್ಯವನ್ನು ದಾನಮಾಡುವುದು ಶ್ರೇಯಸ್ಕರವಾಗಿದೆ.

೨೮. ಉಮಾದೇವಿಯಿಂದ ಕೂಡಿರುವವನೂ, ಪುರಾಣನೂ, ಸರ್ವೇಶ್ವರನೂ ಆದ ಮಹಾ ದೇವನು ಪ್ರೀತಿ ಹೊಂದಬೇಕೆಂಬ ಉದ್ದೇಶದಿಂದ ಮಾಡಿದ ದಾನದಿಂದ ಹಿಂದಿನ ಏಳು ಜನ್ಮಗಳಲ್ಲಿ ಮಾಡಿರುವ ಪಾಪ ಪುಂಜವು ಆ ಕ್ಷಣದಲ್ಲಿ ನಾಶಹೊಂದುವುದು.

೨೯. ಯಾವ ಮಾನವನು ಕೃಷ್ಣ ಪಕ್ಷದ ಚತುರ್ದಶಿಯಲ್ಲಿ ಸ್ನಾನಮಾಡಿ ಬ್ರಾಹ್ಮಣರಲ್ಲಿ ಪಿನಾಕಾಯುಧ ಧಾರಿಯಾದ ಮಹೇಶ್ವರನನ್ನು ಉದ್ದೇಶಿಸಿ ಸತ್ಕಾರ ಮಾಡುವನೊ, ಅವನಿಗೆ ಪುನರ್ಜನ್ಮವಿಲ್ಲದೆ ಮುಕ್ತಿಯು ಲಭಿಸುವುದು.

೩೦. ವಿಶೇಷವಾಗಿ ಕೃಷ್ಣ ಪಕ್ಷದ ಅಷ್ಟಮಿಯಲ್ಲಿ ಸ್ನಾನದಿಂದ ಪವಿತ್ರನಾಗಿ ಧಾರ್ಮಿಕನಾದ ದ್ವಿಜನಿಗೆ ಪಾದ ಪ್ರಕ್ಷಾಳನಾದಿ ಉಪಚಾರಗಳಿಂದ ನ್ಯಾಯಾನುಸಾರವಾಗಿ ಅರ್ಚನೆ ಮಾಡಬೇಕು.

ಪ್ರೀಯತಾಂ ಮೇ ಮಹಾದೇವೋ ದದ್ಯಾದ್ದ್ರವ್ಯಂ ಸ್ವಕೀಯಕಮ್ ।
ಸರ್ವಪಾಪವಿನಿರ್ಮುಕ್ತಃ ಪ್ರಾಪ್ನೋತಿ ಪರಮಾಂ ಗತಿಮ್ ॥ ೩೧ ॥

ದ್ವಿಜೈಃ ಕೃಷ್ಣಚತುರ್ದಶ್ಯಾಂ ಕೃಷ್ಣಾಷ್ಟಮ್ಯಾಂ ವಿಶೇಷತಃ ।
ಅಮಾವಾಸ್ಯಾಂ ತು ವೈ ಭಕ್ತೈಃ ಪೂಜನೀಯಸ್ತ್ರಿಲೋಚನಃ ॥ ೩೨ ॥

ಏಕಾದಶ್ಯಾಂ ನಿರಾಹಾರೋ ದ್ವಾದಶ್ಯಾಂ ಪುರುಷೋತ್ತಮಮ್ ।
ಅರ್ಚಯೇದ್ಬ್ರಾಹ್ಮಣಮುಖೇ ಸ ಗಚ್ಛೇತ್ಪರಮಂ ಪದಮ್ ॥ ೩೩ ॥

ಏಷಾ ತಿಥಿರ್ವೈಷ್ಣವೀ ಸ್ಯಾದ್ದ್ವಾದಶೀ ಶುಕ್ಲಪಕ್ಷಕೇ ।
ತಸ್ಯಾಮಾರಾಧಯೇದ್ದೇವಂ ಪ್ರಯತ್ನೇನ ಜನಾರ್ದನಮ್ ॥ ೩೪ ॥

---

೩೧. ಆಗ ದೇವೋತ್ತಮನಾದ ಶಂಕರನು ನನ್ನಲ್ಲಿ ಸುಪ್ರೀತನಾಗಲಿ ಎಂದು ಸಂಕಲ್ಪಿಸಿ ತನ್ನದಾದ ದ್ರವ್ಯವನ್ನು ದಾನಮಾಡಬೇಕು. ಅದರಿಂದ ಸಮಸ್ತ ಪಾಪಗಳನ್ನು ಕಳೆದುಕೊಂಡವನಾಗಿ ಪರಮ ಪದವಿಯನ್ನು ಹೊಂದುತ್ತಾನೆ.

೩೨. ದ್ವಿಜರು ಕೃಷ್ಣ ಪಕ್ಷದ ಅಷ್ಟಮಿ, ಚತುರ್ದಶಿ ಮತ್ತು ಅಮಾವಾಸ್ಯಾ ತಿಥಿಗಳಲ್ಲಿ ವಿಶೇಷವಾಗಿ ದೈವಭಕ್ತರಾದ ವಿಪ್ರರಲ್ಲಿ ಅನ್ನದಾನಮಾಡಿ ಈಶ್ವರನನ್ನು ಆರಾಧಿಸಬೇಕು.

೩೩. ಮತ್ತು ಏಕಾದಶೀ ತಿಥಿಯಲ್ಲಿ ಉಪವಾಸ ಮಾಡಿ ದ್ವಾದಶೀ ತಿಥಿಯಲ್ಲಿ ವಿಪ್ರರೂಪ ಸತ್ಪಾತ್ರದಲ್ಲಿ ಪುರುಷೋತ್ತಮನನ್ನು ಪೂಜಿಸುವುದರಿಂದ ಉತ್ತಮ ಸ್ಥಾನವನ್ನು ಹೊಂದುವನು.

೩೪. ಶುಕ್ಲ ಪಕ್ಷಕ್ಕೆ ಸೇರಿದ ದ್ವಾದಶೀ ತಿಥಿಯು ವಿಷ್ಣುವಿಗೆ ಪ್ರಿಯವಾದ ತಿಥಿಯಾಗಿರುವುದು. ಆದುದರಿಂದ ಆ ತಿಥಿಯಲ್ಲಿ ಪ್ರಯತ್ನ ಪೂರ್ವಕವಾಗಿ ವಿಷ್ಣುವನ್ನು ಆರಾಧಿಸಬೇಕು.

ಯತ್ಕಿಂಚಿದ್ದೇವಮೀಶಾನಮುದ್ದಿಶ್ಯ ಬ್ರಾಹ್ಮಣೇ ಶುಚೌ ।
ದೀಯತೇ ವಿಷ್ಣವೇ ವಾಪಿ ತದನಂತಫಲಪ್ರದಮ್ ॥ ೩೫ ॥

ಯೋ ಹಿ ಯಾಂ ದೇವತಾಮಿಚ್ಛೇತ್ ಸಮಾರಾಧಯಿತುಂ ನರಃ ।
ಬ್ರಾಹ್ಮಣಾನ್ ಪೂಜಯೇದ್ವಿದ್ವಾನ್ ಸ ತಸ್ಯಾಸ್ತೋಷಹೇತುತಃ ॥ ೩೬ ॥

ದ್ವಿಜಾನಾಂ ವಪುರಾಸ್ಥಾಯ ನಿತ್ಯಂ ತಿಷ್ಠಂತಿ ದೇವತಾಃ ।
ಪೂಜ್ಯಂತೇ ಬ್ರಾಹ್ಮಣಾಲಾಭೇ ಪ್ರತಿಮಾದಿಷ್ವಪಿ ಕ್ವಚಿತ್ ॥ ೩೭ ॥

ತಸ್ಮಾತ್ಸರ್ವಪ್ರಯತ್ನೇನ ತತ್ತತ್ಫಲಮಭೀಪ್ಸುಭಿಃ ।
ದ್ವಿಜೇಷು ದೇವತಾ ನಿತ್ಯಂ ಪೂಜನೀಯಾ ವಿಶೇಷತಃ ॥ ೩೮ ॥

---

೩೫. ಸರ್ವೇಶ್ವರನಾದ ಶಂಕರನನ್ನಾಗಲೀ, ವಿಷ್ಣುವನ್ನಾಗಲೀ, ಉದ್ದೇಶಿಸಿ ಪವಿತ್ರನಾದ ಬ್ರಾಹ್ಮಣೋತ್ತಮನಲ್ಲಿ ಮಾಡಿದ ಯತ್ಕಿಂಚಿತ್ತಾದ ದ್ರವ್ಯ ದಾನವು ದಾನದ ಅನಂತವಾದ ಫಲವನ್ನು ಕೊಡುವುದು.

೩೬. ಯಾವ ಮಾನವನು ಯಾವ ದೇವತೆಯನ್ನು ಆರಾಧಿಸಲು ಇಷ್ಟವುಳ್ಳವನಾಗುವನೊ, ಜ್ಞಾನಿಯಾದ ಆ ಮಾನವನು ದೇವತೆಯ ಪ್ರಸಾದ ಲಾಭಕ್ಕೋಸ್ಕರ ಬ್ರಾಹ್ಮಣನನ್ನು ಪೂಜಿಸಬೇಕು.

೩೭. ದೇವತೆಗಳು ಸರ್ವ ಕಾಲದಲ್ಲಿಯೂ ಬ್ರಾಹ್ಮಣ ರೂಪವಾದ ವಿಗ್ರಹವನ್ನು ಸ್ವೀಕರಿಸಿ ಇರುವರು. ಅಂತಹ ಬ್ರಾಹ್ಮಣರು ಲಭಿಸದಿರುವ ಪಕ್ಷದಲ್ಲಿ ಆಯಾಯ ದೇವತೆಗಳ ಪ್ರತಿಮೆಗಳಲ್ಲಿಯಾದರೂ ದೇವತೆಯನ್ನು ಪೂಜಿಸಬೇಕು.

೩೮. ಆದ್ದರಿಂದ ಆಯಾಯ ಫಲ ವಿಶೇಷಗಳನ್ನು ಅಕಾಂಕ್ಷಿಸುವ ಮಾನವರು ಸಕಲ ಪ್ರಯತ್ನ ಪೂರ್ವಕವಾಗಿ ದ್ವಿಜರಲ್ಲಿ ಯಾವಾಗಲೂ ವಿಶೇಷವಾಗಿ ದೇವತೆಗಳನ್ನು ಪೂಜಿಸಬೇಕು.

ವಿಭೂತಿಕಾಮಃ ಸತತಂ ಪೂಜಯೇದ್ವೈ ಪುರಂದರಮ್ ।
ಬ್ರಹ್ಮವರ್ಚಸಕಾಮುಸ್ತು ಬ್ರಹ್ಮಾಣಂ ಬ್ರಹ್ಮಕಾಮುಕಃ ॥ ೩೯ ॥

ಆರೋಗ್ಯಕಾಮೋಽಥ ರವಿಂ ಧೇನುಕಾಮೋ ಹುತಾಶನಮ್ ।
ಕರ್ಮಣಾಂ ಸಿದ್ಧಿಕಾಮುಸ್ತು ಪೂಜಯೇದ್ವೈ ವಿನಾಯಕಮ್ ॥ ೪೦ ॥

ಭೋಗಕಾಮಸ್ತು ಶಶಿನಂ ಬಲಕಾಮಃ ಸಮೀರಣಮ್ ।
ಮುಮುಕ್ಷುಃ ಸರ್ವಸಂಸಾರಾತ್ ಪ್ರಯತ್ನೇನಾರ್ಚಯೇದ್ಧರಿಮ್॥ ೪೧॥

ಯಸ್ತು ಯೋಗಂ ತಥಾ ಮೋಕ್ಷಮಿಚ್ಛೇತ್ತಜ್ಞಾನಮೈಶ್ವರಮ್ ।
ಸೋಽರ್ಚಯೇದ್ವೈ ವಿರೂಪಾಕ್ಷಂ ಪ್ರಯತ್ನೇನ ಮಹೇಶ್ವರಮ್ ॥೪೨॥

---

೩೯. ಸಂಪತ್ತಿಗೆ ಇಷ್ಟವುಳ್ಳ ಮನುಷ್ಯನು ಯಾವಾಗಲೂ ಇಂದ್ರದೇವತೆಯನ್ನು ವಿಶೇಷವಾಗಿ ಅರ್ಚಿಸಬೇಕು. ವೇದಾಧ್ಯಯನ ಸಂಪತ್ತಿಯಿಂದ ಲಭಿಸುವ ಬ್ರಹ್ಮ ವರ್ಚಸವು ಲಭಿಸಬೇಕೆಂಬ ಇಚ್ಛೆಯುಳ್ಳವನು ಬ್ರಹ್ಮದೇವನನ್ನು ಆರಾಧಿಸಬೇಕು.

೪೦. ಹಾಗು ಆರೋಗ್ಯ ಲಾಭದಲ್ಲಿ ಇಷ್ಟವುಳ್ಳವನು ಸೂರ್ಯ ದೇವನನ್ನೂ ಹಸುಗಳನ್ನು ಹೊಂದಲು ಇಚ್ಛೆಯುಳ್ಳವನು ಅಗ್ನಿದೇವತೆಯನ್ನೂ ಅರ್ಚಿಸಬೇಕು. ಆರಂಭಿಸಿದ ಕರ್ಮಗಳು ಸಿದ್ಧಿಯಾಗಬೇಕೆಂಬ ಆಕಾಂಕ್ಷೆಯುಳ್ಳವನು ವಿನಾಯಕನನ್ನು ಪೂಜಿಸಬೇಕು.

೪೧. ವಿಷಯಭೋಗದಲ್ಲಿ ಕಾಮನೆಯುಳ್ಳವನು ಚಂದ್ರದೇವನನ್ನೂ ಶರೀರ ಬಲದಲ್ಲಿ ಅಭಿಲಾಷೆಯುಳ್ಳವನು ವಾಯುದೇವನನ್ನೂ ಹಾಗು ಸರ್ವಸಂಸಾರ ತಾಪಗಳ ಬಿಡುಗಡೆಯನ್ನು ಹೊಂದಲು ಇಷ್ಟವುಳ್ಳವನು ವಿಷ್ಣುವನ್ನೂ ಸರ್ವಪ್ರಯತ್ನಗಳಿಂದ ಪೂಜಿಸಬೇಕು.

೪೨. ಯಾವ ಮನುಜನು ಯೋಗ, ಮೋಕ್ಷ ಮತ್ತು ಈಶ್ವರ ಜ್ಞಾನವನ್ನು ಹೊಂದಲು ಇಷ್ಟಪಡುವನೊ, ಅವನು ಮೂರು ನೇತ್ರಗಳಿಂದ ಕೂಡಿದ ಮಹೇಶ್ವರನನ್ನು ಯತ್ನಪೂರ್ವಕವಾಗಿ ಆರಾಧಿಸಬೇಕು.

ಯೇ ವಾಂಛಂತಿ ಮಹಾಯೋಗಾನ್ ಜ್ಞಾನಾನಿ ಚ ಮಹೇಶ್ವರಮ್ ।
ತೇ ಪೂಜಯಂತಿ ಭೂತೇಶಂ ಕೇಶವಂ ಚಾಪಿ ಭೋಗಿನಃ ॥ ೪೩ ॥

ವಾರಿದಸ್ತೃಪ್ತಿಮಾಪ್ನೋತಿ ಸುಖಮಕ್ಷಯ್ಯಮನ್ನದಃ ।
ತಿಲಪ್ರದಃ ಪ್ರಜಾಮಿಷ್ಟಾಂ ದೀಪದಶ್ಚಕ್ಷುರುತ್ತಮಮ್ ॥ ೪೪ ॥

ಭೂಮಿದಃ ಸರ್ವಮಾಪ್ನೋತಿ ದೀರ್ಘಮಾಯುರ್ಹಿರಣ್ಯದಃ ।
ಗೃಹದೋಽಗ್ರ್ಯಾಣಿ ವೇಶ್ಮಾನಿ ರೂಪ್ಯದೋ ರೂಪಮುತ್ತಮಮ್॥ ೪೫ ॥

ವಾಸೋದಶ್ಚಂದ್ರಸಾಲೋಕ್ಯಮಶ್ವಿಸಾಲೋಕ್ಯಮಶ್ವದಃ ।
ಅನಡುದ್ಧಃ ಶ್ರಿಯಂ ಪುಷ್ಟಾಂ ಗೋದೋ ಬ್ರಧ್ನಸ್ಯ ವಿಷ್ಟಪಮ್ ॥೪೬॥

---

೪೩. ಯಾವ ಮಾನವರು ಮಹಾಯೋಗ ಸಿದ್ಧಿಗಳನ್ನೂ, ಜ್ಞಾನಗಳನ್ನೂ ಬಯಸುವರೊ, ಅವರು ಸರ್ವಭೂತ ಪತಿಯಾದ ಮಹೇಶ್ವರನನ್ನಾಗಲಿ, ವಿಷ್ಣು ವನ್ನಾಗಲಿ ಅರ್ಚಿಸಿ ಆಯಾಯ ಫಲಭೋಗಿಗಳಾಗುವರು

೪೪. ಸತ್ಪಾತ್ರನಲ್ಲಿ ಜಲದಾನಮಾಡಿದವನು ತೃಪ್ತಿಯನ್ನೂ, ಅನ್ನದಾನ ಮಾಡಿದವನು ಅಕ್ಷಯವಾದ ಸುಖವನ್ನೂ ತಿಲಧಾನ್ಯವನ್ನು ದಾನಮಾಡಿದವನು ತನಗೆ ಇಷ್ಟವಾದಂತಹ ಸಂತತಿಯನ್ನೂ ಮತ್ತು ದೀಪದಾನಮಾಡಿದವನು ಪಾಟವ ದಿಂದ ಕೂಡಿದ ನೇತ್ರೇಂದ್ರಿಯವನ್ನೂ ಹೊಂದುವನು.

೪೫. ಭೂಮಿ ದಾನಮಾಡಿದವನು ಸಮಸ್ತಫಲಗಳನ್ನೂ, ಹಿರಣ್ಯವನ್ನು ದಾನಮಾಡಿದವನು ದೀರ್ಘಾಯುಷ್ಯವನ್ನೂ, ಗೃಹದಾನ ಮಾಡಿರುವವನು ಶ್ರೇಷ್ಠ ವಾದ ಗೃಹಗಳನ್ನೂ ಮತ್ತು ಬೆಳ್ಳಿಯನ್ನು ದಾನಮಾಡಿದವನು ಶ್ಲಾಘ್ಯವಾದ ರೂಪ ವನ್ನೂ ಹೊಂದುವನು.

೪೬. ವಸ್ತ್ರದಾನದಿಂದ ಚಂದ್ರನ ಲೋಕವನ್ನೂ ಅಶ್ವದ ದಾನದಿಂದ ಅಶ್ವಿನೀ ದೇವತೆಗಳ ಲೋಕವನ್ನೂ, ವೃಷಭಗಳನ್ನು ದಾನಮಾಡುವುದರಿಂದ ಸಮೃದ್ಧಿಯಾದ ಸಂಪತ್ತಿಯನ್ನೂ ಮತ್ತು ಗೋದಾನದಿಂದ ಬ್ರಹ್ಮಲೋಕವನ್ನೂ ಹೊಂದುತ್ತಾನೆ.

ಯಾನಶಯ್ಯಾಪ್ರದೋ ಭಾರ್ಯಾಮೈಶ್ವರ್ಯಮಭಯಪ್ರದಃ ।
ಧಾನ್ಯದಃ ಶಾಶ್ವತಂ ಸೌಖ್ಯಂ ಬ್ರಹ್ಮಣೋ ಬ್ರಹ್ಮಸಾತ್ಮ್ಯತಾಮ್ ॥೪೭॥

ಧಾನ್ಯಾನ್ಯಪಿ ಯಥಾಶಕ್ತಿ ವಿಪ್ರೇಷು ಪ್ರತಿಪಾದಯೇತ್ ।
ವೇದವಿತ್ಸು ವಿಶಿಷ್ಟೇಷು ಪ್ರೇತ್ಯ ಸ್ವರ್ಗಂ ಸಮಶ್ನುತೇ ॥ ೪೮ ॥

ಗವಾಂ ವಾ ಸಂಪ್ರದಾನೇನ ಸರ್ವಪಾಪೈಃ ಪ್ರಮುಚ್ಯತೇ ।
ಇಂಧನಾನಾಂ ಪ್ರದಾನೇನ ದೀಪ್ತಾಗ್ನಿರ್ಜಾಯತೇ ನರಃ ॥ ೪೯ ॥

ಫಲಮೂಲಾನಿ ಶಾಕಾನಿ ಭೋಜ್ಯಾನಿ ವಿವಿಧಾನಿ ಚ ।
ಪ್ರದದ್ಯಾದ್ಬ್ರಾಹ್ಮಣೇಭ್ಯಸ್ತು ಮುದಾಯುಕ್ತಃ ಸ್ವಯಂ ಭವೇತ್॥೫೦॥

---

೪೭. ವಾಹನ-ಶಯನಗಳನ್ನು ದಾನಮಾಡಿದವನು ಭಾರ್ಯೆಯನ್ನೂ, ಅಭಯ ದಾನಮಾಡಿದವನು ಐಶ್ವರ್ಯವನ್ನೂ, ಧಾನ್ಯದಾನವನ್ನು ಮಾಡಿದವನು ಶಾಶ್ವತವಾದ ಸೌಖ್ಯವನ್ನೂ ಮತ್ತು ವೇದವಿದ್ಯಾದಾನ ಮಾಡಿದವನು ಬ್ರಹ್ಮೈಕ್ಯ ವನ್ನೂ ಹೊಂದುತ್ತಾನೆ.

೪೮. ವೇದವೇತ್ತರಾದ ಶ್ರೇಷ್ಠ ಬ್ರಾಹ್ಮಣರಲ್ಲಿ ಯಥಾಶಕ್ತಿಯಾಗಿ ವಿವಿಧ ಧಾನ್ಯಗಳನ್ನು ದಾನಮಾಡಬೇಕು. ಹಾಗೆ ಧಾನ್ಯದಾನದಿಂದ ಮರಣಾನಂತರದಲ್ಲಿ ಸ್ವರ್ಗ ಸುಖವನ್ನು ಅನುಭವಿಸುತ್ತ ಪೂಜ್ಯನಾಗಿರುವನು.

೪೯. ಗೋವುಗಳ ದಾನದಿಂದ ಸಮಸ್ತಪಾತಕಗಳಿಂದ ಮೋಕ್ಷವುಂಟಾಗು ವುದು. ಕಾಷ್ಠಗಳನ್ನು ದಾನಮಾಡುವುದರಿಂದ ಮಾನವನು ದೀಪ್ತವಾದ ಜಾಠರಾಗ್ನಿ ಯುಳ್ಳವನಾಗುವನು.

೫೦. ಯೋಗ್ಯರಾದ ದ್ವಿಜರಲ್ಲಿ ನಾನಾವಿಧವಾದ ಫಲ-ಮೂಲಗಳನ್ನೂ ಅನೇಕ ವಿಧವಾದ ಭೋಜ್ಯವಸ್ತುಗಳನ್ನೂ ಅರ್ಪಿಸಬೇಕು. ಅದರಿಂದ ಮಾನವನು ಸಂತತ ವಾಗಿ ಸಂತೋಷಯುಕ್ತನಾಗುವನು.

ಔಷಧಂ ಸ್ನೇಹಮಾಹಾರಂ ರೋಗಿಣೇ ರೋಗಶಾಂತಯೇ ।
ದದಾನೋ ರೋಗರಹಿತಃ ಸುಖೀ ದೀರ್ಘಾಯುರೇವ ಚ　　॥ ೫೧ ॥

ಅಸಿಪತ್ರವನಂ ಮಾರ್ಗಂ ಕ್ಷುರಧಾರಾಸಮನ್ವಿತಮ್ ।
ತೀವ್ರಾತಪಂ ಚ ತರತಿ ಛತ್ರೋಪಾನತ್ಪ್ರದೋ ನರಃ　　॥ ೫೨ ॥

ಯದ್ಯದಿಷ್ಟತಮಂ ಲೋಕೇ ಯಚ್ಚಾಪಿ ದಯಿತಂ ಗೃಹೇ ।
ತತ್ತದ್ಗುಣವತೇ ದೇಯಂ ತದೇವಾಕ್ಷಯಮಿಚ್ಛತಾ　　॥ ೫೩ ॥

ಅಯನೇ ವಿಷುವೇ ಚೈವ ಗ್ರಹಣೇ ಚಂದ್ರಸೂರ್ಯಯೋಃ ।
ಸಂಕ್ರಾಂತ್ಯಾದಿಷು ಕಾಲೇಷು ದತ್ತಂ ಭವತಿ ಚಾಕ್ಷಯಮ್　　॥ ೫೪ ॥

---

೫೧. ರೋಗಿಯಾದ ಜಂತುವಿಗೆ ಅವನ ರೋಗದ ಶಾಂತಿಗೋಸ್ಕರ ಔಷಧ, ಸ್ನೇಹದಿಂದ ಕೂಡಿದ ಆಹಾರಗಳನ್ನು ಕೊಟ್ಟು ಉಪಚರಿಸಿದ ಮಾನವನು ರೋಗ ರಹಿತನೂ ಸುಖಶಾಲಿಯೂ ಮತ್ತು ದೀರ್ಘಾಯುಷ್ಮಂತನೂ ಆಗುತ್ತಾನೆ.

೫೨. ಛತ್ರಿ, ಪಾದರಕ್ಷೆಗಳನ್ನು ದಾನಮಾಡಿದ ಸುಕೃತಿಯು ಮೊನೆಯಾದ ಅನೇಕ ಶಸ್ತ್ರಗಳಿಂದ ಕೂಡಿದ ಮತ್ತು ತೀವ್ರವಾದ ಬಿಸಿಲಿನ ತಾಪದಿಂದ ಕೂಡಿದ ಅಸಿಪತ್ರವನವೆಂಬ ನರಕಮಾರ್ಗವನ್ನು ದಾಟುತ್ತಾನೆ.

೫೩. ಲೋಕದಲ್ಲಿ ಯಾವ ವಸ್ತುವು ಹೃದಯಂಗಮವಾಗಿರುವುದೊ. ಮತ್ತು ತನ್ನ ಗೃಹದಲ್ಲಿ ಯಾವ ವಸ್ತುವು ಪ್ರೀತಿ ವಿಷಯವಾಗಿರುವುದೊ, ಆಯಾಯ ವಸ್ತುವನ್ನು ಅಕ್ಷಯವಾದ ಭೋಗಸುಖವನ್ನು ಬಯಸುವವನು ಗುಣವಂತನಾದ ದ್ವಿಜನಲ್ಲಿ ದಾನಮಾಡಬೇಕು.

೫೪. ಅಯನ, ವಿಷುವ, ಚಂದ್ರ-ಸೂರ್ಯರ ಗ್ರಹಣ ಮತ್ತು ಸಂಕ್ರಾಂತಿ ಮುಂತಾದ ಪುಣ್ಯದಿನಗಳು ಪ್ರಾಪ್ತವಾಗಿರುವ ಸಮಯದಲ್ಲಿ ಮಾಡಿದ ದಾನವು ಅಕ್ಷಯವಾದ ಫಲಪ್ರಾಪ್ತಿಗೆ ಸಾಧನವಾಗುವುದು.

ಪ್ರಯಾಗಾದಿಷು ತೀರ್ಥೇಷು ಪುಣ್ಯೇಷ್ವಾಯತನೇಷು ಚ ।
ದತ್ವಾ ಚಾಕ್ಷಯಮಾಪ್ನೋತಿ ನದೀಷು ಚ ವನೇಷು ಚ ॥ ೫೫ ॥

ದಾನಧರ್ಮಾತ್ಪರೋ ಧರ್ಮೋ ಭೂತಾನಾಂ ನೇಹ ವಿದ್ಯತೇ ।
ತಸ್ಮಾದ್ವಿಪ್ರಾಯ ದಾತವ್ಯಂ ಶ್ರೋತ್ರಿಯಾಯ ದ್ವಿಜಾತಿಭಿಃ ॥ ೫೬ ॥

ಸ್ವರ್ಗಾಯುರ್ಭೂತಿಕಾಮೇನ ತಥಾ ಪಾಪೋಪಶಾಂತಯೇ ।
ಮುಮುಕ್ಷುಣಾ ಚ ದಾತವ್ಯಂ ಬ್ರಾಹ್ಮಣೇಭ್ಯಸ್ತಥಾನ್ವಹಮ್ ॥ ೫೭ ॥

ದೀಯಮಾನಂ ತು ಯೋ ಮೋಹಾದ್ಗೋವಿಪ್ರಾಗ್ನಿಸುರೇಷು ಚ ।
ನಿವಾರಯತಿ ಪಾಪಾತ್ಮಾ ತಿರ್ಯಗ್ಯೋನಿಂ ವ್ರಜೇತ್ತು ಸಃ ॥ ೫೮ ॥

---

೫೫. ಪ್ರಯಾಗ, ಮುಂತಾದ ತೀರ್ಥಗಳಲ್ಲಿಯೂ, ಪವಿತ್ರವಾದ ದೇವಾಲಯಗಳಲ್ಲಿಯೂ ಮತ್ತು ಶ್ರೇಷ್ಠವಾದ ನದೀ, ಅರಣ್ಯಗಳಲ್ಲಿಯೂ ದಾನಮಾಡಿ ಅಕ್ಷಯವಾದ ಫಲವನ್ನು ಹೊಂದುವನು.

೫೬. ಪ್ರಾಣಿಗಳಿಗೆ ದಾನವೆಂಬ ಧರ್ಮಕ್ಕಿಂತ ಅತಿಶಯವಾದ ಬೇರೊಂದು ಧರ್ಮವು ಇರುವುದಿಲ್ಲ. ಆದುದರಿಂದ ದ್ವಿಜರು ಶ್ರೋತ್ರಿಯನಾದ ವಿಪ್ರನಿಗೆ ಶಕ್ತಿಯನ್ನನುಸರಿಸಿ ದಾನಮಾಡಬೇಕು.

೫೭. ಸ್ವರ್ಗ-ಆಯುಷ್ಯ-ಸಂಪತ್ತಿ ಮುಂತಾದ ಕಾಮ್ಯಫಲಗಳ ಇಷ್ಟವುಳ್ಳವನು ಆಯಾಯ ಫಲಪ್ರಾಪ್ತಿಗೋಸ್ಕರವೂ ಮೋಕ್ಷೇಚ್ಛೆಯುಳ್ಳವನು ಪಾಪನಿವೃತ್ತಿಗೋಸ್ಕರವೂ ಬ್ರಾಹ್ಮಣರಿಗೆ ದಾನವನ್ನು ಮಾಡಬೇಕು.

೫೮. ಗೋವು, ವಿಪ್ರ, ಅಗ್ನಿ ಅಥವಾ ದೇವತೆಗಳಲ್ಲಿ ದಾನಮಾಡುವುದನ್ನು ಯಾರಾದರೊಬ್ಬನು ಮೋಹದಿಂದ ನಿವಾರಿಸುವುದಾದರೆ ಅಂತಹ ಪಾಪಿಯು ತಿರ್ಯಕ್ ಪಶುಜಾತಿಯನ್ನು ಹೊಂದುತ್ತಾನೆ.

ಯಸ್ತು ದ್ರವ್ಯಾರ್ಜನಂ ಕೃತ್ವಾ ನಾರ್ಚಯೇದ್ಬ್ರಾಹ್ಮಣಾನ್ ಸುರಾನ್ ।
ಸರ್ವಸ್ವಮಪಹೃತ್ಯೈನಂ ರಾಷ್ಟ್ರಾದ್ವಿಪ್ರತಿವಾಸಯೇತ್ ॥ ೫೯ ॥

ಯಸ್ತು ದುರ್ಭಿಕ್ಷವೇಲಾಯಾಮನ್ನಾದ್ಯಂ ನ ಪ್ರಯಚ್ಛತಿ ।
ಮ್ರಿಯಮಾಣೇಷು ಸತ್ತ್ವೇಷು ಬ್ರಾಹ್ಮಣಃ ಸ ತು ಗರ್ಹಿತಃ ॥ ೬೦ ॥

ತಸ್ಮಾನ್ನ ಪ್ರತಿಗೃಹ್ಣೀಯಾನ್ನ ವೈ ದೇಯಂ ಚ ತಸ್ಯ ಹಿ ।
ಅಂಕಯಿತ್ವಾ ಸ್ವಕಾದ್ರಾಷ್ಟ್ರಾತ್ತಂ ರಾಜಾ ವಿಪ್ರವಾಸಯೇತ್ ॥ ೬೧ ॥

ಯಸ್ತು ಸದ್ಭ್ಯೋ ದದಾತೀಹ ನ ದ್ರವ್ಯಂ ಧರ್ಮಸಾಧನಮ್ ।
ಸ ಪೂರ್ವಾಭ್ಯಧಿಕಃ ಪಾಪೀ ನರಕೇ ಪಚ್ಯತೇ ನರಃ ॥ ೬೨ ॥

---

೫೯. ಯಾವ ಮಾನವನು ದ್ರವ್ಯಾರ್ಜನೆಯನ್ನು ಮಾಡಿದರೂ ದೇವ ಬ್ರಾಹ್ಮಣರನ್ನು ಪೂಜಿಸುವುದಿಲ್ಲವೊ, ಅವನ ಸರ್ವಸ್ವವನ್ನು ಅಪಹರಿಸಿ ಅವನನ್ನು ರಾಷ್ಟ್ರದಿಂದ ಹೊರಗೆ ಕಳುಹಿಸಬೇಕು.

೬೦. ಯಾವ ಬ್ರಾಹ್ಮಣನು ದುರ್ಭಿಕ್ಷಸಮಯವು ಉಂಟಾಗಿ ಕ್ಷಾಮದಿಂದ ಪ್ರಾಣಿಗಳು ನಾಶಹೊಂದುತ್ತಿರಲು ಅನ್ನಾದಿಗಳನ್ನು ದಾನಮಾಡಲಾರನೊ ಅಂತಹ ಬ್ರಾಹ್ಮಣನು ನಿಂದಾರ್ಹನಾಗುವನು.

೬೧. ರಾಜನು ಅಂತಹ ದುರ್ಬ್ರಾಹ್ಮಣನಿಂದ ಪ್ರತಿಗ್ರಹ, ಅವನಿಗೆ ದಾನ ಕೊಡುವುದು ಮುಂತಾದ ವ್ಯವಹಾರಗಳಿಂದ ಅವನನ್ನು ಬಹಿಷ್ಕರಿಸಿ ಪಾಪ ಚಿಹ್ನೆಯಿಂದ ಅವನನ್ನು ಅಂಕನಮಾಡಿ ತನ್ನ ರಾಷ್ಟ್ರದಿಂದ ಹೊರಗೆ ಹಾಕಬೇಕು.

೬೨. ಯಾವ ನರನು ಧರ್ಮಕ್ಕೆ ಸಾಧನವಾಗುವಂತೆ ತನ್ನಲ್ಲಿರುವ ದ್ರವ್ಯವನ್ನು ಸತ್ಪುರುಷನಿಗೆ ದಾನ ಮಾಡುವುದಿಲ್ಲವೊ, ಅಂತಹವನು ಮೊದಲಿನವರಿಗಿಂತ ಹೆಚ್ಚಾದ ಪಾಪಿಯಾಗಿರುವನು. ಅವನು ನರಕದಲ್ಲಿ ಯಾತನಾ ಪರಿಪಾಕವನ್ನು ಭುಂಜಿಸುವನು.

ಸ್ವಾಧ್ಯಾಯವಂತೋ ಯೇ ವಿಪ್ರಾ ವಿದ್ಯಾವಂತೋ ಜಿತೇಂದ್ರಿಯಾಃ ।
ಸತ್ಯಸಂಯಮಸಂಯುಕ್ತಾಸ್ತೇಭ್ಯೋ ದದ್ಯಾದ್ದ್ವಿಜೋತ್ತಮಾಃ ॥೬೩॥

ಸುಭುಕ್ತಮಪಿ ವಿದ್ವಾಂಸಂ ಧಾರ್ಮಿಕಂ ಭೋಜಯೇದ್ದ್ವಿಜಮ್ ।
ನ ತು ಮೂರ್ಖಮವೃತ್ತಸ್ಥಂ ದಶರಾತ್ರಮುಪೋಷಿತಮ್ ॥ ೬೪ ॥

ಸನ್ನಿಕೃಷ್ಟಮತಿಕ್ರಮ್ಯ ಶ್ರೋತ್ರಿಯಂ ಯಃ ಪ್ರಯಚ್ಛತಿ ।
ಸ ತೇನ ಕರ್ಮಣಾ ಪಾಪೀ ದಹತ್ಯಾಸಪ್ತಮಂ ಕುಲಮ್ ॥ ೬೫ ॥

ಯದಿ ಸ್ಯಾದಧಿಕೋ ವಿಪ್ರಃ ಶೀಲವಿದ್ಯಾದಿಭಿಃ ಸ್ವಯಮ್ ।
ತಸ್ಮೈ ಯತ್ನೇನ ದಾತವ್ಯಮತಿಕ್ರಮ್ಯಾಪಿ ಸನ್ನಿಧಿಮ್ ॥ ೬೬ ॥

---

೬೩. ವೇದಾಧ್ಯಯನ ಪರರೂ; ವಿದ್ಯಾವಂತರೂ, ಜಿತೇಂದ್ರಿಯರೂ ಮತ್ತು ಸತ್ಯ-ಸಂಯಮಗಳಿಂದ ಕೂಡಿದವರೂ ಆದ ದ್ವಿಜೋತ್ತಮರು ದಾನಕ್ಕೆ ಸತ್ಪಾತ್ರರಾಗಿರುವರು. ಆದ್ದರಿಂದ ಅಂತಹವರಲ್ಲಿ ದಾನ ಮಾಡಬೇಕು.

೬೪. ಭೋಜನದಿಂದ ತೃಪ್ತಿ ಹೊಂದಿದ್ದರೂ, ವಿದ್ವಾಂಸನೂ, ಧಾರ್ಮಿಕನೂ ಆದ ದ್ವಿಜನಿಗೆ ಭೋಜನ ಮಾಡಿಸುವುದು ಧರ್ಮವಾಗುವುದು, ಸದಾಚಾರ ಬಾಹ್ಯನಾದ ಮೂರ್ಖನು ಹತ್ತು ದಿನಗಳಿಂದ ಉಪವಾಸ ಮಾಡಿಕೊಂಡಿದ್ದರೂ, ಅವನು ಭೋಜನದಾನಕ್ಕೆ ಪಾತ್ರನಲ್ಲ.

೬೫. ತನ್ನ ಸಮೀಪದಲ್ಲಿರುವ ಶ್ರೋತ್ರಿಯನ್ನು ಬಿಟ್ಟು ಹೊರಗಿನವನಿಗೆ ಅನ್ನ ದಾನವನ್ನು ಮಾಡಿರುವ ಮಾನವನು ಆ ಅತಿಕ್ರಮದೋಷದಿಂದ ಪಾಪಿಯಾಗಿ ಸಪ್ತಪುರುಷರವರೆಗೆ ತನ್ನ ಕುಲವನ್ನು ದಹಿಸುವನಾಗುವವನು.

೬೬. ಆದರೆ ಶೀಲ, ವಿದ್ಯೆ ಮುಂತಾದ ಸದ್ಗುಣಗಳಿಂದ ದೂರದಲ್ಲಿರುವವನು ಪ್ರಶಸ್ತನಾಗಿದ್ದರೆ ಸಮೀಪದಲ್ಲಿರುವವನನ್ನು ತ್ಯಜಿಸಿ ದೂರಸ್ಥ ಪುರುಷನಿಗೆ ಯತ್ನ ಪೂರ್ವಕವಾಗಿ ದಾನ ಮಾಡುವುದು ಉಚಿತವಾಗಿದೆ.

ಯೋಽರ್ಚಿತಂ ಪ್ರತಿಗೃಹ್ಣಾತಿ ದದಾತ್ಯರ್ಚಿತಮೇವ ವಾ ।
ತಾವುಭೌ ಗಚ್ಛತಃ ಸ್ವರ್ಗಂ ನರಕಂ ತು ವಿಪರ್ಯಯೇ　　॥ ೬೭ ॥

ನ ವಾರ್ಯಪಿ ಪ್ರಯಚ್ಛೇತ ನಾಸ್ತಿಕೇ ಹೈತುಕೇಽಪಿ ಚ ।
ಪಾಷಂಡೇಷು ಚ ಸರ್ವೇಷು ನಾವೇದವಿದಿ ಧರ್ಮವಿತ್　　॥ ೬೮ ॥

ಅಪೂಪಂ ಚ ಹಿರಣ್ಯಂ ಚ ಗಾಮಶ್ವಂ ಪೃಥಿವೀಂ ತಿಲಾನ್ ।
ಅವಿದ್ವಾನ್ ಪ್ರತಿಗೃಹ್ಣಾನೋ ಭಸ್ಮೀಭವತಿ ಕಾಷ್ಠವತ್　　॥ ೬೯ ॥

ದ್ವಿಜಾತಿಭ್ಯೋ ಧನಂ ಲಿಪ್ಸೇತ್ ಪ್ರಶಸ್ತೇಭ್ಯೋ ದ್ವಿಜೋತ್ತಮಃ ।
ಅಪಿ ವಾ ಜಾತಿಮಾತ್ರೇಭ್ಯೋ ನ ತು ಶೂದ್ರಾತ್ ಕಥಂಚನ　　॥ ೭೦ ॥

---

೬೭. ಯಾವ ಮಾನವನು ಸತ್ಕಾರ ಪೂರ್ವಕವಾದ ದೇಯವಸ್ತುವನ್ನು ಪ್ರತಿಗ್ರಹಿಸುವನೊ, ಅಥವಾ ಸತ್ಕಾರ ಪೂರ್ವಕವಾಗಿ ದೇಯ ವಸ್ತುವನ್ನು ದಾನ ಮಾಡುವನೊ, ಅವರಿಬ್ಬರೂ ಸ್ವರ್ಗ ಸುಖವನ್ನು ಹೊಂದುತ್ತಾರೆ. ಸತ್ಕಾರವಿಲ್ಲದ ದಾನ ಪ್ರತಿಗ್ರಹಗಳಿಂದ ನರಕ ಪೀಡೆಯನ್ನು ಅನುಭವಿಸುತ್ತಾರೆ.

೬೮. ಧರ್ಮ ಜ್ಞಾನಿಯಾದ ಮಾನವನು ನಾಸ್ತಿಕ, ಕುತರ್ಕವಾದಿ, ಪಾಷಂಡಿ ಮುಂತಾದ ವೇದ ಬಾಹ್ಯರಲ್ಲಿ ಆಪತ್ಸಮಯದಲ್ಲಿ ಜಲವನ್ನು ಕೂಡ ದಾನಮಾಡ ಬಾರದು.

೬೯. ಜ್ಞಾನ ರಹಿತನಾದ ಮಾನವನು ಅಪೂಪ, ಹಿರಣ್ಯ, ಗೋವು, ಅಶ್ವ, ಭೂಮಿ ಮತ್ತು ತಿಲಧಾನ್ಯಗಳನ್ನು ಪ್ರತಿಗ್ರಹಿಸಿದರೆ ಅಗ್ನಿಯಲ್ಲಿ ಬಿದ್ದ ಕಾಷ್ಠದಂತೆ ಆ ಪಾಪದೋಷದಿಂದ ಭಸ್ಮವಾಗುತ್ತಾನೆ.

೭೦. ಬ್ರಾಹ್ಮಣೋತ್ತಮರು ಪ್ರಶಸ್ತರಾಗಿರುವ ದ್ವಿಜರಿಂದ ಮಾತ್ರ ಧನ ಪ್ರತಿ ಗ್ರಹವನ್ನು ಆಶಿಸಬೇಕು. ಅಥವಾ ದ್ವಿಜರ ಜಾತಿಮಾತ್ರವುಳ್ಳವರಿಂದಲಾದರೂ ಧನ ಪ್ರತಿಗ್ರಹವು ಕರ್ತವ್ಯವಾಗುವುದು. ಶೂದ್ರನಿಂದ ಮಾತ್ರ ಪ್ರತಿಗ್ರಹವು ಯಾವಾಗಲೂ ನಿಷಿದ್ಧವಾಗಿದೆ.

ವೃತ್ತಿಸಂಕೋಚಮನ್ವಿಚ್ಛೇತ್ ನೇಹೇತ ಧನವಿಸ್ತರಮ್ ।
ಧನಲೋಭೇ ಪ್ರಸಕ್ತಸ್ತು ಬ್ರಾಹ್ಮಣ್ಯಾದೇವ ಹೀಯತೇ ॥ ೭೧ ॥

ವೇದಾನಧೀತ್ಯ ಸಕಲಾನ್ ಯಜ್ಞಾಂಶ್ಚಾವಾಪ್ಯ ಸರ್ವಶಃ ।
ನ ತಾಂ ಗತಿಮವಾಪ್ನೋತಿ ಸಂಕೋಚಾದ್ಯಾಮವಾಪ್ನುಯಾತ್ ॥೭೨॥

ಪ್ರತಿಗ್ರಹರುಚಿರ್ನ ಸ್ಯಾದ್ಯಾತ್ರಾರ್ಥಂ ತು ಧನಂ ಹರೇತ್ ।
ಸ್ಥಿತ್ಯರ್ಥಾದಧಿಕಂ ಗೃಹ್ಣನ್ ಬ್ರಾಹ್ಮಣೋ ಯಾತ್ಯಧೋಗತಿಮ್॥೭೩॥

ಯಸ್ತು ಸ್ಯಾದ್ಯಾಚಕೋ ನಿತ್ಯಂ ನ ಸ ಸ್ವರ್ಗಸ್ಯ ಭಾಜನಮ್ ।
ಉದ್ವೇಜಯತಿ ಭೂತಾನಿ ಯಥಾ ಚೌರಸ್ತಥೈವ ಸಃ ॥ ೭೪ ॥

---

೭೧ ತನ್ನ ಶರೀರ ಯಾತ್ರಾವೃತ್ತಿಗೆ ಸಾಕಷ್ಟು ಧನವನ್ನು ಇಚ್ಛಿಸಬೇಕು ಅತ್ಯಧಿಕವಾದ ಧನಾರ್ಜನೆಯನ್ನು ಆಶಿಸಬಾರದು. ಹಾಗೆ ಧನದ ಲೋಭಕ್ಕೆ ವಶ ವಶನಾದ ಮಾನವನು ಬ್ರಾಹ್ಮಣ್ಯವನ್ನು ಕಳೆದುಕೊಳ್ಳುವನು.

೭೨. ಸಕಲ ವೇದಗಳ ಅಧ್ಯಯನದಿಂದಲೂ ಸಮಸ್ತ ಯಜ್ಞ ಅನುಷ್ಠಾನದಿಂದಲೂ, ಕೂಡ ವೃತ್ತಿ ಸಂಕೋಚನೆಂಬ ತೃಪ್ತಿಭಾವನೆಯಿಂದ ಲಭಿಸುವ ಸದ್ಗತಿಯನ್ನು ಹೊಂದಲಾರನು

೭೩. ತನ್ನ ಜೀವನ ಯಾತ್ರೆಗೆ ಸಾಕಾಗುವಷ್ಟು ಧನವನ್ನು ಅರ್ಜಿಸಬೇಕು. ಹೆಚ್ಚು ಧನದ ಪ್ರತಿಗ್ರಹದಲ್ಲಿ ಲೋಭಿಯಾಗಬಾರದು. ತನ್ನ ಸ್ಥಿತಿಯ ಉಪಯೋಗಕ್ಕಿಂತಲೂ ಅಧಿಕ ಧನವನ್ನು ಗ್ರಹಿಸಿದ ಬ್ರಾಹ್ಮಣನು ಅಧೋಗತಿಗೆ ಹೋಗುವನು.

೭೪. ಯಾವನು ಪ್ರತಿದಿನವೂ ಯಾಚನೆಯನ್ನು ಮಾಡುವನೊ, ಅವನ. ಸ್ವರ್ಗಕ್ಕೆ ಭಾಗಿಯಾಗುವುದಿಲ್ಲ. ಅಂತಹ ಯಾಚಕನು ಚೋರನಂತೆ ಯಾವಾಗಲೂ ಪ್ರಾಣಿಗಳನ್ನು ಭಯಪಡಿಸಲು ಕಾರಣನಾಗಿರುವನು.

ಗುರೂನ್ ಭೃತ್ಯಾಂಶ್ಚೋಜ್ಜಿಹೀರ್ಷನ್ನರ್ಚಿಷ್ಯನ್ ದೇವತಾತಿಥೀನ್ ।
ಸರ್ವತಃ ಪ್ರತಿಗೃಹ್ಣೀಯಾನ್ನ ತು ತೃಪ್ಯೇತ್ ಸ್ವಯಂ ತತಃ ॥ ೭೫ ॥

ಏವಂ ಗೃಹಸ್ಥೋ ಯುಕ್ತಾತ್ಮಾ ದೇವತಾತಿಥಿಪೂಜಕಃ ।
ವರ್ತಮಾನಃ ಸಂಯತಾತ್ಮಾ ಯಾತಿ ತತ್ಪರಮಂ ಪದಮ್ ॥ ೭೬ ॥

ಪುತ್ರೇ ನಿಧಾಯ ವಾ ಸರ್ವಂ ಗತ್ವಾರಣ್ಯಂ ತು ತತ್ತ್ವವಿತ್ ।
ಏಕಾಕೀ ವಿಚರೇನ್ನಿತ್ಯಮುದಾಸೀನಃ ಸಮಾಹಿತಃ ॥ ೭೭ ॥

ಏಷ ವಃ ಕಥಿತೋ ಧರ್ಮೋ ಗೃಹಸ್ಥಾನಾಂ ದ್ವಿಜೋತ್ತಮಾಃ ।
ಜ್ಞಾತ್ವಾ ತು ತಿಷ್ಠೇನ್ನಿಯತಂ ತಥಾನುಷ್ಠಾಪಯೇದ್ದ್ವಿಜಾನ್ ॥ ೭೮ ॥

---

೭೫. ತನ್ನ ಗುರು ಭೃತ್ಯರನ್ನು ರಕ್ಷಿಸುವುದಕ್ಕೋಸ್ಕರಲೂ ದೇವತಾ ಅತಿಥಿಗಳನ್ನು ಅರ್ಚಿಸುವುದಕ್ಕೋಸ್ಕರಲೂ, ಸರ್ವ ಪ್ರಕಾರಗಳಿಂದಲೂ ಪ್ರತಿಗ್ರಹಿಸಬೇಕು. ಪ್ರತಿಗ್ರಹಾರ್ಜಿತವಾದ ಧನದಿಂದ ತಾನು ಮಾತ್ರ ತೃಪ್ತಿಯನ್ನು ಹೊಂದಬಾರದು.

೭೬. ಹಿಂದೆ ಹೇಳಿದ ಸಮಸ್ತ ಧರ್ಮಗಳನ್ನು ಆಚರಿಸುವ ಗೃಹಸ್ಥನು ನಿಗ್ರಹಿಸಿದ ಮಾನಸವುಳ್ಳವನೂ, ದೇವತಾ ಅತಿಥಿಗಳನ್ನು ಪೂಜಿಸುವವನೂ ಜಿತೇಂದ್ರಿಯನೂ, ಆಗಿದ್ದು ಸ್ವಧರ್ಮದಿಂದ ಪರಮ ಪದವನ್ನು ಹೊಂದುತ್ತಾನೆ.

೭೭. ತತ್ವಜ್ಞಾನಿಯು ಸಮಸ್ತ ಸಂಪತ್ತನ್ನು ಪುತ್ರನಲ್ಲಿ ಇರಿಸಿ ಅರಣ್ಯಕ್ಕೆ ಹೋಗಿ ಅಲ್ಲಿ ಸಮಾಧಾನ ಚಿತ್ತವುಳ್ಳವನೂ, ಉದಾಸೀನನೂ, ಮತ್ತು ಏಕಾಕಿಯೂ ಆಗಿ ಸಂಚರಿಸುತ್ತಿರಬೇಕು.

೭೮. ದ್ವಿಜೋತ್ತಮರೆ ! ಈ ರೀತಿಯಾಗಿ ನನ್ನಿಂದ ನಿಮಗೆ ಗೃಹಸ್ಥಾಶ್ರಮಿಯ ಸಂಪೂರ್ಣ ಧರ್ಮವು ಹೇಳಲ್ಪಟ್ಟಿದೆ. ಈ ಧರ್ಮ ಮಾರ್ಗವನ್ನು ತಿಳಿದು ನಿಯಮದಿಂದ ಅದನ್ನು ಆಚರಿಸಬೇಕು. ಹಾಗು ದ್ವಿಜರಿಂದ ಆಚರಣಮಾಡಿಸಲು ಯತ್ನಿಸಬೇಕು.

ಇತಿ ದೇವಮನಾದಿಮೀಶಮೇಕಂ
ಗೃಹಧರ್ಮೇಣ ಸಮರ್ಚಯೇದಜಸ್ರಮ್ ।
ಸಮತೀತ್ಯ ಸ ಸರ್ವಭೂತಯೋನಿಂ
ಪ್ರಕೃತಿಂ ವೈ ಸ ಪರಂ ನ ಯಾತಿ ಜನ್ಮ ॥ ೭೯ ॥

ಇತಿ ಶ್ರೀ ಕೂರ್ಮಪುರಾಣೇ ಏಕೋನಾಶೀತಿತಮೋಽಧ್ಯಾಯಃ.

---

೭೯. ಈ ರೀತಿಯಾಗಿ ಗೃಹಸ್ಥಾಶ್ರಮ ಧರ್ಮದಿಂದ ಅನಾದಿಯೂ, ಅದ್ವಿತೀಯನೂ, ಸರ್ವೇಶ್ವರನೂ ಆದ ಮಹಾದೇವನನ್ನು ನಿರಂತರವಾಗಿ ಅರ್ಚಿಸಬೇಕು. ಇದರಿಂದ ಸಮಸ್ತ ಭೂತಗಳಿಗೆ ಕಾರಣವಾದ ಪ್ರಕೃತಿಯನ್ನು ಅತಿಕ್ರಮಿಸಿದ ಮಾನವನು ಪುನರ್ಜನ್ಮವನ್ನು ಹೊಂದುವುದಿಲ್ಲ.

ಕೂರ್ಮಪುರಾಣದಲ್ಲಿ ಎಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

ಶ್ರೀ

# ಕೂರ್ಮಪುರಾಣಂ



## ಅಶೀತಿತಮೋಽಧ್ಯಾಯಃ.

ವ್ಯಾಸ ಉವಾಚ :—

ಏವಂ ಗೃಹಾಶ್ರಮೇ ಸ್ಥಿತ್ವಾ ದ್ವಿತೀಯಂ ಭಾಗಮಾಯುಷಃ ।
ವಾನಪ್ರಸ್ಥಾಶ್ರಮಂ ಗಚ್ಛೇತ್ ಸದಾರಃ ಸಾಗ್ನಿರೇವ ವಾ ॥ ೧ ॥

ನಿಕ್ಷಿಪ್ಯ ಭಾರ್ಯಾಂ ಪುತ್ರೇಷು ಗಚ್ಛೇದ್ವನಮಥಾಪಿ ವಾ ।
ದೃಷ್ಟ್ವಾಽಪತ್ಯಸ್ಯ ಚಾಪತ್ಯಂ ಜರ್ಜರೀಕೃತವಿಗ್ರಹಃ ॥ ೨ ॥

---

## ಎಂಭತ್ತನೆಯ ಅಧ್ಯಾಯವು.

೧. ವ್ಯಾಸಮುನಿಯು ಹೀಗೆಂದು ಹೇಳಿದನು:— ಮಾನವನು ತನ್ನ ಆಯುಃಷ್ಯದ ದ್ವಿತೀಯ ಭಾಗವು ಪೂರ್ಣವಾಗುವವರೆಗೆ ಗೃಹಸ್ಥಾಶ್ರಮದಲ್ಲಿದ್ದು ತರುವಾಯ ಭಾರ್ಯೆ ಮತ್ತು ಅಗ್ನಿಯಿಂದ ಕೂಡಿ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಬೇಕು.

೨. ಅಥವಾ ಬಹು ಜೀರ್ಣವಾದ ದೇಹವುಳ್ಳವನಾಗಿ ಪುತ್ರನಿಗೆ ಸಂತತಿಯು ಇರುವುದನ್ನು ಕಂಡು ತನ್ನ ಪತ್ನಿಯನ್ನು ಪುತ್ರನ ರಕ್ಷಣೆಯಲ್ಲಿರಿಸಿ ತಾನೊಬ್ಬನು ಅರಣ್ಯವನ್ನು ಪ್ರವೇಶಿಸಿ ವಾಸಮಾಡಬಹುದು.

ಶುಕ್ಲಪಕ್ಷಸ್ಯ ಪೂರ್ವಾಹ್ಣೇ ಪ್ರಶಸ್ತೇ ಚೋತ್ತರಾಯಣೇ ।
ಗತ್ವಾರಣ್ಯಂ ನಿಯಮವಾಂಸ್ತಪಃ ಕುರ್ಯಾತ್ ಸಮಾಹಿತಃ ॥ ೩ ॥

ಫಲಮೂಲಾನಿ ಪೂತಾನಿ ನಿತ್ಯಮಹಾರಮಾಹರೇತ್ ।
ಯತಾಹಾರೋ ಭವೇತ್ತೇನ ಪೂಜಯೇತ್ ಪಿತೃದೇವತಾಃ ॥ ೪ ॥

ಪೂಜಯಿತ್ವಾತಿಥೀನ್ನಿತ್ಯಂ ಸ್ನಾತ್ವಾ ಚಾಭ್ಯರ್ಚಯೇತ್ಸುರಾನ್ ।
ಗೃಹಾದಾದಾಯ ಚಾಶ್ನೀಯಾದಷ್ಟೌ ಗ್ರಾಸಾನ್ ಸಮಾಹಿತಃ ॥ ೫ ॥

ಜಟಾಂ ವೈ ಬಿಭೃಯಾನ್ನಿತ್ಯಂ ನಖರೋಮಾಣಿ ನೋತ್ಸೃಜೇತ್ ।
ಸ್ವಾಧ್ಯಾಯಂ ಸರ್ವದಾ ಕುರ್ಯಾನ್ನಿಯಚ್ಛೇದ್ವಾಚಮನ್ಯತಃ ॥ ೬ ॥

---

೩. ಉತ್ತರಾಯಣ ಪುಣ್ಯಕಾಲದಲ್ಲಿ ಪ್ರಶಸ್ತವಾದ ಶುಕ್ಲಪಕ್ಷದ ತಿಥಿಯ ಪೂರ್ವಾಹ್ಣ ಸಮಯದಲ್ಲಿ ಅರಣ್ಯಕ್ಕೆ ಹೋಗಿ ಅಲ್ಲಿ ನಿಯಮ ಮತ್ತು ಶಾಂತಿಯಿಂದ ಕೂಡಿ ತಪವನ್ನು ಆಚರಿಸಬೇಕು.

೪. ಅಲ್ಲಿ ಪವಿತ್ರವಾದ ಫಲ-ಮೂಲಗಳ ಆಹಾರವನ್ನು ಯಾವಾಗಲೂ ಸೇವಿಸಬೇಕು. ಮತ್ತು ನಿಯತವಾದ ಆಹಾರವನ್ನು ಸ್ವೀಕರಿಸುತ್ತ ಫಲ-ಮೂಲಾದಿಗಳನ್ನು ಅರ್ಪಿಸಿ ಪಿತೃ-ದೇವತೆಗಳನ್ನು ತೃಪ್ತಿಗೊಳಿಸಬೇಕು.

೫. ಮತ್ತು ವಾನಪ್ರಸ್ಥಾಶ್ರಮಿಯು ಯಾವಾಗಲೂ ಅತಿಥಿಗಳನ್ನು ಪೂಜಿಸುತ್ತಲೂ, ಸ್ನಾನದಿಂದ ಪವಿತ್ರನಾಗಿ ದೇವತೆಗಳನ್ನು ಆರಾಧಿಸುತ್ತಲೂ, ಶಾಂತವಾದ ಚಿತ್ರವುಳ್ಳವನಾಗಿ ತನ್ನ ಗೃಹದಿಂದ ತಂದಿರುವ ಎಂಟು ಗ್ರಾಸದಷ್ಟು ಆಹಾರವನ್ನು ಭುಂಜಿಸಬೇಕು.

೬. ಮತ್ತು ಆ ಅವಸ್ಥೆಯಲ್ಲಿ ಜಟೆಯನ್ನು ಧರಿಸಬೇಕು. ಯಾವಾಗಲೂ ನಖ ರೋಮಗಳನ್ನು ವರ್ಜಿಸಬಾರದು. ಸಂತತವಾಗಿ ವೇದಗಳನ್ನು ಅಧ್ಯಯನ ಮಾಡಬೇಕು. ಮತ್ತು ವೇದಗಳಹೊರತು ಬೇರೊಂದು ವಾಗ್ಜಾಲವನ್ನು ತ್ಯಜಿಸಬೇಕು.

ಅಗ್ನಿಹೋತ್ರಂ ಚ ಜುಹುಯಾತ್ಪಂಚ ಯಜ್ಞಾನ್ ಸಮಾಚರೇತ್ ।
ಮುನ್ಯನ್ನೈರ್ವಿವಿಧೈರ್ವನ್ಯೈಃ ಶಾಕಮೂಲಫಲೇನ ಚ ॥ ೭ ॥

ಚೀರವಾಸಾ ಭವೇನ್ನಿತ್ಯಂ ಸ್ನಾತಿ ತ್ರಿಷವಣಂ ಶುಚಿಃ ।
ಸರ್ವಭೂತಾನುಕಂಪೀ ಸ್ಯಾತ್ಪ್ರತಿಗ್ರಹವಿವರ್ಜಿತಃ ॥ ೮ ॥

ಸ ದರ್ಶಪೌರ್ಣಮಾಸೇನ ಯಜೇತ ನಿಯತಂ ದ್ವಿಜಃ ।
ಋಕ್ಷೇಷ್ವಾಗ್ರಯಣೇ ಚೈವ ಚಾತುರ್ಮಾಸ್ಯಾನಿ ಚಾಹರೇತ್ ॥ ೯ ॥

ಉತ್ತರಾಯಣಂ ಚ ಕ್ರಮಶೋ ದಕ್ಷಸ್ಯಾಯನಮೇವ ಚ ।
ವಾಸಂತೈಃ ಶಾರದೈರ್ಮೇಧ್ಯೈರ್ಮುನ್ಯನ್ನೈಃ ಸ್ವಯಮಾಹೃತೈಃ ॥ ೧೦ ॥

---

೭. ಮತ್ತು ವನದಲ್ಲಿ ಬೆಳೆಯುವ ಶಾಕ ಮೂಲ ಫಲ ಮುಂತಾದ ವಿವಿಧವಾದ ಮುನಿಗಳ ಅನ್ನದಿಂದ ಅಗ್ನಿಹೋತ್ರ ಹೋಮವನ್ನು ನೆರವೇರಿಸಬೇಕು. ಹಾಗು ಪಂಚ ಮಹಾಯಜ್ಞಗಳನ್ನು ಆಚರಿಸಬೇಕು.

೮. ಮತ್ತು ಯಾವಾಗಲೂ ನಾರುಬಟ್ಟೆಯನ್ನು ಧರಿಸಬೇಕು. ಸಾಯಂಕಾಲ ಪ್ರಾತಃಕಾಲ ಮಧ್ಯಾಹ್ನ ಕಾಲಗಳಲ್ಲಿ ಸ್ನಾನಮಾಡಿ ಪವಿತ್ರನಾಗಿರಬೇಕು. ಸರ್ವ ಭೂತಗಳಲ್ಲಿ ದಯೆಯನ್ನು ತೋರಿಸಬೇಕು. ಹಾಗು ಪ್ರತಿಗ್ರಹವನ್ನು ದೂರ ತೊರೆಯಬೇಕು.

೯. ವಾನಪ್ರಸ್ಥಾಶ್ರಮಿಯಾದ ದ್ವಿಜನು ಯಾವಾಗಲೂ ದರ್ಶಪೂರ್ಣಮಾಸ ಯಾಗವನ್ನು ಆಚರಿಸಬೇಕು. ಮತ್ತು ಆಯಾಯ ನಕ್ಷತ್ರಗಳಲ್ಲಿ ನಕ್ಷತ್ರೇಷ್ಟಿಯನ್ನೂ ಆಗ್ರಯಣೇಷ್ಟಿಯನ್ನೂ ಮತ್ತೆ ಚಾತುರ್ಮಾಸ್ಯಯಾಗವನ್ನೂ ಮಾಡಬೇಕು.

೧೦. ಉತ್ತರಾಯಣದಲ್ಲಿ ವಸಂತಮಾಸದಲ್ಲಿಯೂ, ದಕ್ಷಿಣಾಯನದಲ್ಲಿ ಶರತ್ಕಾಲದಲ್ಲಿಯೂ ಬೆಳೆಯುವ ಪವಿತ್ರವಾದ ಮುನಿಗಳ ಅನ್ನದಿಂದ ಕ್ರಮವಾಗಿ ಆಯಾಯ ಇಷ್ಟಿಗಳನ್ನು ಆಚರಿಸಬೇಕು.

ಪುರೋಡಾಶಾಂಶ್ಚರುಂ ಚೈವ ದ್ವಿವಿಧಂ ನಿರ್ವಪೇತ್ ಪೃಥಕ್ ।
ದೇವತಾಭ್ಯಶ್ಚ ತದ್ಧುತ್ವಾ ವನ್ಯಂ ಮೇಧ್ಯತರಂ ಹವಿಃ ॥ ೧೧ ॥

ಶೇಷಂ ಸಮುಪಭುಂಜೀತ ಲವಣಂ ಚ ಸ್ವಯಂ ಕೃತಮ್ ।
ವರ್ಜಯೇನ್ಮಧುಮಾಂಸಾನಿ ಭೌಮಾನಿ ಕವಚಾನಿ ಚ ॥ ೧೨ ॥

ಭೂಸ್ತೃಣಂ ಶಿಶುಕಂ ಚೈವ ಶ್ಲೇಷ್ಮಾತಕಫಲಾನಿ ಚ ।
ನ ಫಾಲಕೃಷ್ಟಮಶ್ನೀಯಾದುತ್ಸೃಷ್ಟಮಪಿ ಕೇನಚಿತ್ ॥ ೧೩ ॥

ನ ಗ್ರಾಮಜಾತಾನ್ಯಾರ್ತೋಽಪಿ ಪುಷ್ಪಾಣಿ ಚ ಫಲಾನಿ ಚ ।
ಶ್ರಾವಣೇನೈವ ವಿಧಿನಾ ವಹ್ನಿಂ ಪರಿಚರೇತ್ ಸದಾ ॥ ೧೪ ॥

೧೧. ವನದಲ್ಲಿ ಬೆಳೆದ ಪವಿತ್ರವಾದ ಧಾನ್ಯದಿಂದ ಪುರೋಡಾಶ ಮತ್ತು ಚರು ಎಂಬ ಎರಡು ಬಗೆಯಾದ ಹವಿಸ್ಸನ್ನು ಕಲ್ಪಿಸಬೇಕು. ಮತ್ತು ಅದರಿಂದ ದೇವತೆಗಳನ್ನು ಉದ್ದೇಶಿಸಿ ಹೋಮಮಾಡಬೇಕು.

೧೨. ಹೋಮಮಾಡಿ ಮಿಕ್ಕಿರುವ ಹವಿಃ ಶೇಷವನ್ನು ಭುಂಜಿಸಬೇಕು. ತಾನು ಮಾಡಿದ ಸ್ವಾದು ಅನ್ನವನ್ನೂ, ಲವಣ-ಮಧು-ಮಾಂಸ ಮತ್ತು ಭೂಮಿಯಲ್ಲಿ ಬೆಳೆಯುವ ಕವಚ ಎಂಬ ಆಹಾರವನ್ನೂ ವರ್ಜಿಸಬೇಕು.

೧೩. ಮತ್ತು ಭೂತೃಣ, ಶಿಶುಕ, ಶ್ಲೇಷ್ಮಾತಕ ಫಲವೆಂಬ ನಿಷಿದ್ಧಾಹಾರವನ್ನು ಬಿಡಬೇಕು. ಮತ್ತು ಬೇರೊಬ್ಬನಿಂದ ಬಿಡಲ್ಪಟ್ಟಿದ್ದರೂ ನೇಗಿಲದಿಂದ ಉತ್ತು ಬೆಳೆದಿರುವ ಧಾನ್ಯಾಹಾರವನ್ನು ವರ್ಜಿಸಬೇಕು.

೧೪. ಆಪತ್ತಿನಲ್ಲಿದ್ದರೂ ಗ್ರಾಮದಲ್ಲಿ ಬೆಳೆದ ಪುಷ್ಪ ಫಲಗಳನ್ನು ಉಪಯೋಗಿಸಬಾರದು. ಶ್ರವಣಾ ಕರ್ಮದ ವಿಧಾನದಿಂದ ನಿರಂತರವಾಗಿ ಅಗ್ನಿಯ ಶುಶ್ರೂಷೆಯನ್ನು ಮಾಡುತ್ತಿರಬೇಕು.

ನ ದ್ರುಹ್ಯೇತ್ ಸರ್ವಭೂತಾನಿ ನಿರ್ದ್ವಂದ್ವೋ ನಿರ್ಭಯೋ ಭವೇತ್ ।
ನ ನಕ್ತಂ ಚೈವಮಶ್ನೀಯಾದ್ರಾತ್ರೌ ಧ್ಯಾನಪರೋ ಭವೇತ್ ॥ ೧೫ ॥

ಜಿತೇಂದ್ರಿಯೋ ಜಿತಕ್ರೋಧಸ್ತತ್ತ್ವಜ್ಞಾನವಿಚಿಂತಕಃ ।
ಬ್ರಹ್ಮಚಾರೀ ಭವೇನ್ನಿತ್ಯಂ ನ ಪತ್ನೀಮಪಿ ಸಂಶ್ರಯೇತ್ ॥ ೧೬ ॥

ಯಸ್ತು ಪತ್ನ್ಯಾ ವನಂ ಗತ್ವಾ ಮೈಥುನಂ ಕಾಮತಶ್ಚರೇತ್ ।
ತದ್ವ್ರತಂ ತಸ್ಯ ಲುಪ್ಯೇತ ಪ್ರಾಯಶ್ಚಿತ್ತೀಯತೇ ದ್ವಿಜಃ ॥ ೧೭ ॥

ತತ್ರ ಯೋ ಜಾಯತೇ ಗರ್ಭೋ ನ ಸಂಸ್ಪೃಶ್ಯೋ ಭವೇದ್ದ್ವಿಜಃ ।
ನ ಚ ವೇದೇಽಧಿಕಾರೋಽಸ್ಯ ತದ್ವಂಶೇಽಪ್ಯೇವಮೇವ ಹಿ ॥ ೧೮ ॥

---

೧೫. ಯಾವಾಗಲೂ ಸರ್ವಪ್ರಾಣಿಗಳಲ್ಲಿಯೂ ದ್ರೋಹಭಾವನೆಯನ್ನು ತ್ಯಜಿಸಬೇಕು. ದ್ವಂದ್ವದುಃಖ-ಭಯಗಳಿಂದ ರಹಿತನಾಗಿರಬೇಕು. ರಾತ್ರಿಯಲ್ಲಿ ಭೋಜನವನ್ನು ಮಾಡಬಾರದು. ಮತ್ತು ರಾತ್ರಿಯಲ್ಲಿ ಧ್ಯಾನನಿಷ್ಠನಾಗಿರಬೇಕು.

೧೬. ಜಿತೇಂದ್ರಿಯನೂ, ಕ್ರೋಧವನ್ನು ತ್ಯಜಿಸಿದವನೂ, ತತ್ವಜ್ಞಾನದಲ್ಲಿ ಚಿಂತೆಯುಳ್ಳವನೂ, ಮತ್ತು ಬ್ರಹ್ಮಚಾರಿಯೂ ಆಗಿರಬೇಕು. ಪತ್ನಿಯನ್ನು ಕೂಡ ಯಾವಾಗಲೂ ಕಾಮಾರ್ಥವಾಗಿ ಆಶ್ರಯಿಸಬಾರದು.

೧೭. ಯಾವ ಮಾನವನು ವಾನಪ್ರಸ್ಥಾಶ್ರಮಿಯಾಗಿ ಪತ್ನಿಯೊಡನೆ ಅರಣ್ಯಕ್ಕೆ ಹೋಗಿ ಕಾಮವಿಕಾರದಿಂದ ಮೈಥುನವನ್ನು ಆಚರಿಸುವನೋ, ಅವನಿಗೆ ಆ ಧರ್ಮ ನಿಯಮವು ಲೋಪಹೊಂದಿ ಅವನು ಪ್ರಾಯಶ್ಚಿತ್ತಕ್ಕೆ ಅರ್ಹನಾಗುವನು.

೧೮. ಆ ನಿಷಿದ್ಧ ಮೈಥುನದಿಂದ ಹುಟ್ಟಿದ ದ್ವಿಜಗರ್ಭವು ಮುಂದೆ ಇತರರ ಸ್ಪರ್ಶಕ್ಕೆ ಕೂಡ ಅರ್ಹವಾಗಿಲ್ಲ. ಮತ್ತು ಆ ದ್ವಿಜನಿಗೆ ವೇದಾಭ್ಯಾಸದಲ್ಲಿ ಅಧಿಕಾರವಿಲ್ಲ. ಉತ್ತರೋತ್ತರವಾಗಿ ಅವನ ವಂಶವೆಲ್ಲವೂ ಅಪವಿತ್ರವಾಗುವುದು.

ಅಧಃ ಶಯೀತ ನಿಯತಂ ಸಾವಿತ್ರೀಜಪತತ್ಪರಃ ।
ಶರಣ್ಯಃ ಸರ್ವಭೂತಾನಾಂ ಸಂವಿಭಾಗರತಃ ಸದಾ ॥ ೧೯ ॥

ಪರಿವಾದಂ ಮೃಷಾವಾದಂ ನಿದ್ರಾಲಸ್ಯಂ ವಿವರ್ಜಯೇತ್ ।
ಏಕಾಗ್ನಿರನಿಕೇತಃ ಸ್ಯಾತ್ ಪ್ರೋಕ್ಷಿತಾಂ ಭೂಮಿಮಾಶ್ರಯೇತ್ ॥ ೨೦॥

ಮೃಗೈಃ ಸಹ ಚರೇದ್ವಾ ಯಸ್ತೈಃ ಸಹೈವ ಚ ಸಂವಿಶೇತ್ ।
ಶಿಲಾಯಾಂ ವಾ ಶರ್ಕರಾಯಾಂ ಶಯೀತ ಸುಸಮಾಹಿತಃ ॥ ೨೧ ॥

ಸದ್ಯಃ ಪ್ರಕ್ಷಾಲಕೋ ವಾ ಸ್ಯಾನ್ಮಾಸಸಂಚಯಕೋಽಪಿ ವಾ ।
ಷಣ್ಮಾಸನಿಚಯೋ ವಾ ಸ್ಯಾತ್ ಸಮಾನಿಚಯ ಏವ ಚ ॥ ೨೨ ॥

---

೧೯. ಮತ್ತು ವಾನಪ್ರಸ್ಥಾಶ್ರಮಿಯು ಭೂಮಿಯಲ್ಲಿ ನಿಯತವಾದ ಶಯನ, ಸಾವಿತ್ರೀ ಮಂತ್ರಜಪದಲ್ಲಿ ತತ್ಪರತೆ, ಸರ್ವಭೂತಗಳಿಗೆ ಶರಣದಾನ ಮತ್ತು ಯಾವಾಗಲೂ ವಿತರಣಶೀಲಗಳೆಂಬ ವೃತ್ತಿಯನ್ನು ಹೊಂದಿರಬೇಕು.

೨೦. ಪರರ ನಿಂದಾವಚನವನ್ನೂ, ಅನೃತವಚನವನ್ನೂ, ನಿದ್ರೆಯನ್ನೂ, ಆಲಸ್ಯವನ್ನೂ ವರ್ಜಿಸಬೇಕು. ಮತ್ತು ವಾಸಕ್ಕೆ ಸ್ಥಿರವಾದ ಗೃಹರಚನೆಯಿಲ್ಲದವನೂ ಏಕಾಗ್ನಿಯನ್ನು ಧರಿಸಿದವನೂ ಆಗಿ ಪ್ರೋಕ್ಷಣದಿಂದ ಪವಿತ್ರವಾದ ಭೂಮಿಯನ್ನು ಆಶ್ರಯಿಸಬೇಕು.

೨೧. ಮತ್ತು ವನ್ಯಮೃಗಗಳೊಡನೆ ಸಂಚಾರ, ಅವುಗಳೊಡನೆ ನಿದ್ರಾನುಭವಗಳನ್ನು ಹೊಂದಬೇಕು. ಕಲ್ಲು ಅಥವಾ ಮಳಲುಭೂಮಿಯಮೇಲೆ ಶಾಂತಚಿತ್ತತೆಯಿಂದ ಮಲಗಬೇಕು.

೨೨. ಹಾಗು ವಾನಪ್ರಸ್ಥಾಶ್ರಮವಾಸಿಯು ಆಯಾಯ ಸಮಯದಲ್ಲಿ ಆಹಾರ ಸಂಗ್ರಹವು ಮುಗಿದ ಕೂಡಲೆ ಹಸ್ತಕ್ಷಾಳನ ಮಾಡುವವನೂ ಅಥವಾ ಒಂದು ಮಾಸಾವಧಿಗೆ ಸಾಕಾದ ಆಹಾರ ಸಂಗ್ರಹವುಳ್ಳವನೂ ಅಥವಾ ಆರುಮಾಸ, ವರ್ಷ ಪೂರ್ತಿಗಳ ಸಂಗ್ರಹವುಳ್ಳವನೂ ಆಗಿರಬೇಕು.

ತ್ಯಜೇದಾಶ್ವಯುಜೇ ಮಾಸಿ ಸಂಪನ್ನಂ ಪೂರ್ವಚಿಂತಿತಮ್ ।
ಜೀರ್ಣಾನಿ ಚೈವ ವಾಸಾಂಸಿ ಶಾಕಮೂಲಫಲಾನಿ ಚ ॥ ೨೩ ॥

ದಂತೋಲೂಖಲಿಕೋ ವಾ ಸ್ಯಾತ್ ಕಾಪೋತೀಂ ವೃತ್ತಿಮಾಶ್ರಯೇತ್।
ಅಶ್ಮಕುಟ್ಟೋ ಭವೇದ್ವಾಪಿ ಕಾಲಪಕ್ವಭುಗೇವ ಚ । ॥ ೨೪ ॥

ನಕ್ತಂ ಚಾನ್ನಂ ಸಮಶ್ನೀಯಾದ್ದಿವಾ ಚಾಹೃತ್ಯ ಶಕ್ತಿತಃ ।
ಚತುರ್ಥಕಾಲಿಕೋ ವಾ ಸ್ಯಾತ್ ಸ್ಯಾದ್ವಾ ಚಾಷ್ಟಮಕಾಲಿಕಃ ॥ ೨೫ ॥

ಚಾಂದ್ರಾಯಣವಿಧಾನೈರ್ವಾ ಶುಕ್ಲೇ ಕೃಷ್ಣೇ ಚ ವರ್ತಯೇತ್ ।
ಪಕ್ಷೇ ಪಕ್ಷೇ ಸಮಶ್ನೀಯಾದ್ದ್ವಿಜಾಗ್ರ್ಯಾನ್ ಕಥಿತಾನ್ ಸಕೃತ್ ॥ ೨೬ ॥

---

೨೩. ಆಶ್ವಯುಜಮಾಸವು ಬಂದ ಕೂಡಲೆ ಹಿಂದೆ ಸಂಗ್ರಹಿಸಿದ ಆಹಾರ ಸಂಪತ್ತಿಯನ್ನೂ ಜೀರ್ಣವಾದ ವಸ್ತ್ರಗಳನ್ನೂ ಮತ್ತು ಶಾಕ-ಮೂಲ ಫಲಗಳನ್ನೂ ಪರಿತ್ಯಾಗಮಾಡಬೇಕು.

೨೪. ಮತ್ತು ಕಪೋತವೃತ್ತಿಯನ್ನು ಅವಲಂಬಿಸಿ ದಂತಗಳೆಂಬ ಒರಳನಿಂದ ಚೂರ್ಣಮಾಡಿದ ಶಿಲೆ ಮುಂತಾದ ಕಠಿನ ದ್ರವ್ಯವನ್ನೂ, ಕಲ್ಲಿನಲ್ಲಿ ಇಟ್ಟು ಭೇದಿಸಿದ ಕಠಿನ ಆಹಾರ ವಸ್ತುವನ್ನೂ ಅಥವಾ ಕಾಲಪಕ್ವವಾದ ವಸ್ತುವನ್ನೂ ಭುಂಜಿಸಬೇಕು.

೨೫. ಹಗಲು ಹೊತ್ತಿನಲ್ಲಿ ಆಹಾರವನ್ನು ಸಂಗ್ರಹಿಸಿ ರಾತ್ರಿಯಲ್ಲಿ ಭುಂಜಿಸಬೇಕು. ಅಥವಾ ಹಗಲಿನ ನಾಲ್ಕನೆಯ ಮತ್ತು ಎಂಟನೆಯ ಭಾಗದಲ್ಲಿ ಆಹಾರವನ್ನು ಸೇವಿಸಬೇಕು.

೨೬. ಅಥವಾ ಚಂದ್ರನ ವೃದ್ಧಿ-ಕ್ಷಯಗಳನ್ನು ಅನುಸರಿಸಿ ಶುಕ್ಲ-ಕೃಷ್ಣಪಕ್ಷಗಳಲ್ಲಿ ಅಧಿಕ ನ್ಯೂನವಾದ ಆಹಾರಗ್ರಾಸಗಳನ್ನು ಸೇವಿಸಬೇಕು. ಪ್ರತಿ ಪಕ್ಷಗಳಲ್ಲಿಯೂ ಪಚನಮಾಡಿರುವ ಯವಾಗೂ (ಗಂಜಿ) ವನ್ನು ಪಾನಮಾಡಬಹುದು.

ಪುಷ್ಪಮೂಲಫಲೈರ್ವಾಪಿ ಕೇವಲೈರ್ವರ್ತಯೇತ್ ಸದಾ ।
ಸ್ವಾಭಾವಿಕೈಃ ಸ್ವಯಂ ಶೀರ್ಣೈರ್ವೈಖಾನಸಮತೇ ಸ್ಥಿತಃ ॥ ೨೭ ॥

ಭೂಮೌ ವಾ ಪರಿವರ್ತೇತ ತಿಷ್ಠೇದ್ವಾ ಪ್ರಪದೈರ್ದಿನಮ್ ।
ಸ್ಥಾನಾಸನಾಭ್ಯಾಂ ವಿಹರೇನ್ನ ಕ್ವಚಿದ್ಧೈರ್ಯಮುತ್ಸೃಜೇತ್ ॥ ೨೮ ॥

ಗ್ರೀಷ್ಮೇ ಪಂಚತಪಾಸ್ತದ್ವದ್ವರ್ಷಾಸ್ವಭ್ರಾವಕಾಶಕಃ ।
ಆರ್ದ್ರವಾಸಾಸ್ತು ಹೇಮಂತೇ ಕ್ರಮಶೋ ವರ್ಧಯಂಸ್ತಪಃ ॥ ೨೯ ॥

ಉಪಸ್ಪೃಶ್ಯ ತ್ರಿಷವಣಂ ಪಿತೃದೇವಾಂಶ್ಚ ತರ್ಪಯೇತ್ ।
ಏಕಪಾದೇನ ತಿಷ್ಠೇತ ಮರೀಚೀನ್ ವಾ ಪಿಬೇತ್ತದಾ ॥ ೩೦ ॥

---

೨೭. ಅಥವಾ ವೈಖಾನಸ ಆಶ್ರಮದಲ್ಲಿರುವ ತಪಸ್ವಿಯು ಸ್ವಾಭಾವಿಕವಾಗಿ ತಾನಾಗಿ ಬಿದ್ದಿರುವ ಪುಷ್ಪ–ಮೂಲ-ಫಲಗಳನ್ನು ಮಾತ್ರವೇ ಆಹಾರವನ್ನಾಗಿ ಸೇವಿಸಬೇಕು.

೨೮. ಅಂತಹವನು ಭೂಮಿಯಲ್ಲಿ ಹೊರಳಾಡುತ್ತಲೂ ಪಾದಾಗ್ರದಿಂದ ನಿಂತುಕೊಳ್ಳುತ್ತಲೂ ದಿನವನ್ನು ಕಳೆಯಬೇಕು. ಹೀಗೆ ಸ್ಥಿತಿ ಆಸನಗಳ ಲೀಲೆಯಿಂದ ವಿಹರಿಸುತ್ತಿರಬೇಕು. ಆದರೆ ಧೈರ್ಯವನ್ನು ಯಾವಾಗಲೂ ತ್ಯಜಿಸಬಾರದು.

೨೯. ಮತ್ತು ಗ್ರೀಷ್ಮ ಸಮಯದಲ್ಲಿ ಪಂಚಾಗ್ನಿ ಮಧ್ಯದಲ್ಲಿ ತಪವನ್ನು ಆಚರಿಸುವವನೂ, ವರ್ಷಋತುವಿನಲ್ಲಿ ಜಲಾಶಯದಲ್ಲಿ ನಿಂತಿರುವವನೂ, ಮತ್ತು ಹೇಮಂತಋತುವಿನಲ್ಲಿ ಆರ್ದ್ರವಸ್ತ್ರವನ್ನು ಧರಿಸಿದವನೂ ಆಗಿ ತಪವನ್ನು ವೃದ್ಧಿ ಮಾಡಬೇಕು.

೩೦. ಕಾಲತ್ರಯದಲ್ಲಿ ಸ್ನಾನಮಾಡಿ ಪಿತೃ ದೇವತೆಗಳಿಗೆ ತರ್ಪಣಾಂಜಲಿಯನ್ನು ಕೊಡಬೇಕು. ಹಾಗು ಒಂದು ಪಾದದಿಂದ ನಿಂತು ಸೂರ್ಯರಶ್ಮಿಗಳನ್ನು ಪಾನಮಾಡುತ್ತಾ ತೀವ್ರ ತಪವನ್ನು ಆಚರಿಸಬೇಕು.

ಪಂಚಾಗ್ನಿಧೂರ್ಮಪೋ ವಾ ಸ್ಯಾದುಷ್ಮಪಃ ಸೋಮಪೋಽಥ ವಾ ।
ಪಯಃ ಪಿಬೇತ್ ಶುಕ್ಲಪಕ್ಷೇ ಕೃಷ್ಣಪಕ್ಷೇ ಚ ಗೋಮಯಮ್ ॥ ೩೧ ॥

ಶೀರ್ಣಪರ್ಣಾಶನೋ ವಾ ಸ್ಯಾತ್ಕೃಚ್ಛ್ರೈರ್ವಾ ವರ್ತಯೇತ್ಸದಾ ।
ಯೋಗಾಭ್ಯಾಸರತಶ್ಚೈವ ರುದ್ರಾಧ್ಯಾಯೀ ಭವೇತ್ಸದಾ ॥ ೩೨ ॥

ಅಥರ್ವಶಿರಸೋಽಧ್ಯೇತಾ ವೇದಾಂತಾಭ್ಯಾಸತತ್ಪರಃ ।
ಯಮಾನ್ ಸೇವೇತ ಸತತಂ ನಿಯಮಾಂಶ್ಚಾಪ್ಯತಂದ್ರಿತಃ ॥ ೩೩ ॥

ಕೃಷ್ಣಾಜಿನಃ ಸೋತ್ತರೀಯಃ ಶುಕ್ಲಯಜ್ಞೋಪವೀತವಾನ್ ।
ಅಥ ಚಾಗ್ನೀನ್ ಸಮಾರೋಪ್ಯ ಸ್ವಾತ್ಮನಿ ಧ್ಯಾನತತ್ಪರಃ ॥ ೩೪ ॥

---

೩೧. ಪಂಚಾಗ್ನಿ ತಪವನ್ನು ಆಚರಿಸುತ್ತ ಧೂಮಪಾನವನ್ನೂ, ಬಾಷ್ಪಪಾನವನ್ನೂ ಅಥವಾ ಸೋಮರಸ ಪಾನವನ್ನೂ ಮಾಡಬೇಕು. ಮತ್ತು ಶುಕ್ಲಪಕ್ಷದಲ್ಲಿ ಕ್ಷೀರವನ್ನೂ ಕೃಷ್ಣಪಕ್ಷದಲ್ಲಿ ಗೋಮಯವನ್ನೂ ಸೇವಿಸಬೇಕು.

೩೨. ತಾನಾಗಿ ಬಿದ್ದಿರುವ ಎಲೆಗಳನ್ನು ಸೇವಿಸಬೇಕು. ಮತ್ತು ಕೃಚ್ಛ್ರರೂಪವಾದ ಆಹಾರವನ್ನು ಭುಂಜಿಸಬೇಕು. ಮತ್ತು ಸರ್ವಕಾಲಗಳಲ್ಲಿ ಯೋಗಾಭ್ಯಾಸ–ರುದ್ರಾಧ್ಯಾಯ ಜಪಗಳಲ್ಲಿ ತತ್ಪರನಾಗಬೇಕು.

೩೩. ಹಾಗು ಆಯಾಯ ಅಥರ್ವ ಶಿರಸ್ಸುಗಳನ್ನು ಪಾರಾಯಣಮಾಡುತ್ತ, ವೇದಾಂತ ವಾಕ್ಯಗಳನ್ನು ಅಭ್ಯಾಸಮಾಡುತ್ತ, ಆಲಸ್ಯವಿಲ್ಲದೆ ಸಂತತವಾಗಿ ಯಮನಿಯಮಗಳನ್ನು ಆಚರಿಸುತ್ತಿರಬೇಕು.

೩೪. ಕೃಷ್ಣಾಜಿನದ ಉತ್ತರೀಯವನ್ನೂ, ಶುಭ್ರವಾದ ಯಜ್ಞೋಪವೀತವನ್ನೂ ಧರಿಸಿದವನಾಗಿ ತನ್ನ ಆತ್ಮನಲ್ಲಿ ಅಗ್ನಿಗಳನ್ನು ಸಮಾರೋಪಮಾಡಿ ಸ್ವಾತ್ಮಧ್ಯಾನದಲ್ಲಿ ತತ್ಪರನಾಗಬೇಕು.

ಅನಗ್ನಿರನಿಕೇತಃ ಸ್ಯಾನ್ಮುನಿರ್ಮೋಕ್ಷಪರೋ ಭವೇತ್ ।
ತಾಪಸೇಷ್ವೇವ ವಿಪ್ರೇಷು ಯಾತ್ರಿಕಂ ಭೈಕ್ಷ್ಯಮಾಹರೇತ್ ॥ ೩೫ ॥

ಗೃಹಮೇಧಿಷು ಚಾನ್ಯೇಷು ದ್ವಿಜೇಷು ವನವಾಸಿಷು ।
ಗ್ರಾಮಾದಾಹೃತ್ಯ ಚಾಶ್ನೀಯಾದಷ್ಟೌ ಗ್ರಾಸಾನ್ ವಸನ್ ವನೇ॥ ೩೬ ॥

ಪ್ರತಿಗೃಹ್ಯ ಪುಟೇನೈವ ಪಾಣಿನಾ ಶಕಲೇನ ವಾ ।
ವಿವಿಧಾಶ್ಚೋಪನಿಷದ ಆತ್ಮಸಂಸಿದ್ಧಯೇ ಜಪೇತ್ ॥ ೩೭ ॥

ವಿದ್ಯಾವಿಶೇಷಾನ್ ಸಾವಿತ್ರೀಂ ರುದ್ರಾಧ್ಯಾಯಂ ತಥೈವ ಚ ।
ಮಹಾಪ್ರಸ್ಥಾನಿಕಂ ವಾಸೌ ಕುರ್ಯಾದನಶನಂ ತು ವಾ ।
ಅಗ್ನಿಪ್ರವೇಶಮನ್ಯದ್ವಾ ಬ್ರಹ್ಮಾರ್ಪಣವಿಧೌ ಸ್ಥಿತಃ ॥ ೩೮ ॥

---

೩೫ ಹೀಗೆ ಅಗ್ನಿರಹಿತನೂ, ಗೃಹಾವಾಸ ಶೂನ್ಯನೂ ಆಗಿ ಮೋಕ್ಷಸಾಧನೆಯಲ್ಲಿ ತತ್ಪರನಾದ ಮುನಿಯಾಗಿರಬೇಕು. ಮತ್ತು ತಪಸ್ವಿಗಳಾದ ವಿಪ್ರರಲ್ಲಿ ಎತ್ತಿದ ಭಿಕ್ಷಾನ್ನದಿಂದ ಆಹಾರ ಮಾಡಬೇಕು.

೩೬. ಮತ್ತು ಇಂತಹ ವನವಾಸಿಯು ವನದಲ್ಲಿ ವಾಸಮಾಡುವ ಇತರ ಗೃಹಸ್ಥಾಶ್ರಮಿಗಳಾದ ದ್ವಿಜರಲ್ಲಿಯೂ ಗ್ರಾಮದಲ್ಲಿಯೂ ಭಿಕ್ಷೆಯೆತ್ತಿ ತಂದ ಎಂಟು ಗ್ರಾಸಗಳ ಆಹಾರವನ್ನು ಸೇವಿಸಬೇಕು.

೩೭. ಮತ್ತು ತನ್ನ ಹಸ್ತವೆಂಬ ಪಾತ್ರೆಯಿಂದಲೋ ಕಮಂಡಲುವಿನಿಂದಲೊ ಆಹಾರವನ್ನು ಪ್ರತಿಗ್ರಹಿಸಬೇಕು ಹಾಗು ಚಿತ್ತಶುದ್ಧಿ ಆತ್ಮಪ್ರಾಪ್ತಿಗೋಸ್ಕರ ನಾನಾ ವಿಧವಾದ ಉಪನಿಷತ್ತುಗಳನ್ನು ಜಪಿಸುತ್ತಿರಬೇಕು.

೩೮. ಅಥವಾ ಇತರ ವಿಶೇಷ ವಿದ್ಯೆಗಳನ್ನೂ, ಗಾಯತ್ರೀಮಂತ್ರವನ್ನೂ, ರುದ್ರಾಧ್ಯಾಯವನ್ನೂ ಜಪಿಸುತ್ತ ಅದನ್ನು ಬ್ರಹ್ಮಾರ್ಪಣಮಾಡುವ ಸ್ಥಿರ ಸಂಕಲ್ಪವುಳ್ಳವನಾಗಿ ಕಡೆಯಲ್ಲಿ ಮಹಾಪ್ರಸ್ಥಾನ, ಅನಶನ ಅಥವಾ ಅಗ್ನಿಪ್ರವೇಶಗಳನ್ನು ಮಾಡಬೇಕು.

ಯೇನ ಸಮ್ಯಗಿಮಮಾಶ್ರಮಂ ಶಿವಂ
ಸಂಶ್ರಯಂತ್ಯಶಿವಪುಂಜನಾಶನಮ್ ।
ತೇ ವಿಶಂತಿ ಪದಮೈಶ್ವರಂ ಪದಂ
ಯಾಂತಿ ಯತ್ರ ಗತಮಸ್ಯ ಸನ್ನಿಧೇಃ　　　　॥ ೩೯ ॥

ಇತಿ ಶ್ರೀ ಕೂರ್ಮಪುರಾಣೇ ಅಶೀತಿತಮೋಽಧ್ಯಾಯಃ.

---

೩೯. ಯಾವ ಆಶ್ರಮಿಗಳು ಈ ವಿಧಾನದಿಂದ ಅಶುಭಪುಂಜಗಳನ್ನು ನಾಶ ಮಾಡುವ ಈ ಪವಿತ್ರಾಶ್ರಮವನ್ನು ಸ್ವೀಕರಿಸುವರೊ, ಅವರು ಕ್ರಮವಾಗಿ ಈಶ್ವರನ ಸ್ಥಾನವನ್ನು ಹೊಂದುವರು. ಇವರು ಆಶ್ರಮದಲ್ಲಿರುವ ಸಮಯದಲ್ಲಿ ಭಾವನೆಯು ಕೇವಲ ಈಶ್ವರ ಮಯವಾಗಿರಬೇಕು.

ಕೂರ್ಮಪುರಾಣದಲ್ಲಿ ಎಂಭತ್ತನೆಯ ಅಧ್ಯಾಯವು ಸಮಾಪ್ತವು.



ಶ್ರೀಃ

# ಕೂರ್ಮಪುರಾಣಂ

---

## ಏಕಾಶೀತಿತಮೋಽಧ್ಯಾಯಃ.

**ವ್ಯಾಸ ಉವಾಚ :—**

**ಏವಂ ವನಾಶ್ರಮೇ ಸ್ಥಿತ್ವಾ ತೃತೀಯಂ ಭಾಗಮಾಯುಷಃ ।**
**ಚತುರ್ಥಮಾಯುಷೋ ಭಾಗಂ ಸನ್ಯಾಸೇನ ನಯೇತ್ ಕ್ರಮಾತ್॥ ೧ ॥**

**ಅಗ್ನೀನಾತ್ಮನಿ ಸಂಸ್ಥಾಪ್ಯ ದ್ವಿಜಃ ಪ್ರವ್ರಜಿತೋ ಭವೇತ್ ।**
**ಯೋಗಾಭ್ಯಾಸರತಃ ಶಾಂತೋ ಬ್ರಹ್ಮವಿದ್ಯಾಪರಾಯಣಃ ॥ ೨ ॥**

---

## ಎಂಭತ್ತೊಂದನೆಯ ಅಧ್ಯಾಯವು.

೧. ವ್ಯಾಸ ಮುನಿಯು ಹೀಗೆಂದು ಹೇಳಿದನು:— ಮಾನವನು ಈ ರೀತಿಯಾಗಿ ಆಯುಷ್ಯದ ಮೂರನೆಯ ಭಾಗದಲ್ಲಿ ವಾನ ಪ್ರಸ್ಥಾಶ್ರಮದಲ್ಲಿದ್ದು ಆಯುಷ್ಯದ ಚತುರ್ಥ ಭಾಗವನ್ನು ಕ್ರಮವಾಗಿ ಸನ್ಯಾಸವನ್ನು ಸ್ವೀಕರಿಸಿ ಆ ಆಶ್ರಮದಲ್ಲಿ ಕಳೆಯಬೇಕು.

೨. ದ್ವಿಜನು ಅರ್ಚಿಸಿದ ಅಗ್ನಿಗಳನ್ನು ಆತ್ಮದಲ್ಲಿ ಆರೋಪಮಾಡಿ ಸನ್ಯಾಸಕ್ಕೆ ಹೊರಡಬೇಕು. ತರುವಾಯ ಸನ್ಯಾಸಿಯು ಯೋಗಾಭ್ಯಾಸದಲ್ಲಿ ನಿರತನೂ, ಶಾಂತನೂ ಮತ್ತು ಬ್ರಹ್ಮ ವಿದ್ಯೆಯಲ್ಲಿ ಆಸಕ್ತನೂ ಆಗಿರಬೇಕು.

ಯದಾ ಮನಸಿ ಸಂಜಾತಂ ವೈತೃಷ್ಣ್ಯಂ ಸರ್ವವಸ್ತುಷು ।
ತದಾ ಸನ್ಯಾಸಮಿಚ್ಛಂತಿ ಪತಿತಃ ಸ್ಯಾದ್ವಿಪರ್ಯಯೇ ॥ ೩ ॥

ಪ್ರಾಜಾಪತ್ಯಾಂ ನಿರೂಪ್ಯೇಷ್ಟಿಮಾಗ್ನೇಯೀಮಥ ವಾ ಪುನಃ ।
ದಾಂತಃ ಪಕ್ವಕಷಾಯೋಽಸೌ ಬ್ರಹ್ಮಾಶ್ರಮಮುಪಾಶ್ರಯೇತ್ ॥ ೪ ॥

ಜ್ಞಾನಸನ್ಯಾಸಿನಃ ಕೇಚಿದ್ವೇದಸನ್ಯಾಸಿನಃ ಪರೇ ।
ಕರ್ಮಸನ್ಯಾಸಿನಸ್ತ್ವನ್ಯೇ ವಿವಿಧಾಃ ಪರಿಕೀರ್ತಿತಾಃ ॥ ೫ ॥

ಯಃ ಸರ್ವಸಂಗನಿರ್ಮುಕ್ತೋ ನಿರ್ದ್ವಂದ್ವಶ್ಚೈವ ನಿರ್ಭಯಃ ।
ಪ್ರೋಚ್ಯತೇ ಜ್ಞಾನಸನ್ಯಾಸೀ ಸ್ವಾತ್ಮನ್ಯೇವ ವ್ಯವಸ್ಥಿತಃ ॥ ೬ ॥

---

೩. ಯಾವ ಸಮಯದಲ್ಲಿ ಸಮಸ್ತ ವಸ್ತುಗಳಲ್ಲಿ ವೈರಾಗ್ಯವು ಮಾನವನ ಚಿತ್ತದಲ್ಲಿ ಜನಿಸುವುದೊ, ಆಗ ಸನ್ಯಾಸಾಶ್ರಮ ಸ್ವೀಕಾರಕ್ಕೆ ಅರ್ಹನಾಗುವನು. ವೈರಾಗ್ಯವಿಲ್ಲದ ಆಶ್ರಮ ಸ್ವೀಕಾರದಿಂದ ಪತಿತನಾಗುವನು.

೪. ಮೊದಲು ಪ್ರಾಜಾಪತ್ಯೇಷ್ಟಿಯನ್ನಾಗಲಿ, ಅಗ್ನಿದೇವತೇಷ್ಟಿಯನ್ನಾಗಲಿ ನೆರವೇರಿಸಿ ಇಂದ್ರಿಯ ನಿಗ್ರಹ ದಕ್ಷನೂ, ಪಕ್ವವಾದ ಚಿತ್ತ ಕಷಾಯವುಳ್ಳವನೂ ಆಗಿ ಬ್ರಹ್ಮಾಶ್ರಮವೆಂಬ ಸನ್ಯಾಸವನ್ನು ಪ್ರತಿಗ್ರಹಿಸಬೇಕು.

೫. ಇಂತಹ ಸನ್ಯಾಸಿಗಳಲ್ಲಿ ಕೆಲವರು ಜ್ಞಾನ ಸನ್ಯಾಸಿಗಳೂ, ಮತ್ತೆ ಕೆಲವರು ವೇದ ಸನ್ಯಾಸಿಗಳೂ ಇನ್ನು ಕೆಲವರು ಕರ್ಮ ಸನ್ಯಾಸಿಗಳೂ ಆಗಿರುವುದರಿಂದ ಸನ್ಯಾಸಿಗಳು ಅನೇಕ ವಿಧರಾಗಿರುವರೆಂದು ಕೀರ್ತಿಸಲ್ಪಟ್ಟಿರುವರು.

೬. ಯಾವ ಸನ್ಯಾಸಿಯು ಸರ್ವ ಸಂಗಗಳನ್ನು ಬಿಟ್ಟವನೂ, ದ್ವಂದ್ವದುಃಖ ರಹಿತನೂ, ಭಯ ಶೂನ್ಯನೂ ಮತ್ತು ಸ್ವಾತ್ಮಚಿಂತನೆಯಲ್ಲಿ ಮಾತ್ರ ನಿರತನೂ ಆಗಿರುವನೊ ಅವನು ಜ್ಞಾನ ಸನ್ಯಾಸಿಯೆಂದು ತಿಳಿಯಬೇಕು.

ವೇದಮೇವಾಭ್ಯಸೇನ್ನಿತ್ಯಂ ನಿರ್ದ್ವಂದ್ವೋ ನಿಷ್ಪರಿಗ್ರಹಃ ।
ಪ್ರೋಚ್ಯತೇ ವೇದಸನ್ನ್ಯಾಸೀ ಮುಮುಕ್ಷುರ್ವಿಜಿತೇಂದ್ರಿಯಃ ॥ ೭ ॥

ಯಸ್ತ್ವಗ್ನೀನಾತ್ಮಸಾತ್ ಕೃತ್ವಾ ಬ್ರಹ್ಮಾರ್ಪಣಪರೋ ದ್ವಿಜಃ ।
ಸ ಜ್ಞೇಯಃ ಕರ್ಮಸನ್ನ್ಯಾಸೀ ಮಹಾಯಜ್ಞಪರಾಯಣಃ ॥ ೮ ॥

ತ್ರಯಾಣಾಮಪಿ ಚೈತೇಷಾಂ ಜ್ಞಾನೀ ತ್ವಭ್ಯಧಿಕೋ ಮತಃ ।
ನ ತಸ್ಯ ವಿದ್ಯತೇ ಕಾರ್ಯಂ ನ ಲಿಂಗಂ ವಾ ವಿಪಶ್ಚಿತಃ ॥ ೯ ॥

ನಿರ್ಮಮೋ ನಿರ್ಭಯಃ ಶಾಂತೋ ನಿರ್ದ್ವಂದ್ವೋ ನಿಷ್ಪರಿಗ್ರಹಃ ।
ಜೀರ್ಣಕೌಪೀನವಾಸಾಃ ಸ್ಯಾನ್ನಗ್ನೋ ವಾ ಧ್ಯಾನತತ್ಪರಃ ॥ ೧೦ ॥

---

೭. ಮತ್ತಾವನು ದ್ವಂದ್ವದುಃಖ ವಿಕ್ಷೇಪೋಪಕರಣಗಳನ್ನು ದೂರ ಮಾಡಿ ಜಿತೇಂದ್ರಿಯನೂ, ಮೋಕ್ಷಾಕಾಂಕ್ಷಿಯೂ ಆಗಿ ಯಾವಾಗಲೂ ವೇದಗಳನ್ನು ಅಭ್ಯಾಸ ಮಾಡುತ್ತಿರುವನೋ, ಅವನು ವೇದ ಸನ್ಯಾಸಿಯೆಂದು ತಿಳಿಯಬೇಕು.

೮. ಯಾವ ದ್ವಿಜನು ಅಗ್ನಿಗಳನ್ನು ಆತ್ಮನಲ್ಲಿ ಸಮಾರೋಪ ಮಾಡಿ ಬ್ರಹ್ಮಾರ್ಪಣ ವಿಧಾನದಲ್ಲಿ ಆಸಕ್ತನೂ, ಮಹಾ ಯಜ್ಞಾನುಷ್ಠಾನಪರನೂ. ಆಗಿರುವನೋ, ಅವನು ಕರ್ಮ ಸನ್ಯಾಸಿಯೆಂದು ತಿಳಿಯಬೇಕು.

೯. ಈ ರೀತಿಯಾಗಿ ಮೂರು ಬಗೆಯ ಸನ್ಯಾಸಿಗಳಲ್ಲಿ ಜ್ಞಾನ ಸನ್ಯಾಸಿಯು ಹೆಚ್ಚಾದವನೆಂದು ಪ್ರಾಜ್ಞಸಮ್ಮತವಾಗಿದೆ. ಅಂತಹ ಜ್ಞಾನಿಗೆ ಕಾರ್ಯ ಅಥವಾ ಲಿಂಗಗಳಾವುವೂ ಇಲ್ಲ.

೧೦. ಅಂತಹ ಸನ್ಯಾಸಿಯು ಮಮತೆ-ಭಯಗಳಿಂದ ರಹಿತನೂ, ಶಾಂತಿಯಿಂದ ಕೂಡಿದವನೂ, ದ್ವಂದ್ವದುಃಖ–ಪರಿಗ್ರಹ ವರ್ಜಿತನೂ, ಮತ್ತು ಜೀರ್ಣವಾದ ಕೌಪೀನ ವಸ್ತ್ರವನ್ನು ಮಾತ್ರ ಧರಿಸಿದವನೂ ಅಥವಾ ನಗ್ನನೂ ಆಗಿ ಧ್ಯಾನ ಯೋಗದಲ್ಲಿ ತತ್ಪರನಾಗಿರಬೇಕು.

ಬ್ರಹ್ಮಚಾರೀ ಮಿತಗ್ರಾಸೀ ಗ್ರಾಮಾತ್ತ್ವನ್ನಂ ಸಮಾಹರೇತ್ ।
ಅಧ್ಯಾತ್ಮಮತಿರಾಸೀತ ನಿರಪೇಕ್ಷೋ ನಿರಾಮಿಷಃ ॥ ೧೧ ॥

ಆತ್ಮನೈವ ಸಹಾಯೇನ ಸುಖಾರ್ಥೀ ವಿಚರೇದಿಹ । ॥ ೧೨ ॥

ನಾಭಿನಂದೇತ ಮರಣಂ ನಾಭಿನಂದೇತ ಜೀವಿತಮ್ ।
ಕಾಲಮೇವ ಪ್ರತೀಕ್ಷೇತ ನಿದೇಶಂ ಭೃತಕೋ ಯಥಾ ॥ ೧೩ ॥

ನಾಧ್ಯೇತವ್ಯಂ ನ ವಕ್ತವ್ಯಂ ಶ್ರೋತವ್ಯಂ ನ ಕದಾಚನ ।
ಏವಂ ಜ್ಞಾನಾತ್ಮಾ ಪರೋ ಯೋಗೀ ಬ್ರಹ್ಮಭೂಯಾಯ ಕಲ್ಪತೇ ॥೧೪॥

---

೧೧. ಮತ್ತು ಬ್ರಹ್ಮನಿಷ್ಠನೂ, ಮಿತವಾದ ಗ್ರಾಸಾಹಾರವನ್ನು ಸ್ವೀಕರಿಸು ವವನೂ ಆಗಿ ಗ್ರಾಮದಿಂದ ಅನ್ನವನ್ನು ತರಿಸಿಕೊಳ್ಳಬೇಕು. ಮತ್ತು ಯಾವುದೊಂದು ಪರಿಗ್ರಹದ ಆಕಾಂಕ್ಷಾಶೂನ್ಯನೂ, ಭೋಗ ವಸ್ತು ರಹಿತನೂ ಆಗಿ ಅಧ್ಯಾತ್ಮ ವಿದ್ಯಾ ಪರನಾಗಿರಬೇಕು.

೧೨. ಮತ್ತು ಅಂತಹ ಯತಿಯು ತಾನು ಧ್ಯಾನಿಸುತ್ತಿರುವ ತತ್ವವಾದ ಆತ್ಮನ ಸಹಾಯ ಮಾತ್ರದಿಂದ ಲೋಕಾತೀತವಾದ ಸುಖವನ್ನು ಇಚ್ಛಿಸುತ್ತಿರುವವ ನಾಗಿ ವಿಹರಿಸುತ್ತಿರಬೇಕು.

೧೩. ಮತ್ತು ಜಿಹಾಸೆಯಿಂದ ಮರಣವನ್ನು ಇಚ್ಛಿಸಬಾರದು. ಹಾಗು ದೀರ್ಘಕಾಲ ಜೀವನವನ್ನು ಆಶಿಸಬಾರದು. ಭೃತ್ಯನು ಪ್ರಭುವಿನ ಆಜ್ಞೆಯನ್ನು ನಿರೀಕ್ಷಿಸುತ್ತಿರುವಂತೆ ವಿರಕ್ತನು ಕಾಲವನ್ನು ಪ್ರತೀಕ್ಷಿಸುತ್ತಿರಬೇಕು.

೧೪. ವಿಶೇಷವಾಗಿ ಅಧ್ಯಯನ ಮಾಡುವುದು, ಶ್ರವಣ ಮಾಡುವುದು, ಪ್ರವಚನ ಮಾಡುವುದು—ಮುಂತಾದ ವೃತ್ತಿಗಳನ್ನು ದೂರವಾಗಿ ಬಿಡಬೇಕು. ಹೀಗೆ ಜ್ಞಾನ ನಿಷ್ಠಾ ತತ್ಪರನಾಗಿ ಯೋಗಿಯು ಬಹ್ಮ ಭಾವವೆಂಬ ಮೋಕ್ಷಕ್ಕೆ ಅರ್ಹನಾಗುತ್ತಾನೆ.

ಏಕವಾಸಾಥವಾ ವಿದ್ವಾನ್ ಕೌಪೀನಾಚ್ಛಾದನಸ್ತಥಾ ।
ಮುಂಡೀ ಶಿಖೀ ವಾಥ ಭವೇತ್ತ್ರಿದಂಡೀ ನಿಷ್ಪರಿಗ್ರಹಃ ॥ ೧೫ ॥

ಕಾಷಾಯವಾಸಾಃ ಸತತಂ ಧ್ಯಾನಯೋಗಪರಾಯಣಃ ।
ಗ್ರಾಮಾಂತೇ ವೃಕ್ಷಮೂಲೇ ವಾ ವಸೇದ್ದೇವಾಲಯೇಽಪಿ ವಾ ॥ ೧೬ ॥

ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ।
ಭೈಕ್ಷ್ಯೇಣ ವರ್ತಯೇನ್ನಿತ್ಯಂ ನೈಕಾನ್ನಾದೀ ಭವೇತ್ ಕ್ವಚಿತ್ ॥ ೧೭ ॥

ಯಸ್ತು ಮೋಹೇನ ವಾನ್ಯಸ್ಮಾದೇಕಾನ್ನಾದೀ ಭವೇದ್ಯತಿಃ ।
ನ ತಸ್ಯ ನಿಷ್ಕೃತಿಃ ಕಾಚಿದ್ಧರ್ಮಶಾಸ್ತ್ರೇಷು ಕಥ್ಯತೇ ॥ ೧೮ ॥

---

೧೫. ಇಂತಹ ಯತಿಯು ಏಕವಸ್ತ್ರಧಾರಿ ಅಥವಾ ಕೌಪೀನ ವಸ್ತ್ರಧಾರಿಯೂ ಶಿರೋಮುಂಡನ ಅಥವಾ ಶಿಖಾಧಾರಿಯೂ, ತ್ರಿದಂಡಧಾರಿಯೂ ಮತ್ತು ವಿಶೇಷ ಪರಿಗ್ರಹ ಶೂನ್ಯನೂ ಆಗಿರಬೇಕು.

೧೬. ಹಾಗು ಕಷಾಯುವಸ್ತ್ರಗಳನ್ನು ಧರಿಸಿದವನಾಗಿ ಸಂತತವಾದ ಧ್ಯಾನ ಯೋಗದಲ್ಲಿ ತತ್ಪರನಾಗಬೇಕು. ಮತ್ತು ಗ್ರಾಮದ ಸೀಮಾಂತದಲ್ಲಿ ವೃಕ್ಷದ ಮೂಲದಲ್ಲಿ ಅಥವಾ ದೇವಾಲಯದಲ್ಲಿ ವಾಸಮಾಡಬೇಕು.

೧೭. ಹಾಗು ಶತ್ರು ಮಿತ್ರರಲ್ಲಿ ಸಮಭಾವನೆಯುಳ್ಳವನೂ, ಮಾನ- ಅವ ಮಾನಗಳಲ್ಲಿ ರಾಗ ದ್ವೇಷವಿಲ್ಲದವನೂ ಆಗಿ ಭಿಕ್ಷಾನ್ನದಿಂದ ಪ್ರತಿನಿತ್ಯದಲ್ಲಿ ಆಹಾರ ವನ್ನು ನಡೆಸಬೇಕು. ಯತಿಯು ಯಾವಾಗಲೂ ಏಕಾನ್ನವನ್ನು ಭುಂಜಿಸಬಾರದು.

೧೮. ಯಾವ-ಯತಿಯು ಮೋಹದಿಂದ ಅಥವಾ ಮತ್ತಾವ ಕಾರಣದಿಂದ ಏಕಾನ್ನವನ್ನು ಭುಂಜಿಸುತ್ತಿರುವನೋ, ಅವನ ಆ ದೋಷಪರಿಹಾರಕ್ಕೆ ಧರ್ಮಶಾಸ್ತ್ರ ಗಳಲ್ಲಿ ಯಾವ ಪ್ರಾಯಶ್ಚಿತ್ತವೂ ಹೇಳಲ್ಪಟ್ಟಿರುವುದಿಲ್ಲ.

ರಾಗದ್ವೇಷವಿಮುಕ್ತಾತ್ಮಾ ಸಮಲೋಷ್ಟಾಶ್ಮಕಾಂಚನಃ ।
ಪ್ರಾಣಿಹಿಂಸಾನಿವೃತ್ತಶ್ಚ ಮೌನೀ ಸ್ಯಾತ್ಸರ್ವನಿಸ್ಪೃಹಃ ॥ ೧೯ ॥

ದೃಷ್ಟಿಪೂತಂ ನ್ಯಸೇತ್ಪಾದಂ ವಸ್ತ್ರಪೂತಂ ಪಿಬೇಜ್ಜಲಮ್ ।
ಶಾಸ್ತ್ರಪೂತಾಂ ವದೇದ್ವಾಣೀಂ ಮನಃಪೂತಂ ಸಮಾಚರೇತ್ ॥ ೨೦ ॥

ನೈಕತ್ರ ನಿವಸೇದ್ದೇಶೇ ವರ್ಷಾಭ್ಯೋಽನ್ಯತ್ರ ಭಿಕ್ಷುಕಃ ।
ಸ್ನಾನಶೌಚರತೋ ನಿತ್ಯಂ ಕಮಂಡಲುಕರಃ ಶುಚಿಃ ॥ ೨೧ ॥

ಬ್ರಹ್ಮಚರ್ಯರತೋ ನಿತ್ಯಂ ವನವಾಸರತೋ ಭವೇತ್ ।
ಮೋಕ್ಷಶಾಸ್ತ್ರೇಷು ನಿರತೋ ಬ್ರಹ್ಮಚಾರೀ ಜಿತೇಂದ್ರಿಯಃ ॥ ೨೨ ॥

---

೧೯. ಮತ್ತು ರಾಗ-ದ್ವೇಷಗಳಿಂದ ಮುಕ್ತವಾದ ಅಂತಃಕರಣವುಳ್ಳವನೂ, ಲೋಷ್ಟ-ಅಶ್ಮ ಕಾಂಚನಗಳಲ್ಲಿ ಸಮತ್ವ ಬುದ್ಧಿಯುಳ್ಳವನೂ, ಪ್ರಾಣಿಹಿಂಸೆಯನ್ನು ತ್ಯಜಿಸಿದವನೂ, ಮೌನವಂತನೂ ಮತ್ತು ಸಮಸ್ತವಸ್ತುಗಳಲ್ಲಿ ವಿರಕ್ತನೂ ಆಗಬೇಕು.

೨೦. ಮತ್ತು ದೃಷ್ಟಿಯಿಂದ ವಿವೇಚಿಸಿ ಪವಿತ್ರಸ್ಥಳದಲ್ಲಿ ಪಾದನ್ನು ಇಡಬೇಕು. ವಸ್ತ್ರದಿಂದ ಶೋಧಿಸಿ ಪವಿತ್ರಜಲವನ್ನು ಪಾನಮಾಡಬೇಕು. ಶಾಸ್ತ್ರ ಸಂಸ್ಕಾರದಿಂದ ಪವಿತ್ರವಾದ ವಾಣಿಯನ್ನು ಉಚ್ಚರಿಸಬೇಕು ಮತ್ತು ಮನಃಪರೀಕ್ಷೆಯಿಂದ ಶುದ್ಧವಾದ ವರ್ತನೆಯನ್ನು ನಡೆಸಬೇಕು.

೨೧. ಭಿಕ್ಷುಕನು ವರ್ಷಋತುವನ್ನು ಹೊರತು ಮಿಕ್ಕಸಮಯದಲ್ಲಿ ಒಂದು ದೇಶದಲ್ಲಿ ಸ್ಥಿರವಾಗಿ ವಾಸಮಾಡಬಾರದು. ಸರ್ವಕಾಲದಲ್ಲಿಯೂ ಸ್ನಾನ-ಶೌಚ ವಿಧಿಗಳಲ್ಲಿ ನಿರತನೂ, ಕಮಂಡಲುವನ್ನು ಪಾಣಿಯಲ್ಲಿ ಧರಿಸಿದವನೂ ಮತ್ತು ಶುಚಿಯೂ ಆಗಬೇಕು.

೨೨. ಯಾವಾಗಲೂ ಬ್ರಹ್ಮಚರ್ಯ ನಿಯಮಗಳಲ್ಲಿ ನಿರತನಾಗಬೇಕು. ವನವಾಸದಲ್ಲಿ ನಿರತನಾಗಬೇಕು. ಮತ್ತು ಉಪನಿಷದಾದಿ ವೇದಪಠನ ತತ್ಪರನೂ, ಜಿತೇಂದ್ರಿಯನೂ ಆಗಿ ಮೋಕ್ಷ ಶಾಸ್ತ್ರಗಳಲ್ಲಿ ಆಸಕ್ತಿಯಿಂದಿರಬೇಕು.

ದಂಭಾಹಂಕಾರನಿರ್ಮುಕ್ತೋ ನಿಂದಾಪೈಶುನ್ಯವರ್ಜಿತಃ ।
ಆತ್ಮಜ್ಞಾನಗುಣೋಪೇತೋ ಯತಿರ್ಮೋಕ್ಷಮವಾಪ್ನುಯಾತ್ ॥ ೨೩ ॥

ಅಭ್ಯಸೇತ್ ಸತತಂ ವೇದಂ ಪ್ರಣವಾಖ್ಯಂ ಸನಾತನಮ್ ।
ಸ್ನಾತ್ವಾಚಮ್ಯ ವಿಧಾನೇನ ಶುಚಿರ್ದೇವಾಲಯಾದಿಷು ॥ ೨೪ ॥

ಯಜ್ಞೋಪವೀತೀ ಶಾಂತಾತ್ಮಾ ಕುಶಪಾಣಿಃ ಸಮಾಹಿತಃ ।
ಧೌತಕಾಷಾಯವಸನೋ ಭಸ್ಮಚ್ಛನ್ನತನೂರುಹಃ ॥ ೨೫ ॥

ಅಧಿಯಜ್ಞಂ ಬ್ರಹ್ಮ ಜಪೇದಾಧಿದೈವಿಕಮೇವ ವಾ ।
ಆಧ್ಯಾತ್ಮಿಕಂ ಚ ಸತತಂ ವೇದಾಂತಾಭಿಹಿತಂ ಚ ಯತ್ ॥ ೨೬ ॥

---

೨೩. ಮತ್ತು ದಂಭ–ಅಹಂಕಾರಗಳಿಂದ ನಿರ್ಮುಕ್ತನೂ, ನಿಂದೆ ಪೈಶುನ್ಯಗಳಿಂದ ವರ್ಜಿತನೂ, ಆತ್ಮಜ್ಞಾನವೆಂಬ ಗುಣದಿಂದ ಕೂಡಿದವನೂ ಆದ ಯತಿಯು ಮೋಕ್ಷವನ್ನು ಹೊಂದುತ್ತಾನೆ.

೨೪. ಮತ್ತು ಯಥಾವಿಧಿಯಾದ ಸ್ನಾನ-ಆಚಮನಗಳಿಂದ ಪವಿತ್ರನಾಗಿ ದೇವಾಲಯಾದಿಗಳಲ್ಲಿ ಕುಳಿತುಕೊಂಡು ಅನಾದಿಯಾದ ವೇದಗಳ ಸಾರರೂಪವಾದ ಓಂಕಾರವನ್ನು ಜಪಮಾಡಬೇಕು.

೨೫. ಹಾಗು ಯಜ್ಞೋಪವೀತಧಾರಣ, ಶಾಂತವಾದ ಮಾನಸ, ಹಸ್ತದಲ್ಲಿ ದರ್ಭಪವಿತ್ರ, ಚಿತ್ತಸಮಾಧಾನ, ಧೌತವಾದ ಕಷಾಯವಸ್ತ್ರಧಾರಣ, ಮತ್ತು ಭಸ್ಮಧಾರಣಗಳಿಂದ ಮುಚ್ಚಿದ ಸಕಲರೋಮಕೂಪಗಳೆಂಬ ಗುಣಗಳಿಂದ ಕೂಡಿರಬೇಕು.

೨೬. ಯಜ್ಞಗಳಲ್ಲಿ ಪೂಜ್ಯವಾದ ಬ್ರಹ್ಮವಸ್ತುವನ್ನೂ, ದೇವತಾ ವಿಭೂತಿಗಳಲ್ಲಿರುವ ಬ್ರಹ್ಮವಸ್ತುವನ್ನೂ, ಅಧ್ಯಾತ್ಮ ಬ್ರಹ್ಮವಸ್ತುವನ್ನೂ ಮತ್ತು ವೇದಾಂತ ಪ್ರತಿಪಾದ್ಯವಾದ ನಿರ್ಗುಣ ಬ್ರಹ್ಮವಸ್ತುವನ್ನೂ ಸಂತತವಾಗಿ ಚಿಂತಿಸಬೇಕು.

ಪುತ್ರೇಷು ಚಾಥ ನಿವಸನ್ ಬ್ರಹ್ಮಚಾರೀ ಯತಿರ್ಮುನಿಃ ।
ವೇದಮೇವಾಭ್ಯಸೇನ್ನಿತ್ಯಂ ಸ ಯಾತಿ ಪರಮಾಂ ಗತಿಮ್ ॥ ೨೭ ॥

ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ತಪಃ ಪರಮ್ ।
ಕ್ಷಮಾ ದಯಾ ಚ ಸಂತೋಷೋ ವ್ರತಾನ್ಯಸ್ಯ ವಿಶೇಷತಃ ॥ ೨೮ ॥

ವೇದಾಂತಜ್ಞಾನನಿಷ್ಠೋ ವಾ ಪಂಚಯಜ್ಞಾನ್ ಸಮಾಹಿತಃ ।
ಜ್ಞಾನಧ್ಯಾನಸಮಾಯುಕ್ತೋ ಭಿಕ್ಷಾರ್ಥೇನೈವ ತೇನ ಹಿ ॥ ೨೯ ॥

ಹೋಮಮಂತ್ರಾನ್ ಜಪೇನ್ನಿತ್ಯಂ ಕಾಲೇ ಕಾಲೇ ಸಮಾಹಿತಃ ।
ಸ್ವಾಧ್ಯಾಯಂ ಚಾನ್ವಹಂ ಕುರ್ಯಾತ್ ಸಾವಿತ್ರೀಂ ಸಂಧ್ಯಯೋರ್ಜಪೇತ್ ॥ ೩೦ ॥

---

೨೭. ಮನನಶೀಲನಾದ ಯತಿಯು ಬ್ರಹ್ಮಚರ್ಯ ನಿಯಮದಿಂದ ಪುತ್ರರ ಅಧೀನದಲ್ಲಿದ್ದು ಸರ್ವಕಾಲಗಳಲ್ಲಿಯೂ ವೇದರಹಸ್ಯಗಳನ್ನು ಅಭ್ಯಾಸಮಾಡುತ್ತಿರಬೇಕು. ಅಂತಹ ಯತಿಯು ಪರಮಗತಿಯನ್ನು ಹೊಂದುತ್ತಾನೆ.

೨೮. ಮತ್ತು ಇಂತಹ ಯತಿಗೆ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಪರಮತಪಸ್ಸು, ಕ್ಷಮೆ, ದಯೆ, ಮತ್ತು ಸಂತೋಷ ಎಂಬ ಗುಣಗಳು ವಿಶೇಷವಾಗಿ ಅನುಷ್ಠಾನಮಾಡಬೇಕಾದ ವ್ರತಗಳಾಗಿರುವುವು.

೨೯. ಅಥವಾ ವೇದಾಂತ ಜ್ಞಾನನಿಷ್ಠೆಯುಳ್ಳವನೂ, ಸಮಾಧಾನ ಚಿತ್ತದಿಂದ ಪಂಚಮಹಾಯಜ್ಞಗಳನ್ನು ಆಚರಿಸುವವನೂ. ಜ್ಞಾನ ಧ್ಯಾನಯೋಗಗಳಲ್ಲಿ ನಿರತನೂ ಮತ್ತು ಭಿಕ್ಷಾನ್ನದಿಂದ ಶರೀರಯಾತ್ರೆಯನ್ನು ನೆರವೇರಿಸುವವನೂ ಆಗಬೇಕು.

೩೦. ಮತ್ತು ಆಯಾಯ ಹೋಮಕಾಲಗಳಲ್ಲಿ ಸಮಾಹಿತನಾಗಿ ಹೋಮಮಂತ್ರಗಳನ್ನು ತಪ್ಪದೇ ಜಪಿಸಬೇಕು. ಹಾಗು ಪ್ರತಿದಿನವೂ ವೇದಾಧ್ಯಯನವನ್ನು ಮಾಡಬೇಕು. ಮತ್ತು ಸಂಧ್ಯಾಸಮಯಗಳಲ್ಲಿ ಗಾಯತ್ರಿಯನ್ನು ಜಪಮಾಡಬೇಕು.

ತತೋ ಧ್ಯಾಯೀತ ತಂ ದೇವಮೇಕಾಂತೇ ಪರಮೇಶ್ವರಮ್ ।
ಏಕಾಂತೇ ವರ್ಜಯೇನ್ನಿತ್ಯಂ ಕಾಮಂ ಕ್ರೋಧಂ ಪರಿಗ್ರಹಮ್ ॥ ೩೧ ॥

ಏಕವಾಸಾ ದ್ವಿವಾಸಾ ವಾ ಶಿಖೀ ಯಜ್ಞೋಪವೀತವಾನ್ ।
ಕಮಂಡಲುಕರೋ ವಿದ್ವಾನ್ ತ್ರಿದಂಡೀ ಯಾತಿ ತತ್ಪರಮ್ ॥ ೩೨ ॥

ಇತಿ ಶ್ರೀ ಕೂರ್ಮಪುರಾಣೇ ಏಕಾಶೀತಿತಮೋಽಧ್ಯಾಯಃ.

---

೩೧. ಮತ್ತು ಏಕಾಂತದಲ್ಲಿ ಕುಳಿತು ಪರಮೇಶ್ವರನಾದ ಸ್ವಾಮಿಯನ್ನು ಧ್ಯಾನಮಾಡಬೇಕು. ಹಾಗು ಏಕಾಂತದಲ್ಲಿ ಕಾಮ, ಕ್ರೋಧ ಮತ್ತು ಭೋಗ್ಯವಸ್ತು ಪರಿಗ್ರಹವನ್ನು ಯಾವಾಗಲೂ ವರ್ಜಿಸಬೇಕು.

೩೨. ಏಕವಸ್ತ್ರವನ್ನು ಅಥವಾ ವಸ್ತ್ರದ್ವಯವನ್ನು ಧರಿಸಿದವನೂ, ಶಿಖಾ ಯಜ್ಞೋಪವೀತಗಳನ್ನು ಧರಿಸಿದವನೂ, ಕಮಂಡಲುಧರನೂ, ವಿದ್ಯಾವಂತನೂ ಮತ್ತು ತ್ರಿದಂಡಸನ್ಯಾಸಿಯೂ ಆದ ಯತಿಯು ಪರಮಪದವಿಯನ್ನು ಹೊಂದುತ್ತಾನೆ.

ಕೂರ್ಮಪುರಾಣದಲ್ಲಿ ಎಂಭತ್ತೊಂದನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಕೂರ್ಮಪುರಾಣಂ



## ದ್ವ್ಯಶೀತಿತಮೋಽಧ್ಯಾಯಃ.

ವ್ಯಾಸ ಉವಾಚ :—

ಏವಂ ಸ್ವಾಶ್ರಮನಿಷ್ಠಾನಾಂ ಯತೀನಾಂ ನಿಯತಾತ್ಮನಾಮ್ ।
ಭೈಕ್ಷ್ಯೇಣ ವರ್ತನಂ ಪ್ರೋಕ್ತಂ ಫಲಮೂಲೈರಥಾಪಿ ವಾ ॥ ೧ ॥

ಏಕಕಾಲಂ ಚರೇದ್ಭೈಕ್ಷಂ ನ ಪ್ರಸಜ್ಜೇತ ವಿಸ್ತರೇ ।
ಭೈಕ್ಷ್ಯಪ್ರಸಕ್ತೋ ಹಿ ಯತಿರ್ವಿಷಯೇಷ್ವಪಿ ಸಜ್ಜತಿ ॥ ೨ ॥

---

## ಎಂಭತ್ತೆರಡನೆಯ ಅಧ್ಯಾಯವು.

೧. ವ್ಯಾಸಮುನಿಯು ಇಂತೆಂದನು.—ಈ ರೀತಿಯಾಗಿ ತಮ್ಮ ಆಶ್ರಮ ಧರ್ಮಗಳಲ್ಲಿರುವ, ನಿಗ್ರಹಿಸಿದ ಮಾನಸವುಳ್ಳ ಯತಿಗಳಿಗೆ ಭಿಕ್ಷಾಟನದಿಂದಲಾಗಲಿ ಫಲ-ಮೂಲಗಳಿಂದಲಾಗಲಿ ಶರೀರಧಾರಣವು ವಿಹಿತವಾಗಿದೆ.

೨. ಯತಿಯು ಪ್ರತಿದಿನದಲ್ಲಿ ಒಂದುಸಲಮಾತ್ರ ಭಿಕ್ಷೆಯನ್ನು ತರಬೇಕು. ವಿಶೇಷವಾಗಿ ಭಿಕ್ಷಾನ್ನಾರ್ಜನೆಯಲ್ಲಿ ತೊಡಗಬಾರದು. ಭಿಕ್ಷಾನ್ನದಲ್ಲಿ ವಿಶೇಷವಾಗಿ ಪ್ರಸಕ್ತನಾದ ಯತಿಯು ವಿಷಯಗಳಲ್ಲಿಯೂ ಆಸಕ್ತಿಯನ್ನು ಹೊಂದುತ್ತಾನೆ.

ಸಪ್ತಾಗಾರಾಂಶ್ಚರೇದ್ಭೈಕ್ಷಮಲಾಭೇ ತು ಪುನಶ್ಚರೇತ್ ।
ಪ್ರಕ್ಷಾಲ್ಯ ಪಾತ್ರೇ ಭುಂಜೀತ ಅದ್ಭಿಃ ಪ್ರಕ್ಷಾಲಯೇತ್ತ್ವಿನಃ ॥ ೩ ॥

ಅಥ ವಾನ್ಯದುಪಾದಾಯ ಪಾತ್ರೇ ಭುಂಜೀತ ನಿತ್ಯಶಃ ।
ಭುಕ್ತ್ವಾ ತತ್ಸಮ್ತ್ಯಜೇತ್ಪಾತ್ರಂ ಯಾತ್ರಾಮಾತ್ರಮಲೋಲುಪಃ ॥ ೪ ॥

ವಿಧೂಮೇ ಸನ್ನಮುಸಲೇ ವ್ಯಂಗಾರೇ ಭುಕ್ತವಜ್ಜನೇ ।
ವೃತ್ತೇ ಶರಾವಸಂಪಾತೇ ಭಿಕ್ಷಾಂ ನಿತ್ಯಂ ಯತಿಶ್ಚರೇತ್ ॥ ೫ ॥

ಗೋದೋಹಮಾತ್ರಂ ತಿಷ್ಠೇತ ಕಾಲಂ ಭಿಕ್ಷುರಧೋಮುಖಃ ।
ಭಿಕ್ಷೇತ್ಯುಕ್ತ್ವಾ ಸಕೃತ್ತೂಷ್ಣೀಮಶ್ನೀಯಾದ್ವಾಗ್ಯತಃ ಶುಚಿಃ ॥ ೬ ॥

---

೩. ಪ್ರತಿದಿನದಲ್ಲಿಯೂ ಏಳು ಮನೆಗಳಲ್ಲಿ ಮಾತ್ರ ಭಿಕ್ಷೆಯನ್ನು ಎತ್ತಬೇಕು. ಅಷ್ಟು ಮನೆಗಳಲ್ಲಿ ಭಿಕ್ಷೆಯು ಲಭಿಸದಿದ್ದರೆ ಮತ್ತೆ ಭಿಕ್ಷೆಯನ್ನು ಎತ್ತಬೇಕು. ಆ ಭಿಕ್ಷಾನ್ನವನ್ನು ತೊಳೆದ ಪಾತ್ರೆಯಲ್ಲಿ ಭುಂಜಿಸಬೇಕು. ಮತ್ತೆ ಪಾತ್ರೆಯನ್ನು ನೀರಿನಿಂದ ತೊಳೆಯಬೇಕು.

೪. ಅಥವಾ ಮತ್ತೊಂದು ಪಾತ್ರೆಯನ್ನು ಉಪಯೋಗಿಸಿ ನಿತ್ಯವೂ ಭುಂಜಿಸಬೇಕು. ವಿಶೇಷವಾಗಿ ಆಸ್ವಾದನೆಯಲ್ಲಿ ರುಚಿಯನ್ನಿಡದೆ ಶರೀರಯಾತ್ರಾ ಮಾತ್ರದ ಉದ್ದೇಶದಿಂದ ಭೋಜನಮಾಡಿ ಆ ಪಾತ್ರೆಯನ್ನು ಸಂಮಾರ್ಜಿಸಬೇಕು.

೫. ಯತಿಯು ಹೊಗೆಯಾಡುವುದು ನಿಂತಿರುವ, ಮುಸಲ ಧ್ವನಿಯು ಅಡಗಿರುವ, ಅಗ್ನಿ ಅಂಗಾರಶೂನ್ಯವಾದ, ಜನರ ಭೋಜನ ಮುಗಿದಿರುವ ಮತ್ತು ಶರಾವಾದಿ ಪಾತ್ರಗಳನ್ನು ಇರಿಸಿರುವ ಗೃಹದಲ್ಲಿ ಯಾವಾಗಲೂ ಭಿಕ್ಷೆಯನ್ನು ಬೇಡಬೇಕು.

೬. ಭಿಕ್ಷುವು ಒಂದುಸಲ ಮಾತ್ರ "ಭಿಕ್ಷಾನ್ನ" ಎಂದು ಕೂಗಿ ಕೆಳಮುಖನಾಗಿ ದೃಷ್ಟಿಯನ್ನು ಇಟ್ಟುಕೊಂಡು ಹಸುವಿನ ಹಾಲು ಕರೆಯುವಷ್ಟು ಸಮಯ ಮಾತ್ರ ನಿರೀಕ್ಷಿಸಬೇಕು. ತರುವಾಯ ಆ ಭಿಕ್ಷಾನ್ನವನ್ನು ಮೌನಿಯೂ, ಶುಚಿಯೂ ಆಗಿ ಸೇವಿಸಬೇಕು.

ಪ್ರಕ್ಷಾಲ್ಯ ಪಾಣೀ ಪಾದೌ ಚ ಸಮಾಚಮ್ಯ ಯಥಾವಿಧಿ ।
ಆದಿತ್ಯೇ ದರ್ಶಯಿತ್ವಾನ್ನಂ ಭುಂಜೀತ ಪ್ರಾಙ್ಮುಖಃ ಶುಚಿಃ ॥ ೭ ॥

ಹುತ್ವಾ ಪ್ರಾಣಾಹುತೀಃ ಪಂಚ ಗ್ರಾಸಾನಷ್ಟೌ ಸಮಾಹಿತಃ ।
ಆಚಮ್ಯ ದೇವಂ ಬ್ರಹ್ಮಾಣಂ ಧ್ಯಾಯೀತ ಪರಮೇಶ್ವರಮ್ ॥ ೮ ॥

ಅಲಾಬುಂ ದಾರುಪಾತ್ರಂ ಚ ಮೃಣ್ಮಯಂ ವೈಣವಂ ತತಃ ।
ಚತ್ವಾರ್ಯೇತಾನಿ ಪಾತ್ರಾಣಿ ಮನುರಾಹ ಪ್ರಜಾಪತಿಃ ॥ ೯ ॥

ಪ್ರಾಗ್ರಾತ್ರೇ ಪರರಾತ್ರೇ ಚ ಮಧ್ಯರಾತ್ರೇತಥೈವ ಚ ।
ಸಂಧ್ಯಾಸ್ವಗ್ನಿವಿಶೇಷೇಣ ಚಿಂತಯೇನ್ನಿತ್ಯಮೀಶ್ವರಮ್ ॥ ೧೦ ॥

---

೭. ಮೊದಲು ಪಾಣಿ-ಪಾದಗಳನ್ನು ತೊಳೆದುಕೊಂಡು ಯಥಾವಿಧಿಯಾಗಿ ಆಚಮನವನ್ನು ಮಾಡಿ ಭಿಕ್ಷೆಯೆತ್ತಿ ತಂದಿರುವ ಅನ್ನವನ್ನು ಸೂರ್ಯನಿಗೆ ತೋರಿಸಿ ಪವಿತ್ರವಾಗಿ ಪೂರ್ವಾಭಿಮುಖವಾಗಿ ಕುಳಿತುಕೊಂಡು ಭುಂಜಿಸಬೇಕು.

೮. ಭೋಜನದ ಆರಂಭದಲ್ಲಿ ಪಂಚ ಪ್ರಾಣಾಹುತಿಗಳನ್ನು ಹೋಮಮಾಡಿ ಸಮಾಧಾನದಿಂದ ಎಂಟು ಗ್ರಾಸಗಳನ್ನು ಭುಂಜಿಸಿ ಆಚಮನ ಮಾಡಿಸಿ ಪರಮೇಶ್ವರನಾದ ಬ್ರಹ್ಮದೇವನನ್ನು ಧ್ಯಾನಮಾಡಬೇಕು.

೯. ಸನ್ಯಾಸಿಯು ತುಂಬೀಫಲ, ದಾರುಪಾತ್ರ, ಮೃತ್ಪಾತ್ರೆ ಮತ್ತು ವೇಣುಪಾತ್ರೆಗಳೆಂಬ ನಾಲ್ಕು ವಿಧದ ಪಾತ್ರಗಳನ್ನು ಉಪಯೋಗಿಸಬಹುದೆಂದು ಮನು ಪ್ರಜಾಪತಿಯು ಉಪದೇಶಮಾಡಿರುತ್ತಾನೆ.

೧೦. ಪೂರ್ವರಾತ್ರಿ, ಪರರಾತ್ರಿ, ಮತ್ತು ಮಧ್ಯರಾತ್ರಿಗಳಲ್ಲಿಯೂ ಸಂಧ್ಯಾಸಮಯಗಳಲ್ಲಿಯೂ ಅಗ್ನಿರೂಪದಿಂದ ಪ್ರಕಾಶಿಸುವಂತೆ ಯಾವಾಗಲೂ ಪರಮೇಶ್ವರನನ್ನು ಚಿಂತಿಸಬೇಕು.

ಕೃತ್ವಾ ಹೃತ್ಪದ್ಮನಿಲಯೇ ವಿಶ್ವಾಖ್ಯಂ ವಿಶ್ವಸಂಭವಮ್ ।
ಆತ್ಮಾನಂ ಸರ್ವಭೂತಾನಾಂ ಪರಸ್ತಾತ್ತಮಸಃ ಸ್ಥಿತಮ್ ॥ ೧೧ ॥

ಸರ್ವಸ್ಯಾಧಾರಭೂತಾನಾಮಾನಂದಂ ಜ್ಯೋತಿರವ್ಯಯಮ್ ।
ಪ್ರಧಾನಪುರುಷಾತೀತಮಾಕಾಶಕೇಹರಂ ಶಿವಮ್ ॥ ೧೨ ॥

ತದಂತಃ ಸರ್ವಭಾವಾನಾಮೀಶ್ವರಂ ಬ್ರಹ್ಮರೂಪಿಣಮ್ ।
ಧ್ಯಾಯೇದನಾದಿಮಧ್ಯಾಂತಮಾನಂದಾದಿಗುಣಾಲಯಮ್ ॥ ೧೩ ॥

ಮಹಾಂತಂ ಪುರುಷಂ ಬ್ರಹ್ಮ ಬ್ರಹ್ಮಾಣಂ ಸತ್ಯಮವ್ಯಯಮ್ ।
ತರುಣಾದಿತ್ಯಸಂಕಾಶಂ ಮಹೇಶಂ ವಿಶ್ವರೂಪಿಣಮ್ ॥ ೧೪ ॥

---

೧೧. ವಿಶ್ವಾತ್ಮನೆಂಬ ಹೆಸರುಳ್ಳ, ವಿಶ್ವಕ್ಕೆ ಕಾರಣನಾದ, ಸರ್ವಭೂತಗಳಿಗೆ ಅಂತರಾತ್ಮನಾದ ಮತ್ತು ಪರತಮಸ್ಸಿಗಿಂತ ಪೃಥಕ್ಕಾಗಿರುವ ಪರಮಾತ್ಮನನ್ನು ಹೃದಯಕಮಲವೆಂಬ ಆಧಾರದಲ್ಲಿ ಧ್ಯಾನಿಸಬೇಕು.

೧೨. ಮತ್ತು ಸಮಸ್ತ ಜಗತ್ತಿಗೆ ಆಧಾರನೂ, ಅವ್ಯಕ್ತನೂ, ಆನಂದರೂಪನೂ, ಪ್ರಕಾಶಮಯನೂ, ಶಾಶ್ವತನೂ, ಪ್ರಧಾನ ಪುರುಷ ವಿಲಕ್ಷಣನೂ, ಆಕಾಶಗುಹೆಯಲ್ಲಿ ವಾಸಿಸುವವನೂ, ಮತ್ತು ಶುಭಮಯನೂ ಆದ ಆತ್ಮನನ್ನು ಧ್ಯಾನಿಸಬೇಕು.

೧೩. ಸಮಸ್ತ ಭಾವವಸ್ತುಗಳ ಅಂತರ್ಯಾಮಿಯೂ, ಸರ್ವೇಶ್ವರನೂ, ಬ್ರಹ್ಮಸ್ವರೂಪನೂ, ಆದಿ-ಮಧ್ಯ-ಅಂತಗಳಿಂದ ವರ್ಜಿತನೂ, ಮತ್ತು ಆನಂದಮುಂತಾದ ಗುಣಗಳಿಗೆ ಆಧಾರಸ್ವರೂಪನೂ, ಆದ ಪರಮಾತ್ಮನನ್ನು ಧ್ಯಾನಿಸಬೇಕು.

೧೪. ಮತ್ತು ಮಹಾಪರಿಮಾಣದಿಂದ ಕೂಡಿದವನೂ, ಪೂರ್ಣಾಕಾರನೂ ಬ್ರಹ್ಮಸ್ವರೂಪನೂ, ಪರಿಚ್ಛೇದಾತೀತನೂ ಸತ್ಯಸ್ವರೂಪನೂ, ನಾಶವರ್ಜಿತನೂ ತರುಣ ಸೂರ್ಯನಂತೆ ಪ್ರಕಾಶವುಳ್ಳವನೂ, ಮಹೇಶ್ವರನೂ ಮತ್ತು ವಿಶ್ವರೂಪಿಯೂ ಆದ ಪರಮಾತ್ಮನನ್ನು ಧ್ಯಾನಿಸಬೇಕು.

ಓಂಕಾರೇಣಾಥ ಚಾತ್ಮಾನಂ ಸಂಸ್ಥಾಪ್ಯ ಪರಮಾತ್ಮನಿ ।
ಆಕಾಶೇ ದೇವಮೀಶಾನಂ ಧ್ಯಾಯೀತಾಕಾಶಮಧ್ಯಗಮ್ ॥ ೧೫ ॥

ಕಾರಣಂ ಸರ್ವಭಾವಾನಾಮಾನಂದೈಕಸಮಾಶ್ರಯಮ್ ।
ಪುರಾಣಂ ಪುರುಷಂ ಶುಭ್ರಂ ಧ್ಯಾಯನ್ಮುಚ್ಯೇತ ಬಂಧನಾತ್ ॥ ೧೬ ॥

ಯದ್ವಾ ಗುಹಾಯಾಂ ಪ್ರಕೃತಂ ಜಗತ್ಸಮ್ಮೋಹನಾಲಯೇ ।
ವಿಚಿಂತ್ಯ ಪರಮಂ ವ್ಯೋಮ ಸರ್ವಭೂತೈಕಕಾರಣಮ್ ॥ ೧೭ ॥

ಜೀವನಂ ಸರ್ವಭೂತಾನಾಂ ಯತ್ರ ಲೋಕಃ ಪ್ರಲೀಯತೇ ।
ಆನಂದಂ ಬ್ರಹ್ಮಣಃ ಸೂಕ್ಷ್ಮಂ ಯತ್ಪಶ್ಯಂತಿ ಮುಮುಕ್ಷವಃ ॥ ೧೮ ॥

---

೧೫. ಓಂಕಾರ ಧ್ಯಾನದಿಂದ ತನ್ನ ಆತ್ಮವನ್ನು ಪರಮಾತ್ಮನಲ್ಲಿ ಐಕ್ಯಾನುಸಂಧಾನದಿಂದ ಇರಿಸಿ ಪರಮಾಕಾಶಾಧಾರದಲ್ಲಿಯೂ ಆಕಾಶ ಮಧ್ಯದಲ್ಲಿಯೂ ಇರುವ ಸರ್ವೇಶ್ವರನಾದ ಮತ್ತು ಪ್ರಕಾಶಮಯನಾದ ಪರಮಾತ್ಮನನ್ನು ಧ್ಯಾನಿಸಬೇಕು.

೧೬. ಸಮಸ್ತಭಾವವಸ್ತುಗಳಿಗೆ ಕಾರಣವೂ, ಆನಂದಮಾತ್ರರೂಪಕ್ಕೆ ಆಧಾರವೂ, ಪುರಾಣ ಪುರುಷ ಸ್ವರೂಪವೂ, ಮತ್ತು ನಿರಂಜನವೂ ಆದ ಬ್ರಹ್ಮತತ್ವವನ್ನು ಧ್ಯಾನಿಸುವುದರಿಂದ ಬಂಧನದಿಂದ ಮುಕ್ತನಾಗುತ್ತಾನೆ.

೧೭. ಅಥವಾ ಜಗತ್ತನ್ನು ಮೋಹದಲ್ಲಿ ಮುಳುಗಿಸಿರುವ ವಾಸನಾಗ್ರಂಥಿಮಯವಾದ ಹೃದಯವೆಂಬ ಗುಹೆಯಲ್ಲಿ ಪರಮಾಕಾಶ ಸ್ವರೂಪವೂ, ಸಮಸ್ತ ಭೂತಗಳಿಗೆ ಕಾರಣವೂ ಆದ ಪ್ರಕೃತ ಪರಮಾತ್ಮ ವಸ್ತುವನ್ನು ಧ್ಯಾನಿಸಬೇಕು.

೧೮. ಸಮಸ್ತ ಭೂತಗಳ ಜೀವನಕ್ಕೆ ನಿಮಿತ್ತವೂ, ಸರ್ವಲೋಕಗಳ ಲಯಕ್ಕೆ ಅಧಿಷ್ಠಾನವೂ ಮತ್ತು ಬ್ರಹ್ಮವಸ್ತುವಿನ ಆನಂದಕ್ಕೆ ಆಶ್ರಯವೂ ಆದ ಸೂಕ್ಷ್ಮತತ್ವವನ್ನು ಮುಮುಕ್ಷು ಜನರು ಸಾಕ್ಷಾತ್ಕರಿಸುತ್ತಾರೆ.

ತನ್ಮಧ್ಯೇ ನಿಹಿತಂ ಬ್ರಹ್ಮ ಕೇವಲಂ ಜ್ಞಾನಲಕ್ಷಣಮ್ ।
ಅನಂತಂ ಸತ್ಯಮೀಶಾನಂ ವಿಚಿಂತ್ಯಾಸೀತ ಸಂಯತಃ ॥ ೧೯ ॥

ಗುಹ್ಯಾದ್ಗುಹ್ಯತಮಂ ಜ್ಞಾನಂ ಯತೀನಾಮೇತದೀರಿತಮ್ ।
ಯೋಽನುತಿಷ್ಠೇನ್ಮಹೇಶೇನ ಸೋಽಶ್ನುತೇ ಯೋಗಮೈಶ್ವರಮ್॥ ೨೦ ॥

ತಸ್ಮಾದ್ಧ್ಯಾನರತೋ ನಿತ್ಯಮಾತ್ಮವಿದ್ಯಾಪರಾಯಣಃ ।
ಜ್ಞಾನಂ ಸಮಾಶ್ರಯೇದ್ಬ್ರಾಹ್ಮಂ ಯೇನ ಮುಚ್ಯೇತ ಬಂಧನಾತ್ ॥

ಗತ್ವಾ ಪೃಥಕ್ ಸ್ವಮಾತ್ಮಾನಂ ಸರ್ವಸ್ಮಾದೇವ ಕೇವಲಮ್ ।
ಆನಂದಮಜರಂ ಜ್ಞಾನಂ ಧ್ಯಾಯೀತ ಚ ಪುನಃ ಪರಮ್ ॥ ೨೨ ॥

---

೧೯. ಆನಂದ ಧಾಮರೂಪವಾದ ಪದದಲ್ಲಿ ಇರಿಸಲ್ಪಟ್ಟಿರುವುದೂ, ಕೇವಲವಾಗಿ ಚೈತನ್ಯಮಾತ್ರ ರೂಪವೂ ಅಂತಶೂನ್ಯವೂ, ಸತ್ಯಸ್ವರೂಪವೂ, ಸರ್ವೇಶ್ವರ ರೂಪವೂ, ಆದ ಬ್ರಹ್ಮವಸ್ತುವನ್ನು ಧ್ಯಾನಿಸುತ್ತ ಜಿತೇಂದ್ರಿಯನಾಗಬೇಕು.

೨೦. ಯತಿಗಳಿಗೆ ಪರಮ ರಹಸ್ಯಗಳಿಗಿಂತಲೂ ಅಧಿಕರಹಸ್ಯವಾದ ಜ್ಞಾನವು ಈರೀತಿಯಾಗಿ ಹೇಳಲ್ಪಟ್ಟಿದೆ. ಈ ಜ್ಞಾನಯೋಗವನ್ನು ಆಚರಿಸಿದ ಯತಿಯು ಮಹೇಶ್ವರನೊಡನೆ ಈಶ್ವರಮಹಿಮೆಯ ಯೋಗವನ್ನು ಅನುಭವಿಸುತ್ತಾನೆ.

೨೧. ಆದುದರಿಂದ ಸಂತತವಾಗಿ ಧ್ಯಾನದಲ್ಲಿ ಆಸಕ್ತನೂ, ಆತ್ಮವಿದ್ಯೆಯಲ್ಲಿ ತತ್ಪರನೂ ಆಗಿ ಬ್ರಹ್ಮಜ್ಞಾನ ನಿಷ್ಠೆಯನ್ನು ಅವಲಂಬಿಸಬೇಕು. ಆದುದರಿಂದ ಸರ್ವಬಂಧಗಳಿಂದ ಮುಕ್ತಿಯನ್ನು ಹೊಂದುತ್ತಾನೆ.

೨೨. ಮೊದಲು ದೇಹೇಂದ್ರಿಯಾದಿಗಳಿಗಿಂತ ತನ್ನ ಆತ್ಮವನ್ನು ಪೃಥಕ್ಕಾಗಿ ತಿಳಿದು ಅಂತಹ ಸ್ವಾತ್ಮರೂಪದಲ್ಲಿ ಅದ್ವಿತೀಯವೂ, ಆನಂದಾತ್ಮಕವೂ, ಜರಾರಹಿತವೂ, ಜ್ಞಾನಮಯವೂ ಆದ ಪರತತ್ತ್ವವನ್ನು ಚಿಂತಿಸಬೇಕು.

ಯಸ್ಮಾದ್ಭವಂತಿ ಭೂತಾನಿ ಯದ್ಗತ್ವಾ ನೇಹ ಜಾಯತೇ ।
ಸ ತಸ್ಮಾದೀಶ್ವರೋ ದೇವಃ ಪರಸ್ಮಾದ್ಯೋಽಧಿತಿಷ್ಠತಿ ॥ ೨೩ ॥

ಯದಂತರೇ ತದ್ಗಮನಂ ಶಾಶ್ವತಂ ಶಿವಮುಚ್ಯತೇ ।
ಯದಾಹುಸ್ತತ್ಪರೋ ಯಃ ಸ್ಯಾತ್ ಸ ದೇವಸ್ತು ಮಹೇಶ್ವರಃ ॥ ೨೪ ॥

ವ್ರತಾನಿ ಯಾನಿ ಭಿಕ್ಷೂಣಾಂ ತಥೈವೋಪವ್ರತಾನಿ ಚ ।
ಏಕೈಕಾತಿಕ್ರಮೇ ತೇಷಾಂ ಪ್ರಾಯಶ್ಚಿತ್ತಂ ವಿಧೀಯತೇ ॥ ೨೫ ॥

ಉಪೇತ್ಯ ತು ಸ್ತ್ರಿಯಂ ಕಾಮಾತ್ ಕೃಚ್ಛ್ರಸಂಯತಮಾನಸಃ ।
ಪ್ರಾಣಾಯಾಮಸಮಾಯುಕ್ತಃ ಕುರ್ಯಾತ್ಸಾಂತಪನಂ ಶುಚಿಃ ॥ ೨೬ ॥

---

೨೩. ಹುಟ್ಟುವ ಪ್ರಾಣಿಗಳು ಯಾವ ಆತ್ಮನಿಂದ ಜನಿಸುತ್ತವೆಯೊ, ಯಾವ ಆತ್ಮನಲ್ಲಿ ಐಕ್ಯಹೊಂದಿದವನು ಪುನರ್ಜನ್ಮವನ್ನು ಹೊಂದುವುದಿಲ್ಲವೊ, ಅಂತಹ ಪರಮಾತ್ಮನು ಪರವಸ್ತುಗಳೆಲ್ಲಕ್ಕೂ ಪರನಾಗಿಯೂ, ಸರ್ವನಿಯಾಮಕನಾಗಿಯೂ ಇರುವನು.

೨೪. ಯಾವ ಆತ್ಮನಲ್ಲಿ ಐಕ್ಯಪ್ರಾಪ್ತಿಯು ಶಾಶ್ವತವೂ ಮಂಗಲಮಯವೂ ಆದ ಮುಕ್ತಿಯೆಂದು ವರ್ಣಿಸಲ್ಪಡುತ್ತಿದೆಯೊ, ಯಾವ ತತ್ತ್ವವನ್ನು ಪರತತ್ತ್ವವೆನ್ನುವರೊ, ಅಂತಹ ಪರಮಾತ್ಮನು ಅಧಿಕನಾದ ಮಹೇಶ್ವರದೇವನಾಗಿರುವನ್ನು

೨೫. ಭಿಕ್ಷುಗಳಿಗೆ ಯಾವ ಯಾವ ವ್ರತಗಳೂ, ಉಪವ್ರತಗಳೂ ವಿಹಿತವಾಗಿವೆಯೊ ಅವುಗಳಲ್ಲಿ ಒಂದೊಂದನ್ನು ಮಾತ್ರ ಉಲ್ಲಂಘಿಸಿದರೂ ತನ್ನಿಮಿತ್ತಕವಾಗಿ ಪ್ರಾಯಶ್ಚಿತ್ತವು ವಿಧಿಸಲ್ಪಟ್ಟಿದೆ.

೨೬. ಯತಿಯು ಕಾಮವಿಕಾರಕ್ಕೆ ವಶನಾಗಿ ಸ್ತ್ರೀಸಂಗವನ್ನು ಮಾಡಿದರೆ ಕೃಚ್ಛ್ರ ಪ್ರಾಯಶ್ಚಿತ್ತಾಚರಣೆಯಿಂದ ಜಯಿಸಿದ ಮಾನಸವುಳ್ಳವನೂ, ಪ್ರಾಣಾಯಾಮತತ್ಪರನೂ ಮತ್ತು ಪವಿತ್ರನೂ ಆಗಿ ಸಾಂತಪನ ಪ್ರಾಯಶ್ಚಿತ್ತವನ್ನು ಆಚರಿಸಬೇಕು.

ತತಶ್ಚರೇತ ನಿಯಮಾನ್ ಕೃಚ್ಛ್ರಂ ಸಂಯತಮಾನಸಃ ।
ಪುನರಾಶ್ರಮಮಾಗಮ್ಯ ಚರೇದ್ಭಿಕ್ಷುರತಂದ್ರಿತಃ ॥ ೨೭ ॥

ನ ನರ್ಮಯುಕ್ತಮನೃತಂ ಹಿನಸ್ತೀತಿ ಮನೀಷಿಣಃ ।
ತಥಾಪಿ ಚ ನ ಕರ್ತವ್ಯಂ ಪ್ರಸಂಗೋ ಹ್ಯೇಷ ದಾರುಣಃ ॥ ೨೮ ॥

ಏಕರಾತ್ರೋಪವಾಸಶ್ಚ ಪ್ರಾಣಾಯಾಮಶತಂ ತಥಾ ।
ಕರ್ತವ್ಯಂ ಯತಿನಾ ಧರ್ಮಲಿಪ್ಸುನಾ ಪರಮವ್ಯಯಮ್ ॥ ೨೯ ॥

ಗತೇನಾಪಿ ನ ಕಾರ್ಯಂಶೇ ನ ಕಾರ್ಯಂ ಸ್ತೈನ್ಯಮನ್ಯತಃ ।
ಸ್ತೇಯಾದಭ್ಯಧಿಕಃ ಕಶ್ಚಿನ್ನಾಸ್ತ್ಯಧರ್ಮ ಇತಿ ಸ್ಮೃತಿಃ
ಹಿಂಸಾ ಚೈಷಾ ಪರಾ ದಿಷ್ಟಾ ಯಾ ಚಾತ್ಮಜ್ಞಾನನಾಶಿಕಾ । ॥ ೩೦ ॥

---

೨೭. ತರುವಾಯ ಭಿಕ್ಷುವು ಜಿತವಾದ ಮಾನಸವುಳ್ಳವನಾಗಿ ನಿಯಮದಿಂದ ಕೃಚ್ಛ್ರವನ್ನು ಆಚರಿಸಿ ಆಲಸ್ಯವಿಲ್ಲದೆ ಮತ್ತೆ ಯಥಾವಿಧಿಯಾಗಿ ಆಶ್ರಮವನ್ನು ಸ್ವೀಕರಿಸಿ ಸ್ವಧರ್ಮದಲ್ಲಿ ವರ್ತಿಸಬೇಕು.

೨೮. ಲೀಲಾ ವಿನೋದಗಳಿಂದ ಕೂಡಿದ ನರ್ಮೋಕ್ತಿರೂಪವಾದ ಅನೃತವು ಹಿಂಸಾರೂಪವಲ್ಲವೆಂದು ವಿದ್ವಾಂಸರು ಹೇಳುವರು. ಆದರೂ ಅನೃತವನ್ನು ಆಡ ಬಾರದು. ಅನೃತವಚನವು ಯಾವಾಗಲೂ ಭಯಂಕರವಾದ ಪ್ರಸಂಗವಾಗಿದೆ.

೨೯. ಧರ್ಮಾರ್ಜನೆಯ ಅಭಿಲಾಷೆಯುಳ್ಳ ಯತಿಯಿಂದ ಏಕರಾತ್ರೋಪ ವಾಸವೂ ಒಂದುನೂರು ಪ್ರಾಣಾಯಾಮಗಳೂ ಮಾಡಲ್ಪಡಬೇಕು. ಈ ಅನು ಷ್ಠಾನವು ಶಾಶ್ವತವಾದ ಉತ್ತಮ ಸಾಧನವಾಗಿದೆ

೩೦. ಎಂತಹ ಆಪತ್ಕಾಲವನ್ನು ಹೊಂದಿದವನಾದರೂ ಪರರ ಸ್ವತ್ತಿನ ವಿಷಯದಲ್ಲಿ ಚೋರವೃತ್ತಿಯನ್ನು ಆಚರಿಸಬಾರದು. ಚೌರ್ಯಕ್ಕಿಂತ ಹೆಚ್ಚಾಗಿ ಅಧರ್ಮವು ಬೇರೊಂದು ಇಲ್ಲವೆಂದು ಸ್ಮೃತಿಯು ಬೋಧಿಸುತ್ತಿದೆ. ಚೌರ್ಯವೆಂಬುದು ಒಂದು ದೊಡ್ಡ ಹಿಂಸಾತ್ಮಕವಾದ ಪಾಪಕೃತ್ಯವೆಂದು ಹೇಳಲ್ಪಟ್ಟಿದೆ. ಇದು ಆತ್ಮ ಜ್ಞಾನಕ್ಕೆ ಭಂಗವನ್ನು ತರುವುದು.

ಯದೇತದ್ದ್ರವಿಣಂ ನಾಮ ಪ್ರಾಣಾ ಹ್ಯೇತೇ ಬಹಿಶ್ಚರಾಃ
ಸ ತಸ್ಯ ಹರತಿ ಪ್ರಾಣಾನ್ ಯೋ ಯಸ್ಯ ಹರತೇ ಧನಮ್ । ॥ ೩೧ ॥

ಏವಂ ಕೃತ್ವಾ ಸುದುಷ್ಟಾತ್ಮಾ ಭಿನ್ನವೃತ್ತೋ ವ್ರತಾಹತಃ
ಭೂಯೋ ನಿರ್ವೇದಮಾಪನ್ನಶ್ಚರೇಚ್ಚಾಂದ್ರಾಯಣವ್ರತಮ್ ॥ ೩೨ ॥

ವಿಧಿನಾ ಶಾಸ್ತ್ರದೃಷ್ಟೇನ ಸಂವತ್ಸರಮಿತಿ ಶ್ರುತಿಃ
ಭೂಯೋ ನಿರ್ವೇದಮಾಪನ್ನಶ್ಚರೇದ್ಭಿಕ್ಷುರತಂದ್ರಿತಃ ॥ ೩೩ ॥

ಅಕಸ್ಮಾದೇವ ಹಿಂಸಾಂ ತು ಯದಿ ಭಿಕ್ಷುಃ ಸಮಾಚರೇತ್
ಕುರ್ಯಾತ್ ಕೃಚ್ಛ್ರಾತಿಕೃಚ್ಛ್ರಂ ತು ಚಾಂದ್ರಾಯಣಮಥಾಪಿ ವಾ ।

---

೩೧. ಧನವೆಂಬುದು ಧನಸ್ವಾಮಿಗೆ ಶರೀರದ ಹೊರಗೆ ಸಂಚರಿಸುವ ಪ್ರಾಣಗಳ ರೂಪದಲ್ಲಿರುವುದು. ಯಾವನು ಯಾವ ಸ್ವಾಮಿಯ ಧನವನ್ನು ಅಪಹರಿಸುವನೊ, ಅವನು ಆ ಸ್ವಾಮಿಯ ಪ್ರಾಣಗಳನ್ನು ಅಪಹರಿಸಿದಂತೆ ಆಗುವುದು.

೩೨. ಇಂತಹ ಚೋರತನವನ್ನು ಮಾಡಿ ನಿಷಿದ್ಧಾಚರಣೆಯಿಂದ ವ್ರತಭ್ರಷ್ಟನಾದ, ದುಷ್ಟಬುದ್ಧಿಯುಳ್ಳ ಯತಿಯು ಆ ಪಾಪವನ್ನು ತಿಳಿದು ಮತ್ತೆ ಪಶ್ಚಾತ್ತಾಪವನ್ನು ಹೊಂದಿ ಚಾಂದ್ರಾಯಣ ವ್ರತವೆಂಬ ಪ್ರಾಯಶ್ಚಿತ್ತವನ್ನು ಆಚರಿಸಬೇಕು.

೩೩. ಶಾಸ್ತ್ರದಲ್ಲಿ ಉಪದೇಶಿಸಲ್ಪಟ್ಟಿರುವ ವಿಧಾನದಿಂದ ಒಂದು ಸಂವತ್ಸರ ಪೂರ್ತಿಯಾಗಿ ಆ ಪ್ರಾಯಶ್ಚಿತ್ತವನ್ನು ಆಚರಿಸಬೇಕು. ಮತ್ತು ಆಲಸ್ಯವನ್ನು ತ್ಯಜಿಸಿ ಮತ್ತೆ ನಿರ್ವೇದದಿಂದ ಭಿಕ್ಷುವಾಗಿ ಸಂಚರಿಸಬೇಕು.

೩೪. ಭಿಕ್ಷುವು ಆಕಸ್ಮಿಕವಾಗಿ ಹಿಂಸೆಯನ್ನು ಆಚರಿಸುವುದಾದರೆ ಆ ಪಾಪದ ಪರಿಹಾರಕ್ಕೆ ಕೃಚ್ಛ್ರ ಅತಿಕೃಚ್ಛ್ರ ಮತ್ತು ಚಾಂದ್ರಾಯಣ ಪ್ರಾಯಶ್ಚಿತ್ತಗಳನ್ನು ಆಚರಿಸಬೇಕು.

ಸ್ಕನ್ನಮಿಂದ್ರಿಯದೌರ್ಬಲ್ಯಾತ್ ಸ್ತ್ರಿಯಂ ದೃಷ್ಟ್ವಾ ಯತಿರ್ಯದಿ
ತೇನ ಧಾರಯಿತವ್ಯಾ ವೈ ಪ್ರಾಣಾಯಾಮಾಸ್ತು ಷೋಡಶ । ॥೩೫॥

ದಿವಾ ಸ್ಕನ್ನೇ ತ್ರಿರಾತ್ರಂ ಸ್ಯಾತ್ ಪ್ರಾಣಾಯಾಮಶತಂ ತಥಾ ॥೩೬॥

ಏಕಾಂತೇ ಮಧುಮಾಂಸೇ ಚ ನವಶ್ರಾದ್ಧೇ ತಥೈವ ।
ಪ್ರತ್ಯಕ್ಷಲವಣೇ ಪ್ರೋಕ್ತಂ ಪ್ರಾಜಾಪತ್ಯಂ ವಿಶೋಧನಮ್ ॥ ೩೭ ॥

ಧ್ಯಾನನಿಷ್ಠಸ್ಯ ಸತತಂ ನಶ್ಯತೇ ಸರ್ವಪಾತಕಮ್ ।
ತಸ್ಮಾನ್ಮಹೇಶ್ವರಂ ಜ್ಞಾತ್ವಾ ತದ್ಧ್ಯಾನಪರಮೋ ಭವೇತ್ ॥ ೩೮ ॥

ಯದ್ಬ್ರಹ್ಮ ಪರಮಂ ಜ್ಯೋತಿಃ ಪ್ರತಿಷ್ಠಾಕ್ಷರಮವ್ಯಯಮ್ ।
ಯೋಽನ್ತರಾ ಪರಮಂ ಬ್ರಹ್ಮ ಸ ವಿಜ್ಞೇಯೋ ಮಹೇಶ್ವರಃ ॥ ೩೯ ॥

---

೩೫. ಯತಿಯಾದವನಿಗೆ ಸ್ತ್ರೀಯನ್ನು ನೋಡಿ ಇಂದ್ರಿಯದ ದುರ್ಬಲತೆಯಿಂದ ಇಂದ್ರಿಯ ಸ್ಖಲನೆಯಾದರೆ ಆಗ ಯತಿಯು ಹದಿನಾರು ಸಂಖ್ಯೆಯಷ್ಟು ಪ್ರಾಣಾಯಾಮಗಳನ್ನು ಮಾಡಬೇಕು.

೩೬. ಹಾಗು ಹಗಲು ಸಮಯದಲ್ಲಿ ಸ್ತ್ರೀ ದರ್ಶನದಿಂದ ಹೃದಯವು ವಿಕಾರ ಹೊಂದಿ ಇಂದ್ರಿಯಸ್ಖಲನವಾದರೆ ಮೂರು ದಿನಗಳವರೆಗೆ ಒಂದುನೂರು ಪ್ರಾಣಾಯಮಗಳನ್ನು ಆಚರಿಸಬೇಕು.

೩೭. ಮತ್ತು ಅಂಗನೆಯೊಡನೆ ಏಕಾಂತಸೇವನೆ, ಮಧು-ಮಾಂಸಗಳ ಭೋಜನ, ನವಶ್ರಾದ್ಧಾನ್ನ ಭೋಜನ, ಹಾಗು ಪ್ರತ್ಯಕ್ಷವಾಗಿ ಲವಣ ಭಕ್ಷಣ- ಈ ನಿಮಿತ್ತಗಳಲ್ಲಿ ಪ್ರಾಜಾಪತ್ಯ ಪ್ರಾಯಶ್ಚಿತ್ತವು ಕರ್ತವ್ಯವಾಗಿದೆ.

೩೮. ಧ್ಯಾನನಿಷ್ಠೆಯುಳ್ಳ ಯೋಗಿಗೆ ಯೋಗಬಲದಿಂದ ಸಮಸ್ತಪಾತಕವೂ ಯಾವಾಗಲೂ ನಾಶಹೊಂದುವುದು. ಆದ್ದರಿಂದ ಮಹೇಶ್ವರ ದೇವನನ್ನು ಪರಮಾರ್ಥವಾಗಿ ತಿಳಿದು ಧ್ಯಾನದಲ್ಲಿ ಆಸಕ್ತನಾಗಬೇಕು.

೩೯. ಯಾವ ಬ್ರಹ್ಮತತ್ತ್ವವು ಶ್ರೇಷ್ಠವೂ, ಜ್ಯೋತಿರೂಪವೂ, ಸಕಲ ವಸ್ತುಗಳಿಗೆ ಆಧಾರವೂ, ನಾಶವರ್ಜಿತವೂ, ವಿಕಾರಶೂನ್ಯವೂ ಮತ್ತು ಸಮಸ್ತ ಭೂತಗಳಲ್ಲಿ ಅಂತರ್ಯಾಮಿಯೂ ಆಗಿದೆಯೊ ಅಂತಹ ಪರಮತತ್ತ್ವರೂಪಿಯಾದ ಮಹೇಶ್ವರನನ್ನು ತಿಳಿಯಬೇಕು.

ಏಷ ದೇವೋ ಮಹಾದೇವಃ ಕೇವಲಃ ಪರಮಃ ಶಿವಃ ।
ತದೇವಾಕ್ಷರಮದ್ವೈತಂ ತದಾದಿತ್ಯಾಂತರಂ ಪರಮ್ ॥ ೪೦ ॥

ಯಸ್ಮಾನ್ಮಹೀಯಸೋ ದೇವಃ ಸ್ವಧಾಗ್ನಿಜ್ಞಾನಸಂಸ್ಥಿತೇ ।
ಆತ್ಮಯೋಗಾಖ್ಯೇ ತತ್ತ್ವೇ ಮಹಾದೇವಸ್ತತಃ ಸ್ಮೃತಃ ॥ ೪೧ ॥

ನಾನ್ಯಂ ದೇವಂ ಮಹಾದೇವಾದ್ವ್ಯತಿರಿಕ್ತಂ ಪ್ರಪಶ್ಯತಿ ।
ತಮೇವಾತ್ಮಾನಮಾತ್ಮೇತಿ ಯಃ ಸ ಯಾತಿ ಪರಂ ಪದಮ್ ॥ ೪೨ ॥

ಮನ್ಯಂತೇ ಯೇ ಸ್ವಮಾತ್ಮಾನಂ ವಿಭಿನ್ನಂ ಪರಮೇಶ್ವರಾತ್ ।
ನ ತೇ ಪಶ್ಯಂತಿ ತಂ ದೇವಂ ವೃಥಾ ತೇಷಾಂ ಪರಿಶ್ರಮಃ ॥ ೪೩ ॥

---

೪೦. ಪರಮಾತ್ಮನು ಮಹಾದೇವನೂ, ಪ್ರಕಾಶಸ್ವರೂಪನೂ, ಅದ್ವಿತೀಯನೂ, ಸರ್ವೋತ್ತಮನೂ, ಮಂಗಲಮಯನೂ, ಅಕ್ಷರಸ್ವರೂಪನೂ, ಅದ್ವೈತಾತ್ಮಕನೂ, ಮತ್ತು ಆದಿತ್ಯಮಂಡಲದಲ್ಲಿರುವವನೂ ಆಗಿದ್ದಾನೆ.

೪೧. ಯಾವ ಕಾರಣದಿಂದ ಪರಮಾತ್ಮನು ಚಂದ್ರಲೋಕದಲ್ಲಿರುವ ಪಿತೃದೇವತೆಗಳಿಗೆ ಭೋಜ್ಯವಾದ ಅಮೃತ. ಕರ್ಮದೇವತೆಯಾದ ಅಗ್ನಿ ಮತ್ತು ಜ್ಞಾನಪ್ರಕಾಶಮಯ ಆತ್ಮಯೋಗವೆಂಬ ತತ್ತ್ವದಲ್ಲಿದ್ದು ಮಹತ್ತಾದ ಎಲ್ಲ ವಸ್ತುಗಳಿಗಿಂತ ಮಹತ್ತಾಗಿರುವನೊ, ಆದರಿಂದ ಮಹಾದೇವನೆಂದು ಕರೆಯಲ್ಪಡುವನು.

೪೨. ಯೋಗಿಯು ಅಂತಹ ಮಹಾದೇವನನ್ನು ಬಿಟ್ಟು ಬೇರೊಬ್ಬ ದೇವನನ್ನು ತಿಳಿಯುವುದಿಲ್ಲ: ಆ ಮಹಾದೇವನನ್ನು ತನ್ನ ಆತ್ಮನೆಂದು ತಿಳಿದ ಜ್ಞಾನಿಯು ಪರಮಪದವನ್ನು ಹೊಂದುತ್ತಾನೆ.

೪೩. ಯಾವ ಮಾನವರು ಪರಮೇಶ್ವರನಿಗಿಂತ ತಮ್ಮ ಆತ್ಮವನ್ನು ಭಿನ್ನವಾದುದೆಂದು ತಿಳಿದಿರುವರೊ, ಅವರು ಪರಮಾತ್ಮನನ್ನು ಎಂದಿಗೂ ಸಾಕ್ಷಾತ್ಕರಿಸಲಾರರು. ಅವರ ಪರಿಶ್ರಮವು ವ್ಯರ್ಥವಾಗುವುದು.

ಏಕಂ ಬ್ರಹ್ಮ ಪರಂ ಬ್ರಹ್ಮ ಜ್ಞೇಯಂ ತತ್ತ್ವಮವ್ಯಯಮ್ ।
ಸ ದೇವಸ್ತು ಮಹಾದೇವೋ ನೈತದ್ವಿಜ್ಞಾಯ ಬಾಧ್ಯತೇ ॥ ೪೪ ॥

ತಸ್ಮಾದ್ಯಜೇತ ನಿಯತಂ ಯತಿಃ ಸಂಯತಮಾನಸಃ ।
ಜ್ಞಾನಯೋಗರತಃ ಶಾಂತೋ ಮಹಾದೇವಪರಾಯಣಃ ॥ ೪೫ ॥

ಏಷ ವಃ ಕಥಿತೋ ವಿಪ್ರಾ ಯತೀನಾಮಾಶ್ರಮಃ ಶುಭಃ ।
ಪಿತಾಮಹೇನ ವಿಭುನಾ ಮುನೀನಾಂ ಪೂರ್ವಮೀರಿತಮ್ ॥ ೪೬ ॥

ನಾತ್ರ ಶಿಷ್ಯಸ್ಯ ಯೋಗಿಭ್ಯೋ ದದ್ಯಾದಿದಮನುತ್ತಮಮ್ ।
ಜ್ಞಾನಂ ಸ್ವಯಂಭುವಾ ಪ್ರೋಕ್ತಂ ಯತಿಧರ್ಮಾಶ್ರಯಂ ಶಿವಮ್॥೪೭॥

---

೪೪. ಪರಬ್ರಹ್ಮನು ಅದ್ವಿತೀಯವಾದ ಬ್ರಹ್ಮತತ್ತ್ವವಾಗಿದೆ. ಆ ಪರಮಾರ್ಥತತ್ವವು ತಿಳಿಯಲ್ಪಡಬೇಕು. ಆ ದೇವನು ಮಹಾದೇವರೂಪಿಯಾಗಿರುವನು. ಈ ತತ್ವವನ್ನು ತಿಳಿದವನು ನಾಶಹೊಂದುವುದಿಲ್ಲ.

೪೫. ಆದುದರಿಂದ ಜಿತವಾದ ಅಂತಃಕರಣವುಳ್ಳ ಯತಿಯು ತಪ್ಪದೆ ಮಹೇಶ್ವರನನ್ನು ಅರ್ಚಿಸಬೇಕು. ಮತ್ತು ಜ್ಞಾನಯೋಗದಲ್ಲಿ ಆಸಕ್ತನೂ, ಶಾಂತನೂ ಮತ್ತು ಮಹಾದೇವನಲ್ಲಿ ನಿಷ್ಠೆಯುಳ್ಳವನೂ, ಆಗಿರಬೇಕು.

೪೬. ವಿಪ್ರರೆ! ಸರ್ವಶಕ್ತನಾದ ಬ್ರಹ್ಮದೇವನಿಂದ ಪೂರ್ವಕಾಲದಲ್ಲಿ ಮುನಿಗಳಿಗೆ ಉಪದೇಶಿಸಲ್ಪಟ್ಟಿರುವ ಶುಭಕರವಾದ ಯತಿಗಳ ಆಶ್ರಮಧರ್ಮವು ಈರೀತಿಯಾಗಿ ನನ್ನಿಂದ ನಿಮಗೆ ಉಪದೇಶಿಸಲ್ಪಟ್ಟಿದೆ.

೪೭. ಈ ಯತಿಧರ್ಮದ ವಿಷಯದಲ್ಲಿ ಬ್ರಹ್ಮದೇವನಿಂದ ಉಪದೇಶಿಸಲ್ಪಟ್ಟಿರುವ ಮಂಗಳಕರವಾದ ಈ ಉತ್ತಮ ಜ್ಞಾನವನ್ನು ಪುತ್ರ-ಶಿಷ್ಯ ಮುಂತಾದ ಸತ್ಪಾತ್ರರಿಲ್ಲದ ಯೋಗಿಗಳಿಗೆ ಬೋಧಿಸಬಾರದು.

